# ತುಂಬಿದ ಮನೆ

ಕೃಷ್ಣಮೂರ್ತಿ ಪುರಾಣಿಕ

ಸುದರ್ಶನ ಪ್ರಕಾಶನ
ತಾರಾನಿವಾಸ :: ತಿಪಟೂರು

ಸುದರ್ಶನ ಪ್ರಕಟನೆ ನಲವತ್ತಮೂರು
ಸುದರ್ಶನ ಕಾದಂಬರಿ ಮೂವತ್ತ ಒಂದು

ಪ್ರಥಮ ಮುದ್ರಣ : ಎಪ್ರಿಲ್ ೧೯೫೮



ಮುಖಚಿತ್ರ :
**ಎಸ್. ಎಲ್. ನಾರಾಯಣ್**

**ಬೆಲೆ: ಒಂದೂವರೆ ರೂಪಾಯಿ**

ಮುದ್ರಣ :
ಇಂಡಿಯಾ ಪ್ರೆಸ್, ಮೈಸೂರು

# ಅರಿಕೆ

ನನ್ನ ಸ್ನೇಹಿತರೂ, ಸುದರ್ಶನ ಪ್ರಕಾಶನದ ಯಜಮಾನರೂ ಆದ ಶ್ರೀ. ತಾ. ರಾ. ನಾಗರಾಜ ಮತ್ತು ಶಕುಂತಲಾ ನಾಗರಾಜ ಅವರು ಈ '**ತುಂಬಿದ ಮನೆ**'ಯನ್ನು ಪ್ರಕಟಿಸುತ್ತಿರುವದು ನನಗೆ ಸಂತೋಷದ ವಿಷಯವೇ ಆಗಿದೆ. ಇದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ.

ನನ್ನ ಓದುಗ ಬಳಗವು ಈ ಕಾದಂಬರಿಯನ್ನೂ ಮೊದಲಿನ ಔದಾರ್ಯ ದಿಂದಲೇ ಬರಮಾಡಿಕೊಳ್ಳುವದೆಂದು ನಂಬಿದ್ದೇನೆ. ನನ್ನ ಬರಹ ಪ್ರೋತ್ಸಾಹನಕ್ಕೆ ಈ ಬಳಗವು ಸ್ಫೂರ್ತಿಯ ಸೆಲೆಯಾಗಿದೆ.

ಮಗಳು ಚಿ|| ಗೌರಿಗೆ ಈ ಕೃತಿ ಕಾಣಿಕೆ.

ಅಚ್ಚುಕಟ್ಟಾಗಿ ಮುದ್ರಿಸಿದ ಮುದ್ರಣ ಬಳಗದವರಿಗೂ, ಸುಂದರವಾದ ಮುಖಚಿತ್ರ ಬರೆದುಕೊಟ್ಟ ಕಲಾವಿದರಿಗೂ ನಾನು ಋಣಿಯಾಗಿದ್ದೇನೆ.

ಸಾಹಿತ್ಯ ಸೇವಾಮಂದಿರ
ಗೋಕಾಕ
೨೬-೧-೧೯೬೮

**ಕೃಷ್ಣಮೂರ್ತಿ ಪುರಾಣಿಕ**

# ಇದೇ ಲೇಖಕರ ಇತರ ಕೃತಿಗಳು

---

ರಾಮೂನ ಕತೆಗಳು
ಸೈರಂಧ್ರಿ ಹಾಗೂ ಮಗನ ಗೆಲುವು
ಬಾಳ ಕನಸು
ದೊರೆಸಾನಿ
ರಾಧೇಯ
ಜೀವನಾದ
ಮದುವೆಯ ಆಟ

**ಕಾದಂಬರಿಗಳು**

ಮುಗಿಲ ಮಲ್ಲಿಗೆ*
ಕೊನೆಯ ದಾರಿ*
ತೆರೆದ ಕಣ್ಣು
ಮಂಜುಳಾ (ಎರಡನೆಯ ಮುದ್ರಣ)
ಹೊಸಬಾಳು (ಎರಡನೆಯ ಮುದ್ರಣ)
ಹಬ್ಬಿದ ಬಳ್ಳಿ*
ಮುತ್ತೈದೆ (ಎರಡನೆಯ ಮುದ್ರಣ)
ಬೆವರಿನ ಬೆಲೆ
ಮನೆ ತುಂಬಿದ ಹೆಣ್ಣು (ಎರಡನೆಯ ಮುದ್ರಣ)
ಭಾಗೀರಥಿ (ಎರಡನೆಯ ಮುದ್ರಣ)
ಕವಲು ದಾರಿ (ಎರಡನೆಯ ಮುದ್ರಣ)
ಮಣ್ಣಿನ ಮಗಳು*
ವೇಷಧಾರಿ
ಕುಲವಧು
ಮನಸೋತ ಮನದನ್ನೆ
ಧರ್ಮದೇವತೆ
ಮದುವೆಯ ಹಾಡು
ರಂಗರೋಹಿಣಿ
ಮಂಗಲಾಕ್ಷತೆ

* ಈ ಗುರುತು ಮಾಡಿದ ಪುಸ್ತಕಗಳು ಪುನರ್ಮುದ್ರಣ ನಡೆಯಲಿದೆ

೧

ಭಾವೂರಾಯರದು ಜಮೀನುದಾರಿ ಮನೆತನ.

ತಲೆಮಾರುಗಳಿಂದ ಬಾಳಿತು ತಿಂದ ಮನೆತನ ಅದು. ಇದು ಈ ಮನೆತನದ ಪೀಳಿಗೆಗೆ ಕ್ರಮಪ್ರಾಪ್ತವಾಗಿ ಬರುವ ಅಧಿಕಾರವೆಂಬ ಮನೋಭಾವವೇ ಭಾವೂರಾಯರದೂ ಆಗಿತ್ತು.

ಈ ಹಳ್ಳಿಯಲ್ಲಿ ಇವರ ಮನೆಯೇ ದೊಡ್ಡದು. ಇದಕ್ಕೆ ಕಾರಣವೂ ಇಲ್ಲದಿರಲಿಲ್ಲ. ತಲೆಮಾರುಗಳಿಂದ ಈ ಮನೆತನದವರೇ ಆ ಹಳ್ಳಿಯ ಗೌಡರೂ ಆಗಿದ್ದರು. ಶಾನುಭೋಗರೂ ಆಗಿದ್ದರು. ಸ್ವತಃ ಇವರು ಯಾವ ಕೆಲಸ ಮಾಡದಿದ್ದರೂ ಎಲ್ಲವೂ ಇವರ ಹೆಸರಿನ ಮೇಲೆಯೇ ಸಾಗುತ್ತಿತ್ತು.

ಇದಕ್ಕಾಗಿ ಸಾಮಾನ್ಯವಾಗಿ ಈ ಮನೆಯಲ್ಲಿ ಜನರು ಯಾವಾಗಲೂ ಇರುತ್ತಿದ್ದರು. ಈ ಕಾರಣಕ್ಕಾಗಿಯಾದರೂ ಆ ಮನೆ ಬಹಳ ವಿಶಾಲವಾಗಿರಬೇಕಾಗಿತ್ತು. ಬಹಳ ಜನಸಂದಣಿಯನ್ನು ಮನೆಯಲ್ಲಿ ಸೇರಿಸಿಕೊಳ್ಳುವದು ಕೂಡ ದೊಡ್ಡಸ್ತನದ ಲಕ್ಷಣವೆಂದು ಈ ಮನೆತನದವರು ತಿಳಿದಿದ್ದರು. ಈ ಮನೆತನದ ದೊಡ್ಡಸ್ತನದ ಇತಿಹಾಸವನ್ನು ಮುದುಕರಾದವರು ಒಮ್ಮೊಮ್ಮೆ ಪಿಸುಮಾತಿನಲ್ಲಿ ಮೊಮ್ಮಕ್ಕಳ ಮುಂದೆ ಹೇಳುತ್ತಿದ್ದುದೂ ಉಂಟು. ಈ ಇತಿಹಾಸದ ಘನತೆ ಈ ಮನೆತನದ ಬಗ್ಗೆ ವಿಚಿತ್ರ ಅನುಭವವನ್ನೂ ತರುತ್ತಿತ್ತು.

ದುರ್ಗದ ಹೆಬ್ಬಾಗಿಲಿನಂತೆ ಈ ಮನೆಯ ಹೆಬ್ಬಾಗಿಲು ವಿಶಾಲವಾಗಿತ್ತು, ಅದರ ಬಾಗಿಲ ಫಳಿಗಳನ್ನು ನೂಗಿಸಲು ಸಾಮಾನ್ಯರಿಗೆ ಸಾಧ್ಯವಿರಲಿಲ್ಲ. ಅಷ್ಟು ಭದ್ರವಾದ ಬಾಗಿಲುಗಳು ಅವು. ಸುತ್ತಲೂ ಕಲ್ಲುಗಳ ಗೋಡೆ. ಗಚ್ಚುಸಿಮೆಂಟುಗಳಿಂದ ಅವು ಇನ್ನಷ್ಟು ಭದ್ರವಾಗಿದ್ದವು. ಅಲ್ಲಲ್ಲಿ ಚಿಕ್ಕ ಚಿಕ್ಕ ಕಬ್ಬಿಣದ ಕಿಡಕಿಗಳು. ಈ ಮನೆಯಲ್ಲಿ ನಾಳಿಯಾಡಲೂ ಅವಕಾಶವಿದೆ ಎಂದು ತೋರಿಸುತ್ತಿದ್ದವು.

ಹೊರಗಿನ ಈ ಭದ್ರತೆಯೇ ಒಳಗೂ ಇತ್ತು. ದೊಡ್ಡ ದೊಡ್ಡ ಸಾಗವಾನಿ ಮುಂಡಿಗೆಗಳನ್ನೇ ತೊಲೆ, ಕಂಬಗಳನ್ನಾಗಿ ಮಾಡಲಾಗಿರುವಂತೆ ಅವು ಅಷ್ಟು ದಪ್ಪವಾಗಿದ್ದವು. ಜಂತಿಗಳೂ ದೊಡ್ಡವು. ನಾಗವಂದಿಯ

ಫಳಿಗಳೂ ದಪ್ಪವಾದವು. ಜಂತಿಗಳಿಗೆ ಜೋಡಿಸಿದ ಫಳಿಗಳೂ ದಪ್ಪವಾದವು ಗಳು. ಹೀಗೆ ಆ ಮನೆ ವಿಶಾಲವಾದ ಕಬ್ಬಿಣದ ಪೆಟ್ಟಿಗೆಯಾಗಿತ್ತು.

ಹೆಬ್ಬಾಗಿಲವನ್ನು ದಾಟಿ ಒಳಗೆ ಹೋದಕೂಡಲೇ ಭವ್ಯವಾದ ಎರಡು ಚೌಸಪ್ಪೆಯ ಪಡಸಾಲೆಗಳು ಎರಡೂ ಬದಿಗೆ ಕಾಣುತಿರುವವು. ಅಲ್ಲಿ ಅನೇಕ ಗಡಗಂಜಿಗಳ ಮೇಲೆ ಧಾನ್ಯದ ಚೀಲಗಳ ರಾಶಿ ಯಾವಾಗಲೂ ಕಾಣುತ್ತಿತ್ತು. ಅದೊಂದು ಬಯಲು ಸಂಗ್ರಾಣವೇ ಆಗಿತ್ತು. ಎದುರಿಗಿನ ಪಡಸಾಲೆಯೂ ಅಷ್ಟೇ ವಿಸ್ತಾರವಾದುದು. ಅಲ್ಲಿ ಗೋಡೆಗಳ ಮೇಲೆ ಈ ಗೌಡರ ಹಿರಿಯರ ಚಿತ್ರಗಳನ್ನು ತೂಗಹಾಕಲಾಗಿತ್ತು. ತಲೆಯ ಮೇಲೆ ಪುಣೇರಿ ಪಗಡಿಯನ್ನು ಹಾಕಿಕೊಂಡು, ಕಿವಿಗಳಲ್ಲಿ ಚೌಕುಳಿಯನ್ನು ಓಲಾಡಿ ಸುತ್ತಿರುವ ದಪ್ಪ ಮೀಸೆಯ ದೊಡ್ಡ ಮುಖಗಳೇ ಅವು. ಒಂದೇಸವನೇ ಆ ಚಿತ್ರಗಳನ್ನು ನೋಡಿದರೆ ಭಯ ಬರುತ್ತಿತ್ತು.

ಪಡಸಾಲೆಯ ಒಂದು ಮೂಲೆಯಲ್ಲಿ ಒಂದು ಚೌಕವನ್ನು ಹಾಸಿ ಕೊಂಡು, ಮುಂದೆ ಒಂದು ಫಳಿಯ ಪೆಟ್ಟಿಗೆಯನ್ನು ಇಟ್ಟುಕೊಂಡು, ಅದರ ಬದಿಗೆ ಕರಿ ಮಸಿಯ ಹಿತ್ತಾಳೆಯ ಮುಸಿಕುಡಿಕೆಯನ್ನೂ, ಕಲಮುಗಳನ್ನೂ ಇಟ್ಟುಕೊಂಡು ಕುಳಿತವನು ಗೌಡರ ಕಾರಭಾರಿಯಾಗಿ ಅಲ್ಲಿಯೇ ಮೆರೆಯು ತ್ತಿದ್ದನು. ಅದು ಕಾರಭಾರಿ ಕೂಡುವ ಸಾಧನವಾಗಿ ಮೂರು ತಲೆಮಾರು ಗಳಿಂದಲೂ ಶೋಭಿಸುತ್ತಿತ್ತು. ಈ ಕಾರಭಾರಿಗೆ ಗೌಡರು ಯಾವ ಸಂಬಳವನ್ನೂ ಕೊಡುತ್ತಿರಲಿಲ್ಲ. ಆದರೆ ಅವನ ಉತ್ಪನ್ನ ಸಾಕಷ್ಟು ಸಿಗುವ ಏರ್ಪಾಡನ್ನು ಮಾಡಲಾಗಿತ್ತು. ಹಳ್ಳಿಯ ರೈತರಿಂದ ಕ್ರಮಬದ್ಧವಾಗಿ ಸುಲಿಯುವ ಸುಲಿಗೆಯಲ್ಲಿ ಇವನದೂ ಒಂದು ಪಾಲು ಇರುತ್ತಿತ್ತು. ಅಲ್ಲದೆ ತಲಾಂತರದಿಂದ ಈ ಕೆಲಸವನ್ನು ಮಾಡಲು ಅವನಿಗೆ ಗೌಡರ ಮನೆತನ ದವರು ಉಂಬಳಿಯನ್ನೂ ಹಾಕಿಕೊಟ್ಟಿದ್ದರು.

ಪಡಸಾಲೆಯ ಎರಡೂ ಮಗ್ಗಲುಗಳಲ್ಲಿ ವಿಸ್ತಾರವಾದ ಕೋಣೆ ಗಳಿದ್ದವು. ಈ ಕೋಣೆಗಳ ಬಾಗಿಲುಗಳನ್ನು ಯಾವಾಗಲೂ ಹಾಕಿರುತ್ತಿತ್ತು. ಬಲಗಡೆಯ ಕೋಣೆಯ ಒಳಗಿರುವ ಇನ್ನೊಂದು ಕೋಣೆಯಲ್ಲಿ ಗೌಡರು ವಾಸಿಸುತ್ತಿದ್ದರು. ದೊಡ್ಡ ಕಬ್ಬಿಣದ ಪೆಟ್ಟಿಗೆ ಅಲ್ಲಿಯೇ ಇರುತ್ತಿತ್ತು. ಚಿಕ್ಕ ಚಿಕ್ಕ ಕಬ್ಬಿಣ ಪೆಟ್ಟಿಗೆಗಳು ಕೂಡ ಅಲ್ಲಿ ನಾಲಾಗಿ ಇದ್ದುದು ಕಂಡುಬರುತ್ತಿತ್ತು.

ಎಡಮಗ್ಗಲ ಕೋಣೆ ಗೌಡರ ಹೆಂಡತಿಗೆ ಮೀಸಲು. ಅದರ ಒಳಗಿನ ಕೋಣೆಯಲ್ಲಿ ಅನೇಕ ಕವಾಟುಗಳಿದ್ದವು. ಈ ಕವಾಟುಗಳಲ್ಲಿ

ದೊಡ್ಡದೊಡ್ಡ ಹಗೆಗಳಿರುವದಾಗಿ ಒಂದು ವದಂತಿ ಹರಡಿರುವದು ನಿಜ ವಾಗಿಯೇ ಇರಬೇಕು. ಆದರೆ ಆ ಹಗೆಗಳಲ್ಲಿ ಏನು ಹಾಕಿರುವರೆಂಬುದು ಮಾತ್ರ ಯಾರಿಗೂ ತಿಳಿಯದ ವಿಷಯವಾಗಿತ್ತು. ಸ್ವತಃ ಭಾವೂರಾಯರಿಗೇ ಆ ಹಗೆಗಳನ್ನು ತೆರೆದು ನೋಡುವ ಧೈರ್ಯವಾಗಿರಲಿಲ್ಲ. ಆ ಹಗೆಗಳ ನೆನಪಾದಾಗ ಅವರಲ್ಲಿ ಯಾವುದೋ ಒಂದು ಭೀತಿಯ ಕಲ್ಪನೆ. ಸುಳಿದು ಹೋಗುತ್ತಿತ್ತು.

ಗೌಡರ ಹಿಂದಿನ ಪೀಳಿಗೆಯವರ ಅಧಿಕಾರಪ್ರಮತ್ತ ಕ್ರೂರಬುದ್ಧಿಯ ಇತಿಹಾಸವು ಈ ಹಗೆಗಳಲ್ಲಿ ಹುದುಗಿದೆ ಎಂದು ಆ ಹಳ್ಳಿಯ ಹಿರಿಯರಲ್ಲಿ ಒಬ್ಬಿಬ್ಬರು ಇನ್ನೂ ಹೇಳುವವರೂ ಇದ್ದಾರೆ.

ಆದರೆ ಈಗ ಈ ಹಗೆಗಳ ಸುದ್ದಿ ಕೇಳಬರುವದಿಲ್ಲ. ಆ ಕಪಾಟು ಗಳಲ್ಲಿ ಈಗ ಬೆಲೆಯುಳ್ಳ ವಸ್ತ್ರಗಳನ್ನು ತುಂಬಿಟ್ಟದ್ದರಿಂದ ಅವು ಆಭರಣದ ಪೆಟ್ಟಿಗೆಗಳಂತೆ ಉಪಯೋಗವಾಗುತ್ತಿವೆ.

ಅಡಿಗೆಯ ಮನೆಯ ಹತ್ತಿರ ದೇವರ ಮನೆ. ದೇವರ ಮನೆಯಲ್ಲಿ ವಿಸ್ತಾರವಾದ ಜಗುಲಿ. ಒಂದು ಕಾಲಕ್ಕೆ ಇಲ್ಲಿ ಘನವಾದ ಪೂಜೆ–ಪುನಸ್ಕಾರ ಗಳು ನಡೆಯುತ್ತಿದ್ದವೆಂಬ ಕುರುಹುಗಳು ಇನ್ನೂ ಅಲ್ಲಿ ಕಾಣುತ್ತಿವೆ. ಅನೇಕ ಹಿತ್ತಾಳೆಯ ದೇವಮೂರ್ತಿಗಳು ರಾಸಿರಾಸಿಯಾಗಿ ಮಾಡದಲ್ಲಿ ಬಿದ್ದಿವೆ. ಈಗ ಆ ಜಗಲಿಯ ಮೇಲೆ ದೇವತೆಗಳ ಕಂಚಿನ ಪ್ರತಿಮೆಗಳ ಪ್ರದರ್ಶನವಿಲ್ಲ. ಒಂದು ಪುಟ್ಟ ಕಟ್ಟಿಗೆಯ ಮಂಟಪ. ಅದರಲ್ಲಿ ಎರಡು ಸಂಪುಟಗಳು. ಒಂದು ದೊಡ್ಡದು, ಇನ್ನೊಂದು ಚಿಕ್ಕದು. ದೊಡ್ಡದರಲ್ಲಿ ಶಿವಲಿಂಗವಿದೆ, ಸಣ್ಣದರಲ್ಲಿ ಸಾಲಿಗ್ರಾಮವಿದೆ.

ಆಚಾರ್ಯನೊಬ್ಬನಿಂದ ಪೂಜೆ ಈಗಲೂ ನಡೆಯುತ್ತಿದೆ.

ಅಡಿಗೆಯ ಮನೆಗೆ ಹೊಂದಿಕೊಂಡು ನೀರಮನೆ ಇದೆ. ಅಲ್ಲಿ ಆಳೆತ್ತರದ ಗಚ್ಚಿನ ಹೌದು ಒಂದು ಕಾಲಕ್ಕೆ ಸಾವಿರಕೊಡ ನೀರನ್ನು ತುಂಬಿ ಕೊಂಡು ಮೆರೆಯುತ್ತಿತ್ತೆಂದು ಈಗಲೂ ಅನ್ನಿಸುತ್ತದೆ. ಈಗ ಈ ಹೌದಿನ ಬಳಕೆಯನ್ನು ಯಾರೂ ಮಾಡುವದಿಲ್ಲ. ಅದರಲ್ಲಿ ನಿರುಪಯೋಗೀ ಸಾಮಾನು ಗಳನ್ನು ಒಗೆಯಲಾಗಿದೆ. ಮುರುಕ ಖುರ್ಚಿಗಳು, ಹರಿದ ಪತ್ರಲಗಳು, ಒಡಕು ಭಾಂಡಿಗಳು, ತೂತುಬಿದ್ದ ಕಂದೀಲುಗಳು ಮೊದಲಾದ ಇನ್ನೂ ಏನೇನೋ ಸಾಮಾನುಗಳಿಂದ ಅದು ತುಂಬಿಹೋಗಿದೆ.

ಈಗ ಅಲ್ಲಿ ಇರುವವು ಎರಡು ಹಂಡೆಗಳು, ಒಂದು ನೀರುಕಾಯಿಸುವ

ಬಂಬು. ನಾಲ್ಕಾರು ತಂಬಿಗೆಗಳು ಅಷ್ಟೆ. ನೀರಮನೆಯ ತುಂಬ ಕಲ್ಲಿನ ಫರಸಿಯನ್ನು ಮಾಡಲಾಗಿದೆ. ಅಲ್ಲಿ ಒಂದು ಕಾಲಕ್ಕೆ ಏಕಸಮಯಕ್ಕೆ ಅನೇಕರು ಸ್ನಾನಮಾಡುತ್ತಿರುವ ವ್ಯವಸ್ಥೆ ಇದ್ದಿತೆಂದು ತೋರುವ ಕುರುಹುಗಳೂ ಇವೆ.

ಪಡಸಾಲೆಯನ್ನು ದಾಟಿ ಒಳಗೆ ಹೋಗುವಾಗ ಕಾಣುವ ನಡುಮನೆ ವಿಸ್ತಾರವಾಗಿದೆ. ಈ ಮನೆಯನ್ನು ಊಟಕ್ಕೆ ಕುಳಿತುಕೊಳ್ಳಲು ಬಳಿಸಲಾಗುತ್ತಿದೆ. ತಾಟು, ಒಟ್ಟಲಗಳನ್ನಿಡಲು ಅಡಕಲುಗಳಿವೆ. ಮಣಿಗಳನ್ನು ಒಟ್ಟಲ ಜೊಡ್ಡ ಮಾಡವಿದೆ. ಈ ಮನೆಯ ಹೊಂದಿ ಇರುವ ಕೋಣೆಯಲ್ಲಿ ದಿನೋಪಯೋಗೀ ಸಾಮಾನುಗಳನ್ನು ಇಡಲಾಗುವ ಉಗ್ರಾಣವಿದೆ.

ಹಿತ್ತಲು ವಿಸ್ತಾರವಾಗಿದೆ. ಅಲ್ಲಿ ಅಚ್ಚುಕಟ್ಟು ಮಾತ್ರ ಏನೂ ಇಲ್ಲ. ಮಧ್ಯದಲ್ಲಿ ಒಂದು ತುಳಸೀ ವೃಕ್ಷದ ಕಟ್ಟೆಯಿದೆ. ಹೊಡೆದ ಕಲ್ಲುಗಳಿಂದ ಕಟ್ಟಿದ ಕಟ್ಟೆಯದು ಅನೇಕ ಗೌಡಸಾನಿ ಮುತ್ತೈದೆಯರು ಪೂಜೆಮಾಡಿದ ಪವಿತ್ರ ಕಟ್ಟೆಯದು. ಈಗಲೂ ಆ ಸ್ಥಳ ಮಾತ್ರ ಚೊಕ್ಕಟವಾಗಿ ಕಾಣುತ್ತದೆ.

ಇದಿಷ್ಟು 'ಗೌಡರ ಮನೆ'ಯ ಹಕ್ಕಿನೋಟ.

ಒಂದು ಕಾಲಕ್ಕೆ ಈ ಮನೆ ಅತ್ಯಂತ ವೈಭವದಿಂದ ಮೆರೆದಿರಬೇಕು. ಈಗ ಮಾತ್ರ ಮೊದಲಿನ ವೈಭವವಿರದಿದ್ದರೂ ಅದು ಇನ್ನೂ 'ಗೌಡರ ಮನೆ' ಯಾಗಿಯೇ ಇದೆ.

'ಗೌಡರ ಮನೆ' ಇಡೀ ಹಳ್ಳಿಯಲ್ಲಿ ಎದ್ದುಕಾಣುವ ಮನೆ. ಭಾವೂ ರಾಯರು ಆ ಹಳ್ಳಿಯಲ್ಲಿಯೇ ಗಣ್ಯವ್ಯಕ್ತಿಗಳು.

ಭಾವೂರಾಯರ ಗಣ್ಯತೆಗೆ ಅವರ ಔದಾರ್ಯವೂ ಕಾರಣವಾಗಿರುವದೆಂದು ಅನೇಕರು ಹೇಳುವದರಲ್ಲಿ ಸತ್ಯಾಂಶವಿಲ್ಲದಿಲ್ಲ ಅವರು ರೈತರೊಡನೆ ಅನ್ಯೋನ್ಯವಾಗಿರುತ್ತಿದ್ದರು. ಯಾವ ರೈತನೊಡನೆಯೂ ಅವರು ಮನಸ್ತಾಪ ಮಾಡಿಕೊಳ್ಳುತ್ತಿರಲಿಲ್ಲ. ಅವರನ್ನು ಇವರು ಕನಿಕರದಿಂದಲೇ ನೋಡುತ್ತಿದ್ದರು.

ಈ ಔದಾರ್ಯದ ದುರುಪಯೋಗವನ್ನು ರೈತರು ಸಾಕಷ್ಟು ಮಾಡಿಕೊಳ್ಳುತ್ತಿರುವರೆಂಬುದನ್ನು ಭಾವೂರಾಯರು ಕಂಡುಕೊಂಡಿದ್ದರು.

ಏನಾದರೂ ನೆಪವನ್ನು ಮುಂದೊಡ್ಡಿ ಕಣ್ಣೀರು ಹಾಕಿ ಕೊಡುವ ಲಾವಣಿಯಲ್ಲಿ ಅರ್ಧವಷ್ಟನ್ನಾದರೂ 'ಸೂಟು' ಬಿಡಿಸಿಕೊಳ್ಳುತ್ತಿದ್ದರು. ಸರಿಯಾದ ವೇಳೆಗೆ ಮಳೆಯಾಗಲಿಲ್ಲ ದಣಿಯರೇ ಎಂದೋ ಆಯತ್ತ ಸಮಯದಲ್ಲಿ

'ಕುಂಕುಮ' ರೋಗ ಬಿದ್ದು ಪೈರು ಹಾಳಾಗಿ ಫಸಲು ಹಾಳಾಯಿತೆಂದೋ, ಸುಟ್ಟಗಾಳಿ ಬೀಸಿದ್ದರಿಂದ ತೆನೆಗಳು ಹಾಲು ತುಂಬಲಿಲ್ಲವೆಂದೋ ಹೇಳಿ ಗೋಗರೆಯುವದು ರೈತಪ್ರಪಂಚದ ವಾಡಿಕೆಯ ಕ್ರಮಬದ್ಧ ಸಂಪ್ರದಾಯವಾಗಿತ್ತು. ಎಲ್ಲ ರೈತರೂ ಇದನ್ನೇ ಹೇಳುತ್ತಿದ್ದರು. ಎಲ್ಲ ರೈತರೂ ದಣಿಯರ ತಲೆಗೆ ಹಾಳತವಾಗುವ ಟೊಪ್ಪಿಗೆಯನ್ನು ಹಾಕುವದರಲ್ಲಿ ಪ್ರವೀಣರು.

ರೈತರು ಅಪ್ರಮಾಣಿಕರಾಗಿರುವ ಸಂಗತಿ ಭಾವೂರಾಯರಿಗೆ ಅರಿಯದ ಮಾತಾಗಿರಲಿಲ್ಲ. ಆದರೆ ಅವರು ಧೂರ್ತರಾಗಿದ್ದರು. ರೈತರಿಗೆ ಸಿಟ್ಟಿಂದು ಮಾತಾಡುತ್ತಿರಲಿಲ್ಲ. ಬದಲಾಗಿ ಅವರಿಗೆ ಹೆಚ್ಚಿನ ಸಹಾನುಭೂತಿಯನ್ನೇ ತೋರಿಸುತ್ತಿದ್ದರು.

ಒಂದಿಲ್ಲ ಒಂದು ರೀತಿಯಲ್ಲಿ ಈ ಹಣ ಮತ್ತೆ ತಮಗೆಯೇ ಮರಳುವದೆಂಬ ವಿಶ್ವಾಸವೇ ಈ ಸಹಾನುಭೂತಿಗೆ ಕಾರಣವಾಗಿತ್ತು. ಸಮೃದ್ಧಿಗಾದ ರೈತನಲ್ಲಿ ಹುಂಬ ಚಟುವಟಿಕೆಗಳು ಪ್ರಾರಂಭವಾಗಿ ಅವನು ಸಂಕಟದಲ್ಲಿ ಬಿದ್ದು ಕಚೇರಿಯ ಕಟ್ಟೆಯನ್ನು ಹತ್ತುವದು ನಿಶ್ಚಯದ ಮಾತಾಗಿತ್ತು. ಅಸಂಸ್ಕೃತ, ಅಜ್ಞಾನಿಗಳಾದ ರೈತರಲ್ಲಿ ಚಿಕ್ಕ ಪುಟ್ಟ ಸಂಗತಿಗಳಿಗಾಗಿ ಕದನವೇಳುತ್ತಿರುವದನ್ನು ಇವರು ಅನುಭವದಿಂದ ತಿಳಿದುಕೊಂಡಿದ್ದರು. ಸಾಮಾನ್ಯವಾಗಿ ಈ ಜಗಳಗಳು ಹೆಣ್ಣಿನ ಸುತ್ತಲಾಗಲಿ, ಮಣ್ಣಿನ ಆಶೆಗಾಗಲಿ ಏಳುತ್ತಿದ್ದವು. ಅಸಾಧ್ಯವಾದ ಈರ್ಷೆ ಹುಡ್ಡು ಹೊಡೆದು ನಿಲ್ಲುತ್ತಿತ್ತು. ಸೇಡಿನ ಪ್ರವೃತ್ತಿ ಕಾಲುಕೆದರುತ್ತಿತ್ತು. ಈ ಸೇಡನ್ನು ತೀರಿಸಿಕೊಳ್ಳಲು ಕೋರ್ಟು ಕಚೇರಿ ಎಡತಾಕುವದೇ ಇವರ ಹಣೆಯ ಬರಹವಾಗುತ್ತಿತ್ತು. ಇಂಥ ಪ್ರಸಂಗದಲ್ಲಿ ಈ ರೈತರು ದಣಿಯರ ಹತ್ತಿರ ಬಂದು ಶರಣಾಗುತ್ತಿದ್ದರು. ಕೇಳಿದಷ್ಟು ದುಡ್ಡುಕೊಟ್ಟು ಕದನ ನಡೆಸುತ್ತಿದ್ದರು. ಎರಡೂ ಪಕ್ಷದವರು ಈ ವ್ಯಾಜ್ಯ ಮುಗಿಯುವ ಹೊತ್ತಿಗೆ ಬರಿಗೈಯ ಸುದಾಮರಾಗಿ ದಣಿಯರ ಸಾಲದ ಕೂಸಾಗಿಬಿಡುತ್ತಿದ್ದರು.

ಭಾವೂರಾಯರಿಗೆ ಈ ಒಳಗುಟ್ಟು ಗೊತ್ತಿದ್ದುದರಿಂದ ಅವರು ರೈತರನ್ನು ಧಾರಾಳವಾಗಿಯೇ ನೋಡುತ್ತಿದ್ದರು. 'ಹಾರುವ ಮಾಡಿದ್ದು ಪಿಂಡಕ್ಕೆ, ರೈತ ಮಾಡಿದ್ದು ದಂಡಕ್ಕೆ' ಎನ್ನುವ ರೂಢಿಯ ಮಾತು ಇವರಿಗೆ ಮಾರ್ಗದರ್ಶಕವಾಗಿತ್ತು.

ಭಾವೂರಾಯರು ರೈತರಿಗೆ ಕೇಳಿದಷ್ಟು ಸೂಟು ಬಿಡುತ್ತಿದ್ದರು. ಈ ಬಿಟ್ಟ ಹಣ ವರುಷ ಮುಗಿಯುವದರ ಒಳಗೆ ರೈತರಿಂದ ಬೇರೆ ಮಾರ್ಗವಾಗಿ

ಬಂದು ಭರತಿಯಾಗುತ್ತಿತ್ತು.

ಆದರೂ ರೈತರ ಕಣ್ಣಿನಲ್ಲಿ ಈ ಜಮೀನುದಾರರು ಉದಾರಿಗಳಾದ ದೊರೆಗಳೇ ಆಗಿದ್ದರು.

ಈ ಔದಾರ್ಯವೂ ಒಂದು ಜಮೀನುದಾರಿ ಪದ್ಧತಿಯಾಗಿತ್ತು.

ಗೌಡರ ಮನೆಯಲ್ಲಿ ಅನ್ನಕ್ಕೆ ತಾಪತ್ರಯವಿರಲಿಲ್ಲ. ಬೇಕಾದಷ್ಟು ಜನ ಇಲ್ಲಿ ಊಟಮಾಡಿ ಹೋಗುತ್ತಿದ್ದರೂ ಯಾರಿಗೂ ಅಸಹ್ಯವಾಗುತ್ತಿರಲಿಲ್ಲ. ಇಲ್ಲಿ ಊಟಮಾಡುವವರು ಆಪ್ತೇಷ್ಟರೇ ಇರಬೇಕೆಂಬ ನಿಯಮವೂ ಇರಲಿಲ್ಲ. ಎಲ್ಲರೂ ದುಡಿದು ತಿನ್ನುವವರಾಗಿರಬೇಕೆಂಬುದೂ ಇರಲಿಲ್ಲ. ಭಾವೂರಾಯರು ಇಲ್ಲದ ಸಂಬಂಧ ಹಚ್ಚಿಕೊಂಡು ಹತ್ತೆಂಟು ಹೊರಗಿನ ಜನ ಪ್ರತಿದಿನ ತಂಡುಲಧ್ವಂಸಿಗಳಾಗಿ ಇರುತ್ತಿದ್ದರು. ಹಲಕೆಲವು ಉಂಡಾಡಿಗಳು ಕೂಡ ಇಲ್ಲಿಯೇ ತಮ್ಮ ಪ್ರತಿನಿತ್ಯದ ಊಟ ಸಾಗಿಸುತ್ತಿದ್ದರು. ಇಂಥ ಜನರಿಗೆ ಊಟ ಹಾಕುವದು ಕೂಡ ಜಮೀನುದಾರಿ ಪದ್ಧತಿಯ ಒಂದು ಅಂಗವೇ ಆಗಿತ್ತು.

ತಿನ್ನುವ ಜನರು ತಿನ್ನುತ್ತಲೇ ಇರುತ್ತಿದ್ದರು. ಭೂಮಿತಾಯಿ ಬಂಜೆಯಾಗಿರಲಿಲ್ಲ. ಈ ಅನಂತ ಮುಖಗಳಿಗೆ ಅನ್ನವನ್ನು ಒದಗಿಸುತ್ತಲೇ ಇದ್ದಳು. ಅವಳ ಸಮೃದ್ಧಿ ಈ ಮನೆತನಕ್ಕೆ ವರಪ್ರದಾನವಾಗಿತ್ತು.

ಭಾವೂರಾಯರದು ಎಂಟು ಎತ್ತುಗಳ ಕಮತ. ಮನೆಯಲ್ಲಿ ಎರಡು ಎಮ್ಮೆಗಳು, ಎರಡು ಆಕಳುಗಳು ಸದಾಕಾಲ ಕರೆಯುತ್ತಿದ್ದವು. ಮಾಡುವ ಆಳುಗಳಿಗೆ ಕೊರತೆ ಇರಲಿಲ್ಲ. ತಿನ್ನುವ ಜನಕ್ಕೂ ಕೊರತೆ ಇರಲಿಲ್ಲ. ಆಹಾರಸಾಮುಗ್ರಿ ರಾಶಿರಾಶಿಯಾಗಿದ್ದು ಯಾವುದಕ್ಕೂ ಕಡಿಮೆಯಾಗುತ್ತಿರಲಿಲ್ಲ. ಇದೊಂದು ಅನ್ನಛತ್ರದಂತೆ ಸದಾವರ್ತವಾಗಿ ಕಂಗೊಳಿಸುತ್ತಿತ್ತು ಈ ಗೌಡರ ಮನೆ.

ಈ ದೊಡ್ಡ ಮನೆಗೆ ತಕ್ಕಂತೆ ದೊಡ್ಡ ಸಂಗತಿಗಳೂ ಇಲ್ಲಿ ನಡೆಯುತ್ತಿದ್ದವು. ಊರ ಕಾರುಭಾರವೆಲ್ಲ ಇಲ್ಲಿಯೇ ನಡೆಯುತ್ತಿತ್ತು. ಅಂಥಿಂಥವರ ಕ್ರಮಬದ್ಧ ಸುಲಿಗೆಯ ಕಾರ್ಯಕ್ರಮವೂ ಇಲ್ಲಿಯೇ ಮೂರ್ತಸ್ವರೂಪವನ್ನು ತಾಳುತ್ತಿತ್ತು.

ಇದೆಲ್ಲ ನ್ಯಾಯದ ದೊಡ್ಡ ಹೆಸರಿನಲ್ಲಿಯೇ ನಡೆಯುತ್ತಿತ್ತು. ಈ ಗೌಡರಿಗೆ ಉದುರು ಹೇಳುವ ಧೈರ್ಯ ಯಾರಿಗೂ ಇರಲಿಲ್ಲ.

ಭಾವೂರಾಯರ ದರಬಾರುಜೀವನ ಅವರ ಜೀವದುದ್ದಕ್ಕೂ ಸಾಗಿತ್ತು.

ಹೀಗೆಂದಮಾತ್ರಕ್ಕೆ ಅವರು ಅತ್ಯಂತ ಜನಪ್ರಿಯರಾಗಿದ್ದರೆಂದು ತಿಳಿದು ಕೊಳ್ಳುವ ಕಾರಣವಿಲ್ಲ. ಅವರ ಬಗ್ಗೆ ಜನರಲ್ಲಿ ಪ್ರೀತಿಗಿಂತ ಭೀತಿಯೇ ಹೆಚ್ಚಾಗಿತ್ತು. ಗೌಡರ ಹಿರಿಯರ ಕೀರ್ತಿಯನ್ನು ಕೇಳಿದ ಜನ ಎಡಕೋಣೆ ಯಲ್ಲಿರುವ ಕಪಾಟಿನ ಕಥೆಯನ್ನು ಕೇಳಿ ಹೆದರುತ್ತಿದ್ದರು. ಅನೇಕ ದುರಂತ ಕೃತ್ಯಗಳಿಗೆ ಅವು ನರಕ ಕುಂಡಗಳಾಗಿರುವದಾಗಿ ಹಬ್ಬಿದ ಸುದ್ದಿಯನ್ನು ಕೇಳಿ ಜನ ಗಡಗಡನೆ ನಡಗುತ್ತಿದ್ದರು.

ಆದರೆ ಆ ಹಳ್ಳಿಯ ಮಾಳಣ್ಣ ಮಾತ್ರ ಈ ಗೌಡರನ್ನು ದ್ವೇಷ ದಿಂದಲೇ ನೋಡುತ್ತಿದ್ದ. ಅವನ ತಂದೆಯ ಹುಚ್ಚಿಗೆ ಈ ಗೌಡರೇ ಕಾರಣ ವೆಂದು ಅವನು ತಿಳಿದುಕೊಂಡಿದ್ದನಲ್ಲದೆ ತನ್ನ ತಾಯಿಯ ಸಾವಿಗೆ ಇವರೇ ಕಾರಣರಾದರೆಂದು ಅವನು ಕೇಳಿ ತಿಳಿದುಕೊಂಡಿದ್ದ.

ಅವನಲ್ಲಿ ದ್ವೇಷಾಗ್ನಿ ಹೊತ್ತುತ್ತಲೇ ಇತ್ತು. ಇಪ್ಪತ್ತು ವರುಷಗಳ ವರೆಗೆ ಅದು ಇನ್ನೂ ಹೊಗೆಯಾಡುತ್ತಲೇ ಇತ್ತು.

ಈ ಸಂಗತಿ ಎಲ್ಲರಿಗೂ ಮರೆತ ಸಂಗತಿಯಾಗಿತ್ತು. ಆದರೆ ಮಾಳಣ್ಣನಿಗೆ ಮಾತ್ರ ಹೊಚ್ಚ ಹೊಸ ಸಂಗತಿಯಾಗಿತ್ತು.

ಅವನು ಒಂದು ರೀತಿಯ ಗುಂಗಿನಲ್ಲಿಯೇ ಇರುತ್ತಿದ್ದುದರಿಂದ ಎಲ್ಲರೂ ಅವನನ್ನು ಅಲಕ್ಷ್ಯದಿಂದಲೇ ನೋಡುತ್ತಿದ್ದರು. ಅವನ ಚಿಕ್ಕವ್ವ ಅವನಿ ಗೊಂದು ಮದುವೆಮಾಡಿ ಈ ಗುಂಗನ್ನು ಕಳೆಯಬೇಕೆಂದು ಹಂಬಲಿಸಿದಳು. ಆದರೆ ಮಾಳಣ್ಣ ಒಡಂಬಡಲಿಲ್ಲ.

ಅವನು ಯಾವಾಗಲೂ ಊರಹೊರಗಿನ ಮಾರುತಿಯ ಗುಡಿಯಲ್ಲಿ ಹುಡುಗರೊಡನೆ 'ಹುಲಿಕಟ್ಟು' ಆಡುತ್ತಿದ್ದ. ಆದರೆ ಆ ಆಟದಲ್ಲಿಯೂ ಅವನಿಗೆ ಆಸ್ಥೆಯಿರಲಿಲ್ಲ. ಅವನ ಬುದ್ಧಿ ಸ್ತಿಮಿತದಲ್ಲಿಯೇ ಇರುತ್ತಿರಲಿಲ್ಲ.

ವಾರದಲ್ಲಿ ಒಂದೆರಡು ಬಾರಿ ಭಾವೂರಾಯರು ತಮ್ಮ ಕುದುರೆಯನ್ನು ಹತ್ತಿಕೊಂಡು ಒಂದೆರಡು ಹಳ್ಳಿಗಳಿಗೆ ಸವಾರಿ ಮಾಡಿಬರುವದು ವಾಡಿಕೆ ಯಾಗಿತ್ತು. ಅವರು ಯಾವ ಹಳ್ಳಿಗೂ ಒಂಟಿಗರಾಗಿ ಹೋಗುತ್ತಿರಲಿಲ್ಲ. ಹಿಂದೆ ಮುಂದೆ ಬಂದೂಕಿನ ಸವಾರರು ಯಾವಾಗಲೂ ಇರುತ್ತಿದ್ದರು. ಈ ಸವಾರರು ವೈಭವದ ಅಲಂಕಾರದಂತೆ ಯಾವಾಗಲೂ ಗೌಡರ ಬೆನ್ನ ಹಿಂದೆಯೇ ಇರುತ್ತಿದ್ದರು. ಇವರಿಗೆ ಹಳ್ಳಿಯ ಜನ ಹಾಸ್ಯದಿಂದ 'ಗೌಡರ ಸರದಾರ'ರೆಂದು ನಾಮಕರಣ ಮಾಡಿದ್ದರು. ಜನ ಚೇಷ್ಟೆಯಿಂದ ಇದನ್ನು

ಅನ್ನುತ್ತಿದ್ದರೂ ಈ ಸರದಾರರು ಅದನ್ನು ಒಳ್ಳೇ ಆಥ್ಯತೆಯಿಂದಲೇ ಸ್ವೀಕರಿಸುತ್ತಿದ್ದರು.

ಆ ದಿನ ಭಾವೂರಾಯರು ಒಬ್ಬಂಟಿಗರಾಗಿಯೇ ಕುದುರೆಯನ್ನು ಹತ್ತಿಕೊಂಡು ಹೊರಬಿದ್ದರು. ಈ ಇಪ್ಪತ್ತು ವರುಷಗಳಲ್ಲಿ ಅವರು ಒಬ್ಬಂಟಿಗರಾಗಿ ಹೊರಟದ್ದು ಇದು ಮೊದಲನೆಯ ಸಲವಾಗಿತ್ತು.

ರಾತ್ರಿ ಎಂಟು ಗಂಟೆಯಾದರೂ ಭಾವೂರಾಯರು ಮನೆಗೆ ಮರಳಲಿಲ್ಲ.

ಊರಮುಂದಿನ ಹನುಮನ ಗುಡಿಯಲ್ಲಿ ಯಾವಾಗಲೂ ಗುಂಗಿನಲ್ಲಿ 'ಹುಲಿಕಟ್ಟು' ಆಡುತ್ತಿದ್ದ ಮಾಳಣ್ಣನೂ ಆ ದಿನ ಅಲ್ಲಿ ಕಾಣಿಸಲಿಲ್ಲ.

ಮನೆಯಲ್ಲಿ ಮಕ್ಕಳು ಗಾಬರಿಯಾದರು. ಗೌಡರ ಹಿರಿಯ ಸೊಸೆ ಕಾಶೀಬಾಯಿ ಮೊದಲಿಗೆ ಈ ವಿಲಂಬದ ವಾರ್ತೆಯನ್ನು ಪತಿಗೆ ತಿಳಿಸಿದಳು.

ಬಳವಂತಗೌಡನು ಗಡಬಡಿಸಿದನು.

ಕಿರಿಯ ತಮ್ಮನನ್ನು ಕೂಗಿ ತಂದೆಯನ್ನು ನೋಡಿಕೊಂಡು ಬರಲು ಆಜ್ಞೆ ಮಾಡಿದನು. ಭೀಮಣ್ಣ ಆಳನ್ನು ಕೂಗಿದನು. ಆಳು ಕಂದೀಲನ್ನು ತರುವ ಹೊತ್ತಿಗೆ ಬಾಗಿಲ ಮುಂದೆ ಬರಿಯ ಬೆನ್ನಮೇಲಿನ ಜೀನಿನೊಂದಿಗೆ ಗೌಡರ ಕುದುರೆ ಬಂದು ನಿಂತಿತು.

ಬೆನ್ನಮೇಲೆ ಗೌಡರ ಸವಾರಿ ಇರಲಿಲ್ಲ. ಗೌಡರ ಮಕ್ಕಳಿಗೂ, ಆಪ್ತ ವರ್ಗಕ್ಕೂ, ಹಿತಚಿಂತಕರಿಗೂ ಏನೋ ಸಂದೇಹ ಬಂದಂತಾಯಿತು. ಅವರು ಗಾಬರಿಯಾದರೂ ಅದನ್ನು ತೋರಗೊಡದೆ ಕುದುರೆಯ ಹೆಜ್ಜೆಗಳನ್ನು ಅರಸುತ್ತ ನಡೆದರು.

ಅವರು ಬಹಳ ದೂರ ಹೋಗಬೇಕಾಗಿರಲಿಲ್ಲ. ಗೌಡರ ಮಾವಿನ ತೋಪಿನ ಮಧ್ಯದಲ್ಲಿ ಹರಿದ ಹಳ್ಳದ ಒತ್ತಿನಲ್ಲಿ ಗೌಡರ ಶವ ಬೋರಲಾಗಿ ಬಿದ್ದಿದ್ದಿತು.

ಈ ಸಂಗತಿಯನ್ನು ತಿಳಿದ ಗೌಡರ ಬಳಗ ಯಾವ ಬೊಬ್ಬಾಟವನ್ನೂ ಮಾಡಲಿಲ್ಲ. ಶವ ಮನೆಗೆ ಬಂದ ಮೇಲೆ ಮನಯಲ್ಲಿ ಯಾರೂ ರೋದಿಸಲಿಲ್ಲ.

ಹಳ್ಳಿಯ ವೈದ್ಯರನ್ನು ಕರೆತರಲಾಯಿತು. ಊರಲ್ಲಿ ಗೌಡರಿಗೆ ಹೃದಯದ ವೇದನೆ ಪ್ರಬಲವಾಗಿದೆ ಎಂಬ ವಾರ್ತೆಯನ್ನು ಹರಡಲಾಯಿತು. ಮನೆಯ ಮುಂದೆ ಒಂದು ದೊಡ್ಡ ಜಾತ್ರೆಯೇ ನೆರೆಯತೊಡಗಿತು. ಆಗಾಗ ವೈದ್ಯರು ಹೊರಗೆ ಬಂದು 'ಗೌಡರ ಪರಿಸ್ಥಿತಿ ಚಿಂತಾಜನಕವಾಗಿದೆ. ಆದರೆ ಹೆದರುವ ಕಾರಣವಿಲ್ಲ'ವೆಂದು ಧೈರ್ಯ ಹೇಳಿ ಹೋಗುತ್ತಿದ್ದರು. ಮಧ್ಯ

ರಾತ್ರಿಯಾಯಿತು. ಗೌಡರ ಮನೆಯ ಹತ್ತಿರ ನಿಂತ ಜನ ಜಂಗುಳಿ ಕರಗಿತು. ಅಲ್ಲಲ್ಲಿ ಕಟ್ಟೆಯ ಮೇಲೆ ನಾಲ್ಕಾರು ಜನ ಮಾತ್ರ ಹೊಗೆಬತ್ತಿ ಸೇದುತ್ತ ಕುಳಿತುಕೊಂಡಿದ್ದರು.

ರಾತ್ರಿ ಒಂದು ಗಂಟೆಯ ಸುಮಾರಿಗೆ ಗೌಡರ ಹೃದಯಕ್ರಿಯೆ ನಿಂತಿತೆಂಬ ದುಃಖದ ವಾರ್ತೆಯನ್ನು ವೈದ್ಯರು ಸಾರಿದರು.

ಈ ಸುದ್ದಿ ಒಂದು ಕಿವಿಗೆ ಕೇಳಿ ಇನ್ನೊಂದು ಕಿವಿಗೆ ತಲುಪುವ ಮೊದಲೇ ಗೌಡರ ಪಾರ್ಥಿವ ದೇಹಕ್ಕೆ ಅಗ್ನಿಸಂಸ್ಕಾರವಾಗಿಬಿಟ್ಟಿತು.

ಬಳವಂತಗೌಡರಿಗೆ ತಂದೆಯ ಶವವನ್ನು ನೋಡುವದು ಆಗದ್ದರಿಂದ ಎಲ್ಲವನ್ನೂ ಚಾಕಚಕ್ಯತೆಯಿಂದ ಪೂರೈಸಲಾಯಿತೆಂದು ಗೌಡರ ಆಪ್ತವರ್ಗ ಹೇಳತೊಡಗಿದರು.

ಈ ಸಾವು ನಿಗೂಢವಾದರೂ ಯಾರೂ ಪಿಟ್ಟೆಂದು ಮಾತಾಡಲಿಲ್ಲ. ಆದರೆ ಅದೇ ದಿನ ಆ ಹಳ್ಳಿಯಿಂದ ಮರೆಯಾದ ಮಾಳಣ್ಣನಿಗೂ ಗೌಡರ ಆಕಸ್ಮಿಕ ಸಾವಿಗೂ ಸಂಬಂಧವನ್ನು ವಯಸ್ಸಾದ ಹಿರಿಯರು ಹಚ್ಚಿ ಪಿಸು ಮಾತು ಆಡಿದರು. ಆದರೆ ಅದು ಪಿಸುಮಾತೇ ಆಗಿತ್ತು.

ಅಂದು ಮರೆಯಾದ ಮಾಳಣ್ಣ ಮುಂದೆ ಎಂದಿಗೂ ಈ ಹಳ್ಳಿಯಲ್ಲಿ ಕಾಣಲಿಲ್ಲ.

ಅವನನ್ನು ಹುಡುಕುವವರಾದರೂ ಯಾರು ?

ಭಾವೂರಾಯರ ಸಾವಿನಿಂದ ಈ ಮನೆತನದ ಮೇಲೆ ಸಿಡಿಲೆರಗಿದಂತಾಯಿತು. ನಾಲ್ಕು ಮಕ್ಕಳು ಒಬ್ಬ ಮಗಳೂ ತಬ್ಬಲಿಯಾದರು.

ಹಿರಿಯ ಮಗ ಬಳವಂತ ಸಾಕಷ್ಟು ಪ್ರಾಯಕ್ಕೆ ಬಂದು ಹೆಂಡತಿಯನ್ನು ಆಳುತ್ತಿದ್ದರೂ ಅವನಲ್ಲಿ ಊರ ಗೌಡಕೆಯನ್ನು ಮಾಡುವ ಯೋಗ್ಯತೆ ಇರಲಿಲ್ಲ. ಆದರೂ ಪರಂಪರೆಯಿಂದ ಬರುವ ಈ ನೊಗಕ್ಕೆ ಅವನು ಹೆಗಲೊಡ್ಡಲೇಬೇಕಾಯಿತು.

ಕುಳಿತು ತಿನ್ನುವ ಅಭ್ಯಾಸವನ್ನೇ ರೂಢಿಮಾಡಿಕೊಂಡ ಬಳವಂತನು ತಂದೆ ಇರುವ ವರೆಗೆ ಯಾವುದರ ಕಡೆಗೆಯೂ ಲಕ್ಷ್ಯ ಪೂರೈಸಿರಲಿಲ್ಲ. ಅದು ಅವನಿಗೆ ಬೇಕಾಗಿಯೂ ಇರಲಿಲ್ಲ. ಅದು ಅವನಿಗೆ ತಿಳಿಯುತ್ತಲೂ ಇರಲಿಲ್ಲ. ಮದುವೆ ಕೂಡ ಅವನ ಪಾಲಿಗೆ ಒಂದು ಹಬ್ಬದ ಸಮಾರಂಭವಾಗಿತ್ತು. ಅವನು ಅದರಲ್ಲಿ ಮುಖ್ಯಪಾತ್ರಧಾರಿಯಾಗಿದ್ದರೂ ನಿರ್ವಿಕಾರವಾಗಿಯೇ ಇದ್ದನು. ಬರಬರುತ್ತ ಹೆಂಡತಿಯಾಗಿ ಬಂದವಳು ತನ್ನ

ಅನಕೂಲತೆಗಳನ್ನು ನೋಡಲು ಬಂದ ಒಂದು ಹೊಸ ಹೆಣ್ಣಾಳು ಎಂಬ ಕಲ್ಪನೆ ಮೂಡತೊಡಗಿತು. ಇದರಿಂದ ಅವನಿಗೆ ತುಸು ಅನುಕೂಲವೂ ಆಯಿತು. ಅವನು ಅವಳನ್ನು ಪ್ರೀತಿಯಿಂದ ಕಾಣತೊಡಗಿದ.

ಬಳವಂತರಾಯನ ಬುದ್ಧಿ ಜಮೀನುದಾರೀ ರಕ್ತವನ್ನೇ ತುಂಬಿಕೊಂಡಿತ್ತು. ಆ ಬುದ್ಧಿ ಹರಿತಾಗಿರಲಿಲ್ಲ. ಸರಸ್ವತಿ ಮೊಗತಿರುವಿದ ಚಿಹ್ನೆಗಳು ಆ ಮುಖದಲ್ಲಿ ಸ್ಪಷ್ಟವಾಗಿ ಒಡೆದು ಕಾಣುತ್ತಿದ್ದವು. ತುಂಬಾ ಮೊದ್ದು ಮದಡುಬುದ್ಧಿಯೆಂದು ಅವರ ತಂದೆ ಆಗಾಗ ಅನ್ನುತ್ತಿದ್ದರು.

ವಿರಾಮಜೀವನದ ವಿಲಂಬಮನೋವೃತ್ತಿ ಬಳವಂತರಾಯನಿಗೆ ಜನ್ಮದಾರಭ್ಯ ಬಂದುದಾಗಿತ್ತು. ಅವನು ಕೂಸಾಗಿರುವಾಗ ಕುಳಿತುಕೊಳ್ಳುವದನ್ನು ಕಲಿಯಲು ಸಾಕಷ್ಟು ಅವಕಾಶವನ್ನೇ ತೆಗೆದುಕೊಂಡಿದ್ದನು. ಬಾಯಿತುಂಬಾ ಈ ಕೂಸು ಎಂದೂ ನಕ್ಕಿರಲಿಲ್ಲ. ಅಳುವದು ಕೂಡ ಜಮೀನುದಾರಿ ಪದ್ಧತಿಯನ್ನೇ ಅವಲಂಬಿಸಿತ್ತು. ಈ ಕೂಸಿಗೆ ಕಾಲುಬಂದು ಓಡಾಡಲು ಬರಲು ಸಾಕಷ್ಟು ವಯಸ್ಸೇ ಹಿಡಿಯಿತು. ಈ ಹುಡುಗನಿಗೆ ಎಂದಿಗೂ ನಡೆದಾಡಲು ಬರುವದಿಲ್ಲವೆಂದೇ ಎಲ್ಲರ ಗ್ರಹಿಕೆಯಾಗಿಬಿಟ್ಟಿತ್ತು. ಆದರೆ ಈ ಬಹದ್ದರನು ಎಲ್ಲರ ಅನುಮಾನವನ್ನು ತಲೆಕೆಳಗೆಮಾಡಿ ಇವನ ಓರಿಗೆಯ ಮಕ್ಕಳು ಆಟದ ಬಯಲಿನಲ್ಲಿ ಆಡುವ ಸಮಯಕ್ಕೆ ತಪ್ಪುಹೆಜ್ಜೆಗಳನ್ನು ಹಾಕತೊಡಗಿದನು. ಅಕ್ಷರಾಭ್ಯಾಸ ಇವನಿಗೆ ಬಹಳ ದಿನಗಳ ವರೆಗೆ ರೂಢಿಯಾಗಲಿಲ್ಲ. ಕೈಯಲ್ಲಿ ಬಳಪವನ್ನು ಸರಿಯಾಗಿ ಹಿಡಿಯಲು ಅವನಿಗೆ ಒಂದು ವರುಷವೇ ಹಿಡಿಯಿತು.

ಹಸುಗೂಸಿನ ಸ್ವಭಾವಕ್ಕನುಸಾರವಾಗಿ ಇವನೂ ಒಮ್ಮೊಮ್ಮೆ ಹಟ ಮಾಡುತ್ತಿದ್ದ. ಊಟ ಮಾಡಲು ತಕರಾರು ಮಾಡುತ್ತಿದ್ದ. ಆಗ ಇವನ ತಾಯಿ 'ಊಟವನ್ನಾದರೂ ಮಾಡು ಇಲ್ಲವೆ ಬರೆಯುತ್ತಲಾದರೂ ಕುಳಿತುಕೋ' ಎಂದು ಗದರಿಸುತ್ತಿದ್ದಳು. ಬಳವಂತ ಪಿಟ್ಟೆನ್ನದೆ ಹೋಗಿ ಊಟಮಾಡುತ್ತಿದ್ದ. ಆಮೇಲೆ ಎಲ್ಲರೂ ಇದೇ ತಂತ್ರವನ್ನು ಬಳಸತೊಡಗಿದರು. ಬರೆಸುವ ಅಂಜಿಕೆ ಹಾಕಿದ ಕೂಡಲೇ ಬಳವಂತಗೌಡ ಮೆತ್ತಗಾಗುತ್ತಿದ್ದ.

ಭಾವೂರಾಯರು ಈ ಬಗ್ಗೆ ತಲೆ ಕೆಡಿಸಿಕ್ಕೊಳ್ಳಲಿಲ್ಲ. ಇದರಿಂದ ಯಾವ ಪ್ರಯೋಜನವೂ ಆಗಲಾರದೆಂಬ ಮನವರಿಕೆ ಅವರದಾಗಿತ್ತು. ತಾನಾಗಿಯೇ ಎಷ್ಟು ಕಲಿಯುತ್ತಾನೆ ಕಲಿಯಲಿ ಎಂದು ಅವರು ಬಳವಂತ

ನನ್ನು ಅವನ ಪಾಡಿಗೆ ಬಿಟ್ಟುಬಿಟ್ಟರು. ಇದನ್ನು ನೋಡಿದ ಅವರ ಪತ್ನಿ,

" ಹೀಗೆ ಬಳವಂತನನ್ನು ಅಲಕ್ಷ್ಯಮಾಡಿದರೆ ಗತಿಯೇನು? ಹಿರಿಯ ಗೌಡನಾಗುವವನು ನಿರಕ್ಷರಿಯಾಗಬೇಕೆ?" ಎಂದು ಜೀವನಿಲ್ಲದೆ ಕೇಳಿದಳು.

" ಇದು ಕಲಿಯುವ ಕುಳವಲ್ಲ ಬಿಡು.

" ಹೀಗೆಂದರೆ ಹೇಗೆ ನಡೆದೀತು? ಮೂರು ವರುಷದ ಬುದ್ಧಿ ನೂರು ವರುಷದ ವರೆಗೆ" ಎನ್ನುವಂತೆ ಇವನು ಕೋಣನ ತಮ್ಮನೇ ಆಗತೊಡಗಿದ್ದಾನೆ. ಏನಾದರೂ ಮಾಡಿ ಇವನಿಗೆ ನಾಲ್ಕು ಅಕ್ಷರಗಳನ್ನು ಕಲಿಸಲಿಕ್ಕೇ ಬೇಕು.

" ಇವನು ಕಲಿತು ಮಾಡುವದಾದರೂ ಏನು ಬಿಡು. ನನ್ನ ಮಗನೇನು ವೈದಿಕರ ಕುನ್ನಿಯಲ್ಲ. ಬಡವನ ಮಗನಲ್ಲ. ಅವನು ಬುದ್ಧಿ ಇಲ್ಲದೇ ತಿನ್ನುತ್ತ ಕುಳಿತರೂ ತಲೆಮಾರು ಸವೆಯುದಷ್ಟು ಹೊಲಗಳಿವೆ.

" ಆದರೆ ನನ್ನ ಮಗನು ಧಡ್ಡನಾಗಿಯೇ ಉಳಿಯಬೇಕೆ?

" ಇದು ಕೂಡ ಅವನ ತಪ್ಪಲ್ಲ ಬಿಡು. ಸರಸ್ವತಿ ಬುದ್ಧಿ ಹಂಚುವ ಹೊತ್ತಿನಲ್ಲಿ ಪಾಪ! ನಮ್ಮ ಬಳವಂತ ಎಲ್ಲಿ ಹೋಗಿದ್ದನೋ ತಿಳಿಯದು. ಅವನು ತಿರುಗಿ ಬಂದಾಗ ಹಂಚುವುದು ಮುಗಿದುಹೋಗಿತ್ತು. ಇವನ ತಲೆ ಬುರುಡೆ ಖಾಲಿಯಾಗಿಯೇ ಉಳಿಯಬೇಕಾಯಿತು.

" ಈ ಹುಡುಗಾಟದ ಮಾತು ಇರಲಿ ಬಿಡಿರಿ. ಏನಾದರೂ ಮಾಡಿ ಇವನು ಓದುವಂತೆ ಮಾಡಿ ನನ್ನ ಮರ್ಯಾದೆ ಉಳಿಸಿರಿ. ಇವನ ಓರಿಗೆಯ ತಮ್ಮಣಭಟ್ಟರ ಮಗ ಈಗ ಸರಾಗವಾಗಿ ಓದತೊಡಗಿದ್ದಾನೆ.

" ತಮ್ಮಣಭಟ್ಟರ ಮಗನಿಗೂ ನಮ್ಮ ಮಗನಿಗೂ ಎಲ್ಲಿಯ ಸಾಮ್ಯವೇ? ಭಟ್ಟರ ಮಗನು ಓದದಿದ್ದರೆ ನೀರು ಹೊರಬೇಕಾಗುವದು. ನಾವು ಲಕ್ಷ್ಮಿಯ ಒಕ್ಕಲು. ವೈದಿಕ ಗೊಡ್ಡುಗಳ ಹಾಗೆ ನಾವೇನು ದರಿದ್ರ ಶಾರದೆಯ ಒಕ್ಕಲಲ್ಲ. ನನ್ನ ಮಗನು ಕಲಿಯದಿದ್ದರೂ ಗೌಡನಾಗಿ ಊರನ್ನಾಳುವನು ತಿಳಿಯತೆ? ನಾನಾದರೂ ಎಲ್ಲಿ ಕಲಿತಿದ್ದೆ ಹೇಳು?

" ಆದರೆ ನಿಮ್ಮ ವ್ಯವಹಾರ ಬುದ್ಧಿ........

ಹೆಂಡತಿ ಅಭಿಮಾನದಿಂದ ಗಂಡನನ್ನು ನೋಡಿದಳು.

" ಅದು ಪರಂಪರೆಯಾಗಿ ಇವನಿಗೂ ಬರುತ್ತಿದೆ. ನಮ್ಮ ಮನೆತನದಲ್ಲಿ ಕಲಿತರೆ ಆಗಿಬರುವದಿಲ್ಲ ತಿಳಿಯಿತೆ?

ಈ ಮುಂದೆ ಆ ತಾಯಿ ಮಗನ ವಿದ್ಯಾಭ್ಯಾಸದ ಬಗ್ಗೆ ನಿಶ್ಚಿಂತೆ ಯಿಂದಲೇ ಇದ್ದಳು.

ಒಮ್ಮೊಮ್ಮೆ ಬಳವಂತನು ತನ್ನ 'ಬಾಲಬೋಧೆ'ಯನ್ನು ತಾಯಿಗೆ ಕೇಳಿಸುವ ಹಾಗೆ ಭಯಂಕರವಾಗಿ ಓದುತ್ತಿದ್ದ. ತಾನು ಅವಳು ತಿಳಿದು ಕೊಂಡಷ್ಟು ಹೆಡ್ಡನಲ್ಲವೆಂದು ತೋರಿಸುವದೇ ಅವನ ಮುಖ್ಯೋದ್ದೇಶವಾಗಿ ರುತ್ತಿತ್ತು.

ಅವನು ಅಬ್ಬರದಿಂದ ಒಂದೊಂದೇ ಅಕ್ಷರಗಳನ್ನು ಹೊಂದಿಸಿಕೊಂಡು ಓದುವದನ್ನು ತಾಯಿ ಸಂತೋಷದಿಂದ ಕೇಳುತ್ತಿದ್ದಳು.

'ಛೀ! ಮಂಗಾ ಗಿಡಾ ಇಳಿ! ಇಣಚಿ ಗಿಡ ಏರಿತು. ಇಣಚಿ ಗಿಡ ಇಳಿಯಿತು........ನಾನು ಉಂಡೀ ದಶಮೀ ತಿನ್ನುತ್ತೇನೆ........ನೀನು ಏನು ತಿನ್ನುತ್ತೀ ?....ಪಟಾಕಿ ಢಂ ಎಂದಿತು....ಹನುಮನ ಎದೆ ಡುಬುಡುಬು ಹಾರಿತು....' ಮೊದಲಾದ ಪಾಠಪ್ರವಚನವನ್ನು ಕೇಳಿ ಗೌಡಸಾನಿಯ ಹರುಷ ಉಕ್ಕಿಬರುತ್ತಿತ್ತು. ಆದರಲ್ಲಿಯಂತೂ ಇದನ್ನು ಕೇಳಿದ ರೈತಮಕ್ಕಳು

"ಚಿಕ್ಕ ದಣೇರು ಕಲೇಕ್ಟರ ಸಾಬರಾಗೂಹಂಗ ಕಾಣತಾರೆ ಒಡತೀ" ಎಂದಾಗ ಆ ತಾಯಿಗೆ ಸ್ವರ್ಗ ಮೂರೆ ಬೆರಳು ಉಳಿಯುತ್ತಿತ್ತು.

ಗೌಡಸಾನಿಗೆ ಮಗನು ಹೀಗಾಗುವದನ್ನು ನೋಡಲಾರದೆ ಕಣ್ಣು ಮುಚ್ಚಿದಳು. ಮಗನ ಬುದ್ಧಿಯ ಆಳವನ್ನು ಅವಳು ಕೊನೆಗೂ ತಿಳಿಯು ವಂತಾಗಲಿಲ್ಲ.

ಭಾವೂರಾಯರ ಮರಣಾನಂತರ ಮನೆತನದ ಕಾರಭಾರವೆಲ್ಲ ಬಳವಂತರಾಯನ ಕೈಗೆ ಸ್ವಾಭಾವಿಕವಾಗಿ ಬಂದುಬಿಟ್ಟಿತು. ಅವನ ಕೈಗೆ ಬಂದಿತೆನ್ನುವದಕ್ಕಿಂತ ಕಾಶೀಬಾಯಿ ಗೌಡಸಾನಿಯಾದಳೆಂದು ಹೇಳುವದೇ ಹೆಚ್ಚು ಸತ್ಯಕ್ಕೆ ಸಮೀಪವಾದದು. ಅವಳು ಕುಶಾಗ್ರಮತಿಯಾಗಿದ್ದಳು. ಗಂಡನಲ್ಲಿಲ್ಲದ ಬುದ್ಧಿ ಅವಳಲ್ಲಿ ಕೇಂದ್ರೀಕೃತವಾಗಿತ್ತು. ದರ್ಪದ ಹೆಣ್ಣು. ಆದರೂ ಕುಲಾಚಾರ ಸಂಪನ್ನೆಯಾಗಿದ್ದಳು. ಗಂಡನ ಬುದ್ಧಿ ಮತ್ತೆಯ ಬಗ್ಗೆ ಅವಳಿಗೆ ಸಾಕಷ್ಟು ಅನುಭವವಿದ್ದುದರಿಂದ ಕಾಶೀಬಾಯಿ ಕೆಲಸವಿಲ್ಲದೆ ಉಂಡು ತಿರುಗುತ್ತಿದ್ದ ಸೋದರಮಾವ ಸೋಮಪ್ಪನನ್ನು ಕರೆಯಿಸಿಕೊಂಡಳು.

ಇದು ಎರಡನೆಯ ಮಗನಾದ ಭೀಮರಾಯನ ಮನಸ್ಸಿಗೆ ಬರದಿ ದ್ದರೂ ಆಗ ಏನೂ ಆಡುವಂತಿರಲಿಲ್ಲ. ಭೀಮರಾಯ ಸಧೃಡಕಾರ್ಯದ ಹುರಿಕಟ್ಟಿನ ಆಸಾಮಿಯಾಗಿದ್ದರೂ ಅವನಲ್ಲಿ ಅಣ್ಣನ ಬಗ್ಗೆ ಭಕ್ತಿಯಿತ್ತು.

ಹಿರಿಯತನದ ಗೌರವವಿತ್ತು. ಅತ್ತಿಗೆಯನ್ನು ಕೂಡ ಅವನು ತಾಯಿಯಂತೆ ಗೌರವಿಸುತ್ತಿದ್ದ.

ಆದರೆ ಭೀಮರಾಯನ ಹೆಂಡತಿ ಕಾಂತಾಬಾಯಿ ಮಾತ್ರ ಕಾಶೀಬಾಯಿಯ ಅಧಿಕಾರಕ್ಕೆ ಮತ್ಸರವನ್ನು ತಾಳತೊಡಗಿದಳು. ಕಾಂತಾ ದೊಡ್ಡ ಜಮೀನುದಾರರ ಮಗಳಾಗಿದ್ದಳು. ಮನೆಯ ಆಡಳಿತದಲ್ಲಿ ಕಾಶೀಬಾಯಿಗಿಂತ ತನಗೇ ಹೆಚ್ಚು ಗೊತ್ತಿದೆಯೆಂದು ಅವಳ ತಿಳುವಳಿಕೆಯಾಗಿತ್ತು ಆದರೆ ಕಾಶೀಬಾಯಿ ಇವಳನ್ನು ಅಡ್ಡಹಾಯಿಸಿಕೊಡುತ್ತಿರಲಿಲ್ಲ. ಕೇವಲ ಆಜ್ಞೆಗಳನ್ನು ಮಾತ್ರ ಅವಳು ಕೊಡುತ್ತಿದ್ದಳು. ಇದರಿಂದ ಕಾಂತಾಬಾಯಿಯಲ್ಲಿ ಅಸಮಾಧಾನದ ಕಿಚ್ಚು ಆಡತೊಡಗಿತು.

ಇದನ್ನು ಗಂಡನ ಮುಂದೆ ಅವಳು ಆಡುವಂತಿರಲಿಲ್ಲ. ಅಣ್ಣ-ಅತ್ತಿಗೆಯರ ಬಗ್ಗೆ ಭೀಮರಾಯನಲ್ಲಿರುವ ಗೌರವಭಾವವನ್ನು ಇವಳು ತಿಳಿದಿದ್ದುದೇ ಇದಕ್ಕೆ ಕಾರಣವಾಗಿತ್ತು.

ಅವಳು ತೆಪ್ಪಗಿದ್ದರೂ ಮೌನವಾಗಿ ಮಾತ್ರ ಇರುತ್ತಿರಲಿಲ್ಲ.

ಮಾವನ ಮರಣದಿಂದ ಈ ಇಬ್ಬರು ಸೊಸೆಯಂದಿರಲ್ಲಿ ಉದಯಿಸಿದ ಭಾವಗಳು ಬೇರೆಬೇರೆಯಾಗಿದ್ದರೂ, ಅಣ್ಣತಮ್ಮಂದಿರಲ್ಲಿ ಮಾತ್ರ ಏಕಸೂತ್ರತೆಯ ಪ್ರೇಮಳ ಭಾವವು ಸೂಸಿ ಹರಿಯುತ್ತಿತ್ತು. ಹಿರಿಯವರಾದ ಇಬ್ಬರೂ ಕಿರಿಯ ಇಬ್ಬರು ತಮ್ಮಂದಿರನ್ನು ಅಭಿಮಾನದಿಂದ ನೋಡುತ್ತಿದ್ದರು.

ವಿಠ್ಠಲನು ಪಟ್ಟಣದಲ್ಲಿ ಕಲಿಯುತ್ತಿದ್ದ. ಕಿರಿಯ ತಮ್ಮ ರಾಜಣ್ಣ ಅವನೊಡನೆಯೇ ಹಾಯಸ್ಕೂಲಿನಲ್ಲಿ ಓದುತ್ತಿದ್ದ.

ವಿಠ್ಠಲನು ಒಂದೊಂದು ವರ್ಗದಲ್ಲಿ ಏಸಿಲ್ಲವೆಂದರೂ ಎರಡೆರಡು ವರುಷ ಅಭ್ಯಾಸಮಾಡಿ ಈಗ ಹಾಯಸ್ಕೂಲ ವ್ಯಾಸಂಗದ ಕೊನೆಯ ಮೆಟ್ಟಿಲಿನ ಮೇಲೆ ನಿಂತಿದ್ದ. ರಾಜಣ್ಣ ಇದೀಗ ಅಲ್ಲಿ ಪ್ರವೇಶಿಸಿ ಅಣ್ಣನ ಕೋಣೆಯಲ್ಲಿರುತ್ತಿದ್ದ,

ಭಾವುರಾಯರು ಈ ಮಕ್ಕಳನ್ನು ಕಣ್ಣುಗೊಂಬೆಗಳಂತೆ ನೋಡುತ್ತಿದ್ದರಲ್ಲದೆ ಅವರಿಗೆ ಬೇಕು ಬೇಕಾದ ಸೌಕರ್ಯಗಳನ್ನು ಒದಗಿಸಿಕೊಡುತ್ತಿದ್ದರು.

ತಂದೆಯ ಅನಿರೀಕ್ಷಿತ ಸಾವಿನಿಂದ ಇವರು ತಬ್ಬಲಿಗಳಾದರೂ ಅಣ್ಣಂದಿರ ವಿಶ್ವಾಸದಲ್ಲಿ ಧೈರ್ಯದಿಂದಲೇ ಇದ್ದರು. ಹಿರಿಯ ಅಣ್ಣನನ್ನು ಅವರು ತಂದೆಯಂತೆ ಕಾಣುತ್ತಿದ್ದರು. ಭೀಮಣ್ಣನ ಬಗ್ಗೆ ಅವರಲ್ಲಿ ಭೀತಿ

ಇದ್ದರೂ ಅವನ ಅಂತಃಕರಣದ ಬಗ್ಗೆ ಅವರಲ್ಲಿ ಯಾವ ಕಲ್ಮಷವೂ ಇರಲಿಲ್ಲ.

ತಂದೆಯ ಸಾವಿನಿಂದ ನಿಜವಾಗಿಯೂ ತಬ್ಬಲಿಯಾದವಳು ಕೊನೆಯ ಮಗಳು ಸುಧಾ.

ತಾಯಿಯನ್ನು ಕಳೆದುಕೊಂಡು ಅನಾಥೆಯಾದ ಸುಧಾ ಈಗ ತಂದೆಯನ್ನು ಕಳೆದುಕೊಂಡು ಪರದೇಶಿಯಾದಳು.

ಆದರೆ ಅವಳಲ್ಲಿ ಈ ಭಾವ ಮೂಡದಂತೆ ಅಣ್ಣತಮ್ಮಂದಿರೆಲ್ಲ ದಕ್ಷವಾಗಿದ್ದರು.

ಅಚ್ಚೆಯ ಕೂಸಾದ ಸುಧಾ ಈಗಲೂ ಎಲ್ಲರ ಕಣ್ಣುಮಣಿಯಾಗಿಯೇ ಇದ್ದಳು.

ಅತ್ತಿಗೆಯರಿಬ್ಬರೂ ಇವಳನ್ನು ಮಗಳಂತೆ ನೋಡುತ್ತಿದ್ದರು. ಆದರೂ ಸುಧಾ ಪರದೇಶಿಯಂತೆಯೇ ಇರುತ್ತಿದ್ದಳು.

ತಂದೆಯ ಸಾವಿನಿಂದ ಅವಳಲ್ಲಿ ಈ ಭಾವ ಉಂಟಾದದ್ದು ದಿನ ಕಳೆದ ಹಾಗೆ ಕಡಿಮೆಯಾಗುವದೆಂದು ಎಲ್ಲರೂ ಅವಳನ್ನು ಮುದ್ದಿನ ಗೊಂಬೆಯಂತೆ ಕಾಣತೊಡಗಿದರು.

ರಾಜಣ್ಣನಂತೂ ಅವಳನ್ನು ಬಿಟ್ಟು ಅರೆಕ್ಷಣ ಕೂಡ ಇರುತ್ತಿರಲಿಲ್ಲ.

ರಾಜಣ್ಣನೆಂದರೆ ಸುಧೆಗೂ ಅಚ್ಚುಮೆಚ್ಚು.

ತಂದೆಯ ಮರಣಾನಂತರ ತಮ್ಮಂದಿರನ್ನು ತಂದೆಯ ಸಮಾನವಾಗಿ ನಡೆಯಿಸಿಕೊಳ್ಳಬೇಕೆಂಬ ಅಂತಃಕರಣದ ಭಾವ ಬಳವಂತರಾಯನಲ್ಲಿ ತುಂಬಿನಿಂತಿತು. ಭೀಮರಾಯನನ್ನು ಅವನು ಅತ್ಯಂತ ಆದರದಿಂದ ನೋಡತೊಡಗಿದ. ಕಿರಿಯುವರಿಬ್ಬರನ್ನಂತೂ ಅವನು ಕಂದಮ್ಮಗಳಂತೆ ಅಕ್ಕರೆ ಮಾಡತೊಡಗಿದ. ಸುಧಾ ಸದಾಕಾಲ ಅವನ ಹತ್ತರವೇ ಇರುತ್ತಿದ್ದಳು.

ಈ ಭಾವವು ಕೃತಕವಾಗಿರಲಿಲ್ಲ. ಸೋದರಿಕೆಯ ಅಂತಃಕರಣವು ಬಳವಂತರಾಯನಲ್ಲಿ ಬುಗ್ಗೆಯಾಗಿ ಹೊರಸೂಸುತ್ತಿತ್ತು. ಇದು ಎಲ್ಲರಲ್ಲಿಯೂ ರಸದ ಒರಕೆಯಾಗಿ ಪ್ರವಹಿಸತೊಡಗಿತು.

ಅಂದು ವಿಠ್ಠಲ, ರಾಜಣ್ಣ ಪಟ್ಟಣಕ್ಕೆ ಹೋಗುವವರಿದ್ದರು. ಸ್ವತಃ ಭೀಮರಾಯನೇ ಅವರನ್ನು ಅಲ್ಲಿಯವರೆಗೆ ಹೋಗಿ ಕಳಿಸಿಬರಬೇಕೆಂದು ಹಿರಿಯ ಅಣ್ಣ ಆಜ್ಞೆ ಇತ್ತನು. ಈ ಕೆಲಸವನ್ನು ಪ್ರತಿಸಲ ಭಾವೂರಾಯರೇ ಮಾಡುತ್ತಿದ್ದರು. ತಮ್ಮಂದಿರಿಗೆ ಈ ಕೊರತೆ ಎನಿಸಬಾರದೆಂದು ಬಳವಂತನು ಮುಂಜಾಗ್ರತೆ ವಹಿಸಿದನು.

ಆ ದಿನ ವಿಠ್ಠಲನಿಗೂ, ರಾಜಣ್ಣನಿಗೂ ತಂದೆಯ ನೆನಪಾಯಿತು. ಇಡೀದಿನ ಅವರ ಕಣ್ಣೊಳಗಿಂದ ನೀರು ತಪ್ಪಲಿಲ್ಲ. ಅವರ ಹೃದಯದಲ್ಲಿ ಅದಾವುದೋ ತುಂಬಿ ಬಾರದ ಕೊರತೆಯ ಕೊರಕಲುಬಿದ್ದ ಅನುಭವವಾಗ ತೊಡಗಿತು.

ಈ ಅಣ್ಣಂದಿರ ಕಣ್ಣೀರುಗಳನ್ನು ನೋಡಿ ಸುಧಾ ತಾನೂ ಅಳತೊಡಗಿದಳು.

" ಅಳಬಾರದು ಸುಧಾ! ನೀನೇತಕ್ಕೆ ಅಳುತ್ತೀಯೆ ? " ರಾಜಣ್ಣ ಅವಳ ಕಣ್ಣೀರು ತೊಡೆಯುತ್ತ ತಾನೂ ಗದ್ಗದ ಕಂಠದಿಂದ ಕೇಳಿದ.

" ಮತ್ತೆ ನೀನೇತಕ್ಕೆ ಅಳುತ್ತೀ ಹೇಳು ರಾಜಣ್ಣ. ವಿಠ್ಠಲಣ್ಣ ಏಕೆ ಅಳುತ್ತಾನೆ ?

ಅಲ್ಲಿಯ ವರೆಗೆ ದೂರ ಸಿಡಿದು ನಿಂತ ವಿಠ್ಠಲನು ಈ ಮಾತನ್ನು ಕೇಳಿ ಸುಧೆಯನ್ನು ಅಪ್ಪಿಕೊಂಡು ಅತ್ತುಬಿಟ್ಟನು.

" ತಂಗಿ !

" ಅಣ್ಣ ! ನಿಮಗೆ ಅಪ್ಪನ ನೆನಪಾಯಿತೇನು ?

" ಹುಚ್ಚಮ್ಮ! ನಮ್ಮ ಅಪ್ಪನು ಮರೆಯುವ ಅಪ್ಪನೇನು ? ಆದರೆ ನಾನು.... ನೀನು.... ಅಳಬೇಡ.... ಸುಧಾ !.... ನಾವು ಎಷ್ಟು ಅತ್ತರೇನು ? ಎಷ್ಟು ಕಣ್ಣೀರು ಹಾಕಿದರೇನು ? ಅಪ್ಪನನ್ನು ಮರಳಿ ಪಡೆಯಬಹುದೇ ಹೇಳು ?

" ಆದರೆ ಅಣ್ಣಾ !

" ಏನು ಹೇಳು !

" ನಾನು ಅಪ್ಪನನ್ನು ದಿನಾಲು ಕಾಣುತ್ತೇನೆ, ಬಾಳಣ್ಣನ ಮುಖ ದಲ್ಲಿ ಅಪ್ಪನ ಮುಖವೇ ನನಗೆ ಕಾಣುತ್ತದೆ. ನನಗೆ ಬಾಳಣ್ಣನೇ ಅಪ್ಪ ನಲ್ಲವೇನು ?

" ಸರಿಯಾಗಿ ಹೇಳಿದಿ ತಂಗಿ! ನನಗೂ ಇನ್ನು ಮೇಲೆ ಅವನೇ ತಂದೆ. ರಾಜಣ್ಣನಿಗೂ ಅವನೇ ತಂದೆ. ಭೀಮಣ್ಣನಿಗೂ ಅವನೇ ತಂದೆ. ಈ ಮನೆತನವನ್ನು ತಂದೆಯಂತೆ ನೋಡಿಕೊಳ್ಳುವವನು ಅವನೇ ಅಲ್ಲವೇನು.

ಈ ಎಲ್ಲ ಮಾತುಗಳನ್ನು ಹೊರಗೆ ನಿಂತ ಬಳವಂತರಾಯನೂ ಭೀಮರಾಯನೂ ಕೇಳಿದರು.

ಅವರ ಹೃದಯ ತುಂಬಿಬಂದಿತು.

ಇಬ್ಬರ ಕಣ್ಣುಗಳೊಳಗಿಂದಲೂ ಪಳಕ್ಕನೆ ನೀರು ಚಿಮ್ಮಿದವು. ಮಾತಾಡಲು ಕಂಠಕ್ಕೆ ಶಕ್ತಿ ಸಾಲದಾಯಿತು.

ಅವರಿಬ್ಬರೂ ಉಗುಳುನುಂಗತೊಡಗಿದರು.

ಆದರೆ ಕಣ್ಣೀರು ಮಾತ್ರ ಕೋಡಿಯಾಗಿ ಹರಿಯುತ್ತಿದ್ದವು.

" ರಾಜೂ !

" ಅಣ್ಣ !

ಆಗಲೇ ರಾಜಣ್ಣ ಬಳವಂತನ ಅಪ್ಪುಗೆಯಲ್ಲಿ ಬಂಧಿತನಾದನು. ಬಳವಂತರ ಕೈ ಅವನ ಕೂದಲಗಳಲ್ಲಿ ಆಡುತ್ತಿತ್ತು. ಕಣ್ಣೀರು ಆ ತಲೆಯ ಮೇಲೆ ತಟಕಿಕ್ಕುತ್ತಿತ್ತು.

" ಇಲ್ಲಿ ಬಾ! ವಿಠ್ಠಲ!

ವಿಠ್ಠಲ ಕಣ್ಣೀರನ್ನು ತೊಡೆದುಕೊಳ್ಳುತ್ತ ಅಣ್ಣನ ಪಕ್ಕದಲ್ಲಿ ಬಂದು ನಿಂತನು.

" ಭೀಮಣ್ಣ ! ಆ ಸುಧೆಯನ್ನು ಕರೆದುಕೋ. ಹುಚ್ಚಿಯ ಹಾಗೆ ಅಳುತ್ತಾಳೆ ನೋಡು.

" ನಾನು ಅಳುವದಿಲ್ಲ ಬಾಳಣ್ಣ !

ಸುಧಾ ಅಳುತ್ತಲೇ ಹೇಳಿದಳು.

ಈ ಅಳುವು ಎಲ್ಲರಲ್ಲಿಯೂ ದುಃಖವನ್ನು ಒತ್ತರಿಸಿತು. ಕೆಲಹೊತ್ತು ಎಲ್ಲ ಕಡೆಗೂ ಮೌನ ಆವರಿಸಿತು.

" ಇಂದು ಸಾಯಂಕಾಲ ನೀವು ಪಟ್ಟಣಕ್ಕೆ ಹೋಗುವಿರೆಂದು ನಿಮಗೆ ದುಃಖವೆ? ಅಪ್ಪನನ್ನು ನೆನೆದು ನೀವು ಅಳಬಾರದು. ನಾನು ನಿಮಗೆ ಅಪ್ಪನನ್ನು ತಂದುಕೊಡಲಾರೆ. ಆದರೆ ಅವನೇ....ನಾನಾಗಿ ನಿಮ್ಮನ್ನು ನೋಡಿಕೊಳ್ಳುತ್ತೇನೆ. ನಿಮಗೆ ಯಾವ ಕೊರತೆಯೂ ಆಗುವದಿಲ್ಲ. ತಂದೆ ನಮಗೆಲ್ಲ ಸಾಕಷ್ಟು ಇಟ್ಟಿದ್ದಾರೆ. ಅದು ಎಷ್ಟು ಎಂಬುದು ನನಗೆ ಇನ್ನೂ ತಿಳಿದುಕೊಳ್ಳಬೇಕಾಗಿದೆ. ಭೀಮಣ್ಣನಿಗೆ ಆ ಕೆಲಸ ಒಪ್ಪಿಸುತ್ತೇನೆ. ನಿಮ್ಮ ವಿದ್ಯಾಭ್ಯಾಸವಲ್ಲಿ ಯಾವ ಕೊರತೆಯೂ ಆಗಲಾರದು. ಈ ಮಾತನ್ನು ನಾನು ಸ್ವರ್ಗದಲ್ಲಿರುವ ತಂದೆಯನ್ನು ಸ್ಮರಿಸಿ ಹೇಳುತ್ತೇನೆ.

" ಅಣ್ಣಾ ! ಅಣ್ಣಾ !" ಎಂದು ವಿಠ್ಠಲನು ಬಿಕ್ಕಳಿಸಿದನು.

" ಇಲ್ಲಿಕೇಳು ವಿಠ್ಠಲ! ರಾಜಣ್ಣ ಇನ್ನೂ ಮಗುವಾಗಿದ್ದಾನೆ. ಇವನನ್ನು ನಿನಗೆ ಒಪ್ಪಿಸುತ್ತೇನೆ. ಅವನಿಗೆ ಯಾವುದನ್ನೂ....ಕಡಿಮೆ

ಮಾಡಬೇಡ....ಅವನು ಬೇಕಾದದ್ದನ್ನು ತಿನ್ನಲಿ....ಬೇಕಾದಷ್ಟು ಖರ್ಚು ಮಾಡಲಿ....ರಾಜೂ !....ವಿಠ್ಠಲನು ಹೇಳಿದಂತೆ ಕೇಳುತ್ತಿರು ತಮ್ಮಾ........

ರಾಜೂ ಮತ್ತೆ ಅಳಹತ್ತಿದನು. ಬಳವಂತ ಅವನನ್ನು ಬಲವಾಗಿ ಆಲಿಂಗಿಸಿ 'ಹುಚ್ಚಪ್ಪ !' ಎಂದು ತಲೆ ಸವರತೊಡಗಿದನು.

ಈ ಅಚ್ಚುಮೆಚ್ಚಿನ ಮೈದುನರಿಗೆ ಇಬ್ಬರೂ ಅತ್ತಿಗೆಯರು ಇಡೀದಿನ ಕುಳಿತು ಬೇರೆಬೇರೆ ರುಚಿಯ ತಿಂಡಿ ತಿನಿಸಲುಗಳನ್ನು ಮಾಡಿ ಕಟ್ಟಿಟ್ಟರು. ರಾಜಣ್ಣನಿಗೆ ಚಕ್ಕುಲಿಯ ಮೇಲೆ ಪ್ರೀತಿ ; ವಿಠ್ಠಲನಿಗೆ ಸಜ್ಜಿಗೆಯ ಉಂಡಿಯ ಮೇಲೆ ಪ್ರೀತಿ. ಇವನ್ನು ಪುಷ್ಕಳವಾಗಿ ಮಾಡಿ ಡಬ್ಬಿ ತುಂಬಿದರು.

ಹೊರಡುವ ಸಮಯ ಸನ್ನಿಹಿತವಾಗತೊಡಗಿದಂತೆ ವಾತಾವರಣದಲ್ಲಿ ಮತ್ತೆ ಅಕ್ಕರೆಯ ವಿರಹದ ಉದ್ವೇಗವು ತುಂಬಹತ್ತಿತು. ರಾಜಣ್ಣನು ತಂದೆಯ ಮಂಚದ ಮೇಲೆ ಸ್ವಸ್ಥವಾಗಿ ಕುಳಿತುಬಿಟ್ಟಿದ್ದನು. ವಿಠ್ಠಲನು ಹಿರಿಯ ಅತ್ತಿಗೆಯೊಡನೆ ಯಾವುದೋ ಮಾತಿನಲ್ಲಿ ನಿರತನಾಗಿದ್ದನು.

ಸ್ವತಃ ಬಳವಂತಗೌಡರೇ ತಮ್ಮಂದಿರ ಸಾಮಾನುಗಳನ್ನು ಬಂಡಿಯಲ್ಲಿಟ್ಟುಬಂದರು. ಸುಮ್ಮಸುಮ್ಮನೇ ಬಂದು ಗೂಟದಮೇಲಿರುವ ಅಂಗಿಯನ್ನು ಇನ್ನೊಂದು ಗೂಟಕ್ಕೆ ತಗುಲಿಸಿ ಮತ್ತೆ ಅದನ್ನು ಅಲ್ಲಿಂದ ತೆಗೆದು ಮೊದಲಿನ ಗೂಟದ ಮೇಲೆಯೇ ಹಾಕಿದರು.

ಭೋ ಎಂದು ಅಳುತ್ತಿರುವ ರಾಜಣ್ಣನನ್ನು ಹೆಗಲಮೇಲೆ ಕೈ ಹಾಕಿ ಭೀಮಣ್ಣನು ಒಳಗಿನ ಕೋಣೆಯಿಂದ ಕರೆದುಕೊಂಡು ಬಂದನು. ಈ ದೃಶ್ಯವನ್ನು ನೋಡಿ ಬಳವಂತರಾಯನ ಹೃದಯ ಬಿರಿಯಿತು.

"ಅವನು ಹೋಗದಿದ್ದರೆ ಬಿಡಲಿ ಬಿಡು ಭೀಮಣ್ಣ ! ರಾಜೂ ! ಅಳುತ್ತೀಯಾಕೆ....ಹೇಳು........

"ನಾನು....ಅಳುವದಿಲ್ಲ ಅಣ್ಣ....ನಾನು ಕಲಿಯಲು ಹೋಗುತ್ತೇನೆ. ....ಹೋದಸಲ....ಅಪ್ಪನು ನನ್ನನ್ನು........ಕಲಿಸಲಿಕ್ಕೆ........ಅಯ್ಯೋ !.... ಈ ಹೊತ್ತು....ಅಪ್ಪ....ಅಪ್ಪ....ಅಪ್ಪ !

ರಾಜಣ್ಣ ತಂದೆಯನ್ನು ನೆನೆದು ಘೋರವಾಗಿ ಅತ್ತನು. ಈ ದೃಶ್ಯ ಹೃದಯಸ್ಪರ್ಶಿಯಾಗಿತ್ತು. ಬಳವಂತರಾಯ ಇಷ್ಟು ಚಿಕ್ಕಮಗುವಿನ ಹಾಗೆ ಅತ್ತದ್ದನ್ನು ಈವರೆಗೆ ಯಾರೂ ನೋಡಿರಲಿಲ್ಲ.

"ದಣಿಯರೆ !....ಇದೇನು....ನೀವು ?

ರೈತಾಳು ತಾನೂ ಧೋತರ ಚುಂಗಿನಿಂದ ಕಣ್ಣೊರಸಿಕೊಂಡು ಕೇಳಿದನು.

ಬಳವಂತರಾಯನು ಒಮ್ಮೆ ಖೇಕರಿಸಿ ಗಂಟಲು ಸರಿಮಾಡಿಕೊಂಡು ಕಣ್ಣುಗಳಲ್ಲಿ ನೀರು ತುಳುಕುತ್ತಿರುವದನ್ನು ಗಮನಿಸದೆ....'ಗಾಡಿ ಬಂದು ನಿಂತಿದೆ. ನಡೆಯಿರಿ' ಎಂದು ತಮ್ಮಂದಿರನ್ನು ಉದ್ದೇಶಿಸಿ ಯಾರಿಗೋ ಹೇಳಿದನು. "ಅತ್ತಿಗೆ!" ರಾಜಣ್ಣ ಹಿರಿಯ ಅತ್ತಿಗೆಯ ಕಾಲುಹಿಡಿದ.

ಕಾಶಿಬಾಯಿ ಕರಗಿ ನೀರಾಗಿ ಹೇಳಿದಳು.

"ಭಾವಜೀ!" ವಿಠ್ಠಲಭಾವಜಿಯವರು ನಿಮ್ಮ ಸಂಗಡಲೇ ಇರುತ್ತಾರೆ. ನೀವು ಏನು ಕಾಳಜಿ ಮಾಡಬೇಡಿರಿ. ಹಾಕಿ!

ಕಾಂತಾಬಾಯಿಗೆ ನಮಸ್ಕಾರ ಮಾಡಿದಾಗ ಅವಳು ಮೈದುನರಿಬ್ಬರನ್ನೂ ಮೈದಡವಿ ಹೇಳಿದಳು.

"ನನ್ನ ಜೀವ ನಿಮ್ಮ ಸುತ್ತಲೇ ಇರುತ್ತದೆ. ಆಗಾಗ ಪತ್ರ ಬರೆಯುತ್ತಿರಿ.

"ಅಣ್ಣಾ!....ಹೋಗಿಬರುತ್ತೇವೆ!

ಇಬ್ಬರೂ ಬಳವಂತನ ಕಾಲಿಗೆ ಬಿದ್ದರು.

ಬಳವಂತಗೌಡನಿಂದ ಮಾತು ಹೊರಬರಲಿಲ್ಲ. ಅವರಿಬ್ಬರ ಹೆಗಲ ಮೇಲೆ ಕೈಹಾಕಿಕೊಂಡು ಅವರನ್ನು ತಂದೆಯ ಕೋಣೆಗೆ ಕರೆದುಕೊಂಡು ಹೋದನು. ಅಲ್ಲಿ ಭಾವೂರಾಯರ ತೈಲಚಿತ್ರವು ಭವ್ಯವಾಗಿ ತೂಗಾಡುತ್ತಿತ್ತು.

"ನಾವೆಲ್ಲರೂ ಇಲ್ಲಿ ನಮಿಸೋಣ!

ಎಂದು ಬಳವಂತಗೌಡನು ತಾನೇ ಮೊದಲು ಆ ಚಿತ್ರದ ಮುಂದೆ ಅಡ್ಡಬಿದ್ದನು.

ಈಗ ಮಾತ್ರ ಭೀಮಣ್ಣನಿಂದ ತಡೆದುಕೊಳ್ಳುವದಾಗಲಿಲ್ಲ. ಅವನ ಹೃದಯದ ಒಡ್ಡು ಕರಗಿ ನೀರಾಗಿಬಿಟ್ಟಿತು.

"ನೀನೂ ಹೀಗೆ ಮಾಡಿದರೆ ನನ್ನ ಗತಿಯೇನು ಭೀಮಣ್ಣಾ!

ಬಳವಂತಗೌಡ ತಮ್ಮನ ಹೆಗಲ ಮೇಲೆ ಕೈಯಿಟ್ಟು ಕೇಳಿದನು.

"ಅಣ್ಣಾ! ಅಪ್ಪನದು ಅನಿರೀಕ್ಷಿತ ಸಾವು....ಅವನನ್ನು ಹೇಗೆ ಮರೆಯುವದು?....ಆಗಲಿ....ನನಗೆ....ದೇವರೇ!........ನಡೆಯಿರಿ. ಗಾಡಿ ಬಂದುನಿಂತಿದೆ....ಎಂದು ಭೀಮಣ್ಣ ಸರಕ್ಕನೆ ಹೊರಬಿದ್ದನು.

ಅನೇಕ ಸಂಗತಿಗಳಿಂದ ತುಂಬಿಕೊಂಡ ಅವನ ಮನಸ್ಸು ಉದ್ವಿಗ್ನವಾಗಿತ್ತು.

ತಮ್ಮಂದಿರನ್ನು ಊರ ಹೊರತನಕ ಕಳಿಸಿಬಂದ ಬಳವಂತಗೌಡನು ನೇರವಾಗಿ ಮಾವಿನ ತೋಪಿನ ಕಡೆಗೆ ನಡೆದನು. ಆ ದಿನ ಆ ಹಳ್ಳದ ಬದಿಯಲ್ಲಿ ಬೋರಲಾಗಿ ಬಿದ್ದ ತಂದೆಯ ಶವದ ಸ್ಮರಣೆಯಾಯಿತೇನೊ? ಅವನು ತತ್ತರಿಸಿದನು. ಅವಡುಗಚ್ಚಿದನು. ಅವನ ಮಂದಬುದ್ಧಿಯಲ್ಲಿಯೂ ಕ್ಷಣಕಾಲ ಹುಂಬತನ ಸಂಚರಿಸಿತು.

"ಈ ಕೆಲಸವನ್ನು ಮಾಡಿದವರು ಯಾರಾಗಿರಬಹುದು? ಮಾಳಣ್ಣನು ಇದನ್ನು ಮಾಡಿರಬಹುದೆಂದರೆ ಹೇಗೆ ನಂಬುವದು? ಅವನಿಗೆ ಪ್ರಚೋದನೆ ಕೊಟ್ಟವರು ಮತ್ತೆ ಯಾರಾದರೂ ಇರಬಹುದು? ಅವರು ಯಾರಾಗಿರಬಹುದು?

ಬಳವಂತನಲ್ಲಿ ಗೌಡಬುದ್ಧಿ ಕೆಲಸಮಾಡತೊಡಗಿತು! ಆದರೆ ಈಗ ಆಗಬಾರದ್ದು ಆಗಿಹೋಗಿದೆ. ಬೆದಕೆ ಮಾಡುವದೇನು? ಇಲ್ಲದ ಸಂದೇಹದಿಂದ ಇದ್ದವರನ್ನು ಕಾಡತೊಡಗಿದರೆ ಸತ್ತವನನ್ನು ಮರಳಿ ಪಡೆದಂತೆ ಆಗಬಹುದೆ?"

ಆದರೆ ತಂದೆಯನ್ನು ಕೊಂದವನು ಜೀವಂತವಿರುವಾಗ ಆ ಮಾಳಣ್ಣನನ್ನು ಜೀವಂತ ಹುಗಿಯದೆ ನಾವು ಬದುಕಿ ಬಾಳಬಹುದೆ?

ಬಳವಂತಗೌಡ ಅವಡುಗಚ್ಚಿದನು. ತಮ್ಮಂದಿರನ್ನು ಕಳಿಸಿ ಬರುವಾಗಿನ ಅಂತಃಕರಣದ ಸೂಕ್ಷ್ಮ ಭಾವನೆಗಳು ಈಗ ನಷ್ಟವಾಗಿ ಯಾವುದೋ ಸೇಡಿನ ಬುದ್ಧಿ ಉತ್ಪನ್ನವಾಯಿತು. ಅವನು ಕ್ರುದ್ಧವಾದನು. ತನ್ನ ಅಧಿಕಾರದ ಅರಿಕೆಯಿಂದ ಅವನಲ್ಲಿ ಶಕ್ತಿ ಸಂಚಾರವಾದಂತಾಯಿತು. ಅವನು ಆಗಲೇ ಪ್ರತಿಜ್ಞೆ ಮಾಡಿದನು.

"ಮೂರು ದಿನಗಳಲ್ಲಿ ಮಾಳಣ್ಣ ಸಾಯಲೇಬೇಕು. ಅವನ ಹೆಣ ಚಾವಡಿಯ ಮುಂದಿನ ಬೇವಿನಗಿಡದ ಟೊಂಗೆಗೆ ನೇತಾಡಬೇಕು. ಹಿರಿಯ ಗೌಡರನ್ನು ಕೊಂದವನು ಜೀವಂತವಿರಕೂಡದು."

ಆದರೆ ಬಳವಂತಗೌಡನ ಪ್ರತಿಜ್ಞೆ ಮಾತ್ರ ಈಡೇರಲಿಲ್ಲ. ಅದಕ್ಕೆ ಮಾಳಣ್ಣನೇ ಕಾರಣನಾದನು.

ಈ ಭೀಷ್ಮಪ್ರತಿಜ್ಞೆ ಮಾಡಿದ ಗೌಡನು ಬಿರಬಿರನೆ ಮನೆಯ ಕಡೆಗೆ ನಡೆದಾಗ ಓಲೇಕಾರನು ಓಡುತ್ತ ಬಂದು ಮುಜುರೆ ಮಾಡಿ ಹೇಳಿದನು.

"ದಣೆಯದೆ!

"ಏನು ಸುದ್ದಿ ಚೀರಾ! ಓಡುತ್ತಲೇ ಬಂದಿದ್ದೀಯಲ್ಲ!

" ಮಾಳಣ್ಣನು........

" ಏನು ಮಾಳಣ್ಣನನ್ನು ನೀನೇ ಕೊಂದುಬಂದೆಯಾ ? ಶಾಬಾಸ್ !

" ನಾನೇಕೆ ಕೊಲ್ಲಲಿ ದಣಿಯರೆ ! ಅವನೇ ನಮ್ಮ ಹಾಳುತೋಟದ ಬಾವಿಯಲ್ಲಿ ತೇಲಾಡತೊಡಗಿದ್ದಾನೆ.

" ಏನು ಮಾಳಣ್ಣನು ಸತ್ತುಹೋದನೆ ?

" ಅವನ ಹೆಣ ಭೀಕರವಾಗಿ ತೇಲಾಡುತ್ತದೆ.

ಬಳವಂತಗೌಡನು ಹಾಳತೋಟದ ಕಡೆಗೆ ಹೋಗಿನೋಡುವಷ್ಟರಲ್ಲಿ ಅಲ್ಲಿ ಆಗಲೇ ಜನಜಾತ್ರೆ ನೆರದಿತ್ತು. ಮಾಳಣ್ಣನ ಹೆಣವನ್ನು ನೀರಿನಿಂದ ಹೊರತೆಗೆದು ಮೇಲೆ ಹಾಕಿ ಅರಿವೆಯನ್ನು ಹೊದಿಸಲಾಗಿತ್ತು.

ದಣಿಯರು ಹೆಣವನ್ನೊಮ್ಮೆ ದಿಟ್ಟಿಸಿ ನೋಡಿದರು. ಮತ್ತೆ ನೋಡಲು ಆಗಲಿಲ್ಲ.

ತಮ್ಮ ಅಧಿಕಾರೀವರ್ಗದವರನ್ನು ಕರೆದು ಗೌಡರು ಹೇಳಿದರು.

" ಈ ಹೆಣವನ್ನು ಸುಟ್ಟುಬಿಡಿರಿ.

" ಆದರೆ............" ಅವರ ಅಧಿಕಾರಿ ನಮ್ರವಾಗಿ ಕೇಳಿದನು.

" ಈ ಊರಲ್ಲಿ ಕಟ್ಟಿಗೆಗಳಿಗೇನು ಕೊರತೆ ? ನಮ್ಮ ಕೊರಡಗಳಲ್ಲಿಯೇ ಕೆಲವನ್ನು ತೆಗೆದುಕೊಳ್ಳಬಹುದು.

" ಮಾತು ಇದಲ್ಲ ಗೌಡರೆ !

" ಮತ್ತೆ !

" ಇದು ಸ್ವಾಭಾವಿಕವಾದ ಸಾವಲ್ಲ.

" ಸತ್ತದ್ದು ನಿಜವಷ್ಟೆ !

" ಇದು ಆತ್ಮಹತ್ತ್ಯೆಯ ಸಾವು.

" ಆದರೂ ಸತ್ತಿದ್ದಾನೆ.

" ಎಂತಲೇ ಕೂಡಲೇ ಸುಡಲು ಬರಲಾರದು. ನಾವು ಯೋಗ್ಯ ಕ್ರಮ ಕೈಕೊಳ್ಳಬೇಕು.

" ಬೇಕಾದ ಕ್ರಮ ಕೈಕೊಳ್ಳಿರಿ. ಆದರೆ ತಂಗಳ ಹೆಣ ಮಾಡ ಬೇಡಿರಿ.

ಗೌಡರ ಗಂಭೀರ ಅಜ್ಞಾನದ ಬಗ್ಗೆ ಬಾಯಿಬಿಡುವ ಧೈರ್ಯ ಯಾರಿಗೂ ಇರದ್ದರಿಂದ ಇಂಥ ಕೆಲಸಗಳಲ್ಲಿ ತರಬೇತು ಹೊಂದಿದ ಕಾರ ಕೂನನು ಕೂಡಲೇ 'ಪಂಚನಾಮೆ'ಯ ಕೆಲಸವನ್ನು ಆರಂಭಿಸಿದನು.

ಬಳವಂತಗೌಡರು ಗೌಡರಾದಮೇಲೆ ಅಂಕಿತ ಹಾಕಿದ್ದು ಇದೇ ಮೊದಲನೆಯ ಬಾರಿ.

ಈ ಅಂಕಿತ ಹಾಕುವಾಗ ಅವರ ಎದೆ ಉಬ್ಬಿಬಂದಿತು. ಅಧಿಕಾರದ ಸೆಳಕು ಸುಳಿದಂತಾಯಿತು. ಸತ್ತವನ ಬಗ್ಗೆ ಬರೆದ ಕಾಗದವಾದರೇನಾಯಿತು ? ಬಳವಂತರಾಯನು ಬಳವಂತಗೌಡನಾಗಿ ಅಂಕಿತ ಹಾಕಿದ್ದು ಸುಳ್ಳೇನು ?

ಮಾಳಣ್ಣನ ಶವಕ್ಕೆ ಸಂಸ್ಕಾರವಾಗುವದನ್ನು ನೋಡುತ್ತಿದ್ದ ಗೌಡರ ಸೇಡಿನ ಬುದ್ಧಿಗೂ ಅಗ್ನಿಸಂಸ್ಕಾರವಾದಂತಾಯಿತು.

ಅಂದಿನಿಂದ ಮುಂದೆ ಎಂದೆಂದಿಗೂ ಅವರು ತಂದೆಯ ಹಂತಕನನ್ನು ನೆನೆಯಲಿಲ್ಲ.

ಜೀವನದ ವಿಸ್ತಾರಪ್ರಪಂಚದಲ್ಲಿ ಬಳವಂತಗೌಡನಿಗೆ ಯಾವುದಕ್ಕೆ ವ್ಯವಧಾನ ಸಿಕ್ಕೀತು ?

ಜೀವನವೆಂದರೆ ಅದೇನು ಹೂವಿನ ಹಾಸಿಗೆಯೇ ?

# ೨

ಬಳವಂತರಾಯನ ಮಂದಬುದ್ಧಿಗೆ ಅವನು ಗೌಡನಾದಮೇಲೆ ಸಾಣೆ ಹಿಡಿದಂತಾಯಿತು. ಅಧಿಕಾರದ ದರ್ಪ, ಹಿರಿಯತನದ ಗೌರವ, ಶ್ರೀಮಂತಿಕೆಯ ಹೆಮ್ಮೆ, ಇವೆಲ್ಲ ಏಕಕಾಲಕ್ಕೆ ಕೂಡಿದ ಗೌಡನನ್ನು ಈಗ ಹಿಡಿಯುವವರೇ ಯಾರೂ ಇರಲಿಲ್ಲ.

ಗಂಡನದು ಮಂದಬುದ್ಧಿಯೆಂದು ತಿಳಿದ ಕಾಶೀಬಾಯಿಗೆ ಈಗ ಅವನದು ಅದೆಂತಹ ಆಳಿಕೆಯ ಬುದ್ಧಿ ಎಂಬುದರ ಅರಿವಾಗತೊಡಗಿತು. ಇದರಿಂದ ಅವಳಿಗೆ ಸಂತೋಷವಾದರೂ ಗಂಡನು ತನ್ನ ಹಿಡಿತದಿಂದ ಅದೆಲ್ಲಿ ದೂರ ಸಿಡಿಯುವದೋ ಎಂಬ ಬಗ್ಗೆ ಅಂಜಿಕೆಯೂ ಆಯಿತು.

ಆದರೆ ಗೌಡನು ಯಾವಾಗಲೂ ಚುರುಕಾಗಿ ಇರುತ್ತಿರಲಿಲ್ಲ. ತಿಂಗಳಿನಲ್ಲಿ ಇಪ್ಪತ್ತು ದಿನಗಳ ವರೆಗಾದರೂ ಅವನು ತೀರಾ ಆಲಸಿಯಾಗಿರುತ್ತಿದ್ದನು. ಒಳಗಿನ ಕೋಣೆಯನ್ನು ಬಿಟ್ಟು ಹೊರಬೀಳುತ್ತಿರಲಿಲ್ಲ. ಆ ವೇಳೆಯಲ್ಲಿ ಸೋಮಪ್ಪನದೇ ಕಾರಭಾರ. ಕಾಶೀಬಾಯಿದೇ ಅದ್ದೂರಿ.

ಭೀಮರಾಯನಿಗೆ ಇದು ಸರಿಬೀಳುತ್ತಿರಲಿಲ್ಲವಾದರೂ ತಾನು ಏನಾದರೂ ಮಾತನಾಡಿದರೆ ಅಣ್ಣನೆಲ್ಲಿ ನೊಂದುಕೊಳ್ಳುವನೋ ಎಂದು ಸುಮ್ಮನಿರುತ್ತಿದ್ದನು.

ಕಾಂತಾಬಾಯಿ ದಿನಾಲು ಕಾಶಿಬಾಯಿಯ ವಿರುದ್ಧ ಏನಾದರೂ ದೂರುತಂದು ಗಂಡನ ಮುಂದೆ ಹೇಳುತ್ತಿದ್ದಳು. ಕಣ್ಣೀರನ್ನು ಹಾಕುತ್ತಿದ್ದಳು.

ಆದರೆ ಭೀಮರಾಯ ಈ ಕಣ್ಣೀರಿಗೆ ಸೊಪ್ಪುಹಾಕುತ್ತಿರಲಿಲ್ಲ. ಬದಲಾಗಿ ಗದರಿಸುತ್ತಿದ್ದನು.

" ಅತ್ತಿಗೆಯೊಡನೆ ಪ್ರೀತಿಯಿಂದ ಇರಲು ನಿನಗೆ ಬರುವುದಿಲ್ಲವೇನ ? ನೀನೆಂತಹ ಸೊಸೆಯಾಗಿಬಂದಿ ?

" ಆದರೆ ವಿನಾಕಾರಣವಾಗಿ ಅವಮಾನ ಮಾಡಿದರೆ ಸಹಿಸಿಕೊಳ್ಳುವದಾದರೂ ಹೇಗೆ ?

" ನಿನ್ನ ಮರ್ಯಾದೆಯ ಮಹಲು ಬಹಳ ದೊಡ್ಡದು ಕಾಣುತ್ತದೆ. ಹಿರಿಯರು ಒಂದು ಮಾತು ಅಂದರೆ ನಿನ್ನ ಮರ್ಯಾದೆ ಭಂಗವಾಗುತ್ತಿದೆಯೆ ? ಹೀಗೆಲ್ಲಾ ಮಾಡಬೇಡ ತಿಳಿಯತೆ ?

ಗಂಡನ ಮುಂದೆ ತನ್ನ ಆಟ ನಾಗುವದಿಲ್ಲವೆಂದು ತಿಳಿದ ಕಾಂತಾಬಾಯಿ ಒಳಗೊಳಗೆ ಭುಸಗೊಡುತ್ತಿದ್ದಳು. ಅವಳ ಹೃದಯಗರ್ಭದಲ್ಲಿ ಜ್ವಾಲಾಮುಖಿ ಹೊತ್ತತೊಡಗಿತು. ಆದರೆ ಅದು ಅತ್ಯಂತ ದುರ್ಬಲವಾಗಿತ್ತು.

ಭೀಮರಾಯನು ರೈತಾಳುಗಳನ್ನೆಲ್ಲ ಅತ್ಯಂತ ಪ್ರೀತಿಯಿಂದ ಕಾಣುತ್ತಿದ್ದನು. ಅಧಿಕಾರದ ದಂಡವಿಲ್ಲದ ಅವನು ಎಲ್ಲರೊಡನೆ ಸಮಬೆರಕೆಯಾಗಿ ಇರುತ್ತಿದ್ದನು. ಗರಡೀಮನೆಯ ಕಟ್ಟೆಯ ಮೇಲೆ, ದೊಡ್ಡಾಟದ ರಂಗ ತಾಲೀಮು ಮಾಡುತ್ತಿರುವ ವಾಡೆಯ ಮೇಲ್ಮಾಳಿಗೆಯ ಮೇಲೆ ಅವನು ಎಲ್ಲರೊಡನೆ ಇರುತ್ತಿರುವದು ವಾಡಿಕೆಯಾಗಿತ್ತು. ಈ ಜನರಿಗಾಗಿ ಅವನು ಧಾರಾಳವಾಗಿ ವೆಚ್ಚವನ್ನೂ ಮಾಡುತ್ತಿದ್ದನು.

ಈ ವೆಚ್ಚ ಸೋಮಪ್ಪನ ಕಣ್ಣು ಕುಕ್ಕತೊಡಗಿತು. ದೊಡ್ಡಗೌಡನಕಿಂತ ಈ ಚಿಕ್ಕಗೌಡರು ಹೆಚ್ಚು ಜನಪ್ರಿಯವಾಗತೊಡಗಿದ ಅಸಮಾಧಾನವೂ ಇದಕ್ಕೆ ಕಾರಣವಾಗಿತ್ತು. ಅಲ್ಲದೆ ಅವನು ಏನೂ ಮಾಡದೆ ಕುಳಿತು ತಿನ್ನುತ್ತಿರುವನೆಂದು ಸೋಮಪ್ಪನು ಅವನ ಮೇಲೆ ಉರಿದು ಬೀಳುವಂತಾಯಿತು.

"ನಿನ್ನ ಮೈದುನನನ್ನು ಸಡಿಲುಬಿಟ್ಟರೆ ಅವನು ಈ ಮನೆಯನ್ನೇ ತೊಳೆಯುವಂತೆ ಕಾಣುತ್ತದೆ ಕಾಶೀ! ನಿಮ್ಮ ಯಜಮಾನರಿಗೆ ಸ್ವಲ್ಪ ಬುದ್ಧಿಹೇಳಲು ನೀನಾದರೂ ಹೇಳು.

"ಆದರೆ ಭೀಮರಾಯರು ಯಾವ ಖರ್ಚು ಮಾಡುತ್ತಾರೆ ಮಾವಾ?

"ನಾಟಕದ ಮಂಡಳಿಯೊಡನೆ ಅವನು ಪ್ರಕ್ಯಾಟಿಂಗಾಗಿ ಮೋಜು ಮಾಡುತ್ತಾನೇನು?

"ದೊಡ್ಡ ಯಜಮಾನರು ಇರುವಾಗಲೂ ಇದು ನಡೆಯುತ್ತಿತ್ತು. ಅವರು ಎಂದಿಗೂ ಭೀಮರಾಯರಿಗೆ ಅನ್ನುತ್ತಿರಲಿಲ್ಲ. ನಾವು ಕೂಡಲೇ ಇದಕ್ಕೆ ವ್ಯತ್ಯಯ ತರುವದು ಯೋಗ್ಯವಾದೀತೆ ಹೇಳು? ಇನ್ನು ಕೆಲವು ದಿನ ನಡೆಯಲಿ ಸುಮ್ಮನಿರು.

ಸೋಮಪ್ಪನು ಸೊದರಸೊಸೆಯ ಈ ಮಾತುಗಳನ್ನು ಕೇಳಿ ತೆಪ್ಪಗಾದನು. ಆ ಮಾತುಗಳಲ್ಲಿ ಕಂಡುಬರುವ ವ್ಯವಹಾರಜ್ಞತೆಗಾಗಿ ಅವನು ಬೆರಗೂ ಆದನು. ಆದರೆ ಭೀಮರಾಯನಬಗ್ಗೆ ಮಾತ್ರ ಅವನ ಸಮಾಧಾನ ಕಲಕಿತು. ಇದಕ್ಕೆ ಅವನ ಜನಪ್ರಿಯತೆಯ ಬಗ್ಗೆ ಇವನಿಗಿರುವ ಮತ್ಸರವೇ ಕಾರಣವಾಗಿತ್ತು.

ಗೌಡರ ಈ ತುಂಬಿದ ಮನೆಯ ಇಡಿಗಾಳನ್ನು ವಿಂಗಡಿಸಲು ಸೋಮಪ್ಪನು ಆಗಲೇ ಮನಸ್ಸಿನಲ್ಲಿ ನಿಶ್ಚಯಿಸಿದನು. ತನ್ನ ಹೋಳಿಗೆ ತುಪ್ಪದಲ್ಲಿ ಬೀಳಬೇಕಾದರೆ ನಾಲ್ಕು ಹೋಳಿಗೆಗಳು ನೆಲಕ್ಕೆ ಬೀಳುವದು ಅನಿವಾರ್ಯವೆಂದು ಅವನು ಬಗೆಯತೊಡಗಿದನು.

ಇದಕ್ಕೆ ಕಾಶೀಬಾಯಿ ಅಪ್ರತ್ಯಕ್ಷವಾಗಿ ಅನಕೂಲಳೇ ಆಗಿದ್ದಳು.

ಒಮ್ಮೆ ಕುರುಬರ ಮಾಯಪ್ಪನು ಗೌಡರ ಜಾಲೀಬನದಿಂದ ತುಸು ಜಾಲೀ ತೊಪ್ಪಲವನ್ನು ತೆಗೆದುಕೊಂಡು ತನ್ನ ಕುರಿಮುಂದೆಗಳನ್ನು ಮುಂದೆ ಹಾಕಿಕೊಂಡು ಹೋಗುತ್ತಿರುವದನ್ನು ಸೋಮಪ್ಪ ನೋಡಿ ಕಿಡಿಕಿಡಿಯಾದನು.

" ಮಾಯಾ ! ಯಾರಪ್ಪನ ಮನೆಯ ತೊಪ್ಪಲವನ್ನು ಕಿತ್ತುಕೊಂಡೆಯೋ ? "

ಸೋಮಪ್ಪ ಗದರಿಸಿ ಕೇಳಿದನು.

" ಇದೇನು ದೇವರು ! ನಾಕುವಸಳು ಮೂಕಜನಾವರಕ್ಕೆ ತಕ್ಕೊಂಡರೆ ಜಾಲೀಬನ ಹಾಳಾಗ್ತದೇನು ?

" ಈ ಜಾಲೀಬನ ನಿಮ್ಮ ಅಪ್ಪನದೇನು ?

" ಹೌದು ಸೋಮಪ್ಪನೋರೆ ! ಊರ ಗೌಡರು ಎಲ್ಲರಿಗೂ ತಂದೆ ಹೌದಲ್ಲವೆ ?

" ಆ ತೊಪ್ಪಲವನ್ನು ಅಲ್ಲಿಯೇ ಚಲ್ಲದಿದ್ದರೆ ನಿನ್ನನ್ನು ಜೈಲಿಗೆ ಕಳಿಸುತ್ತೇನೆ ತಿಳಿಯಿತೆ ?

ಎನ್ನುತ್ತ ಸೋಮಪ್ಪ ಜೋರಾವರಿಯಿಂದ ಆ ತೊಪ್ಪಲವನ್ನು ಕಸಿದುಕೊಂಡು ಮಾಯಪ್ಪನನ್ನು ದಬ್ಬಿಬಿಟ್ಟನು.

ಇಡಿಯ ಜೀವಮಾನದಲ್ಲಿ ಮಾಯಪ್ಪನಿಗೆ ಇದು ಹೊಸ ಅನುಭವವಾಯಿತು. ಅವನು ತಪ್ಪಲವನ್ನು ಅಲ್ಲಿಯೇ ಚೆಲ್ಲಿ ಒಮ್ಮೆ ಸೋಮಪ್ಪನನ್ನು ದುರುಗುಟ್ಟಿ ನೋಡಿದನು.

" ದುರುಗುಟ್ಟಿ ಏನು ನೋಡುತ್ತೀಯೋ ಕಳ್ಳಾ ! ಸುಮ್ಮನೆ ಹೋಗದಿದ್ದರೆ ನಿನ್ನ ಕಣ್ಣಾನ್ನೇ ಕಿತ್ತೇನು ?

" ಇದು ಕಣ್ಣು ಕಿತ್ತಿಸಕೊಳ್ಳೋ ಜಾತಿ ಅಲ್ಲ ಸೋಮಪ್ಪನೋರೆ !

" ಸುಮ್ಮನೇ ಹೋಗು.

ಮಾಯಪ್ಪ ಪ್ರತಿಮಾತಾಡದೆ ಬಿರಿಬಿರಿ ನಡೆದು ಗಗಡೀಮನೆಯ

ಕಟ್ಟೆಯ ಮೇಲೆ ಕವಳ ಮೆಲ್ಲುತ್ತ ಕುಳಿತ ಭೀಮರಾಯನ ಮುಂದೆ ಎಲ್ಲ ವರದಿಯನ್ನೂ ಒಪ್ಪಿಸಿದ.

ಭೀಮರಾಯನ ಹುಬ್ಬು ಗಂಟಿಕ್ಕಿದವು.

" ಸೋಮಪ್ಪ ಎಲ್ಲಿದ್ದಾನೆ ?

" ಅಲ್ಲಿಯೇ ಜಾಲೀಬನದಾಗ ಸುತ್ತಾಡುತ್ತಿತ್ತು ಗೌಡರೆ !

ಈಗ ತಿರುಗಿ ಹೋಗಿ ಆ ತಪ್ಪಲವನ್ನು ತೆಗೆದುಕೊಂಡು ಬಾ. ಅವನು ಏನಾದರೂ ಅಡ್ಡಿ ಮಾಡಿದರೆ ನಾನು ಹೇಳಿರುವೆನೆಂದು ಹೇಳು. ಹೂಂ. ಕೂಡಲೇ ಹೋಗು ಮಾಯಪ್ಪ ! ಆ ಜಾಲೀಬನ ನಿಮ್ಮದೇ ಅಲ್ಲವೇನು ? " ಎಂದನು.

ಮಾಯಪ್ಪ ಗೆಲುವಿನ ಹೆಜ್ಜೆ ಹಾಕುತ್ತ ಬನದ ಕಡೆಗೆ ನಡೆದನು. ಸೋಮಪ್ಪ ಅಲ್ಲಿಯೇ ಸುಳಿದಾಡುತ್ತಿದ್ದನು. ಅವನನ್ನು ನೋಡಿಯೂ ನೋಡದವನಂತೆ ಮಾಯಪ್ಪ ತನ್ನ ತಪ್ಪಲವನ್ನು ತೆಗೆದುಕೊಂಡನು.

" ಮತ್ತೇಕೆ ಬಂದು...............

" ಭೀಮಗೌಡರು ಹೇಳಿದ್ದಾರೆ ಸೋಮಪ್ಪನೋರೆ !

" ಏನು ? ಭೀಮರಾಯನು ನಿನಗೆ ಕದಿಯಲು ಹೇಳಿದನೆ ?

" ಹೌದು !

ಸೋಮಪ್ಪನಿಗೆ ಇದು ನುಂಗಲಾರದ ತುತ್ತಾಯಿತು. ಆದರೂ ಈ ಅವಮಾನವನ್ನು ತೋರಗೊಡದೆ ನೀನು ಮೊದಲೇ ಹೇಳಿದ್ದರೆ............

" ಅವರು ಈಗ ಮಾತ್ರ ಹೇಳಿದರು........

—ಎಂದು ಹೇಳುತ್ತ ಮಾಯಪ್ಪ ಅವನ ಮಾತುಗಳನ್ನು ಲಕ್ಷ್ಯಕ್ಕೆ ತಾರದೆ ನಡೆದುಬಿಟ್ಟನು.

ಸೋಮಪ್ಪನು ಮನೆಗೆ ಹೋಗಿ ಬಳವಂತಗೌಡನ ಮುಂದೆ ಈ ಸಂಗತಿಯನ್ನು ಬೆಳಸಿ ಹೇಳಿದನು. ಸಾಕಷ್ಟು ಉಪ್ಪು ಖಾರ ಬೆರಸಿ ವಗ್ಗರಣೆ ಹಾಕಿದನು. ಇದು ಹೀಗೆಯೇ ಸಾಗಿದರೆ ಜಾಲೀಬನ ಹಾಳಾಗಿ ಹೋಗುವದಾಗಿ ಅಂಜಿಕೆ ಹಾಕಿದನು.

ಸೋಮಪ್ಪನ ಮಾತುಗಳನ್ನು ಬಳವಂತರಾಯ ನಿರ್ಲಕ್ಷ್ಯದಿಂದ ಕೇಳಿ ಕೊನೆಗೆ ಹೇಳಿದನು.

" ಭೀಮಣ್ಣನು ಹೇಳಿದ ಬಳಿಕ ಮುಗಿಯಿತು. ನನ್ನ ತನಕ ದೂರು ತರುವ ಕೆಲಸವೇ ಇರಲಿಲ್ಲ ಸೋಮಪ್ಪ !

" ಆದರೆ ಗೌಡರ ಮುಂದೆ ದೂರು ತರದೆ ನಾನು ಯಾರ ಮುಂದೆ ಹೇಳಬೇಕು ?

" ಭೀಮಣ್ಣನು ಯಾರೆಂದು ತಿಳಿದಿರುವಿ ಸೋಮಪ್ಪ! ನಾನು ಹೆಸರಿಗೆ ಮಾತ್ರ ಗೌಡ, ನಿಜವಾದ ಗೌಡಿಕೆ ಭೀಮಣ್ಣನದೆ. ಇನ್ನುಮೇಲೆ ನಿನಗೆ ಏನಾದರೂ ಕೇಳಬೇಕಾಗಿದ್ದರೆ ಅವನನ್ನೇ ಕೇಳಬೇಕು.

ಬಳವಂತರಾಯನ ಈ ಮಾತುಗಳನ್ನು ಕೇಳಿ ಸೋಮಪ್ಪನ ಮೈಮೇಲೆ ಕಣ್ಣೀರು ಸುರುವಿದಂತಾಯಿತು.

ಅವನು ಪ್ರತಿ ಮಾತಾಡಲಿಲ್ಲ.

ಆ ದಿನವೇ ಸಾಯಂಕಾಲ ಭೀಮಣ್ಣನು ಸೋಮಪ್ಪನನ್ನು ತನ್ನ ಕೋಣೆಗೆ ಕರೆಯಿಸಿಕೊಂಡು ಹೇಳಿದನು.

" ಮಾಯಪ್ಪನಿಗೆ ನೀನು ಹಾಗೆ ಅನ್ನಬಾರದಾಗಿತ್ತು ಸೋಮಪ್ಪ !

" ಆದರೆ ಜಾಲೀಬನ ಹಾಳಾಗಬೇಕೇನು ?

" ಈ ಮನೆಯ ಪರಂಪರೆ ನಿನಗೆ ಗೊತ್ತಿಲ್ಲ. ಇವರೆಲ್ಲ ನಮ್ಮ ಬಳಗ. ಜಮೀನುದಾರರ ಜೀವನಾಡಿಗಳೇ ರೈತರು. ಒಂದು ಮುಷ್ಟಿ ತಪ್ಪಲನ್ನು ಕಿತ್ತುಕೊಂಡ ಮಾತ್ರಕ್ಕೆ ನಮ್ಮ ಆಸ್ತಿ ಏನು ಹಾಳಾಗಲಿಲ್ಲ.

" ಆದರೆ ಹೀಗೆಂದು ಸಡಿಲು ಬಿಡಬಾರದು ಭೀಮಣ್ಣ. ಇಂದು ತಪ್ಪಲು ಹರಿದುಕೊಂಡವರು ನಾಳೆ ಗಿಡವನ್ನೇ ಕಡಿಯಬಹುದು.

" ಹಿಂದೆ ಎಂದೂ ಆಗದಿದ್ದುದು ಈಗ ಆಗುವದೆಂದು ಸಂದೇಹ ತಾಳುವದೇ ಬೇಡ. ಅವರು ಮಕ್ಕಳು. ಅವರಿಗೆ ಇದನ್ನು ತೆಗೆದುಕೊಳ್ಳುವ ಹಕ್ಕು ಇದೆ. ನೀನು ಇಲ್ಲದ ಉಸಾಬರಿ ಮಾಡಿ ಹೊಗೆ ಎಬ್ಬಿಸಬೇಡ.

" ಆಸ್ತಿ ಹಾಳಾಗಬೇಕೇನು ?

" ಮತ್ತೆ ಅದೇ ಮಾತು. ಮಕ್ಕಳು ತಿಂದರೆ ಆಸ್ತಿ ಹಾಳಾಗುವದೆಂದು ತಿಳಿದುಕೊಳ್ಳುವದು ಸಂಕುಚಿತದೃಷ್ಟಿ. ಇನ್ನು ಮೇಲೆ ನೀನು ಅಣ್ಣನನ್ನು ಕೇಳದೆ ಯಾವ ಆಜ್ಞೆಯನ್ನೂ ಕೊಡಬೇಡ. ತಿಳಿಯಿತೆ ?

" ನಾನು ಇಲ್ಲಿ ಬಂದದ್ದು ಏತಕ್ಕಾಗಿಯೆಂದು ತಿಳಿದುಕೊಂಡಿದ್ದೀ ಭೀಮಣ್ಣ ! ಭಾವೂರಾಯರ ಮನೆತನದ ಮೇಲಿನ ಅಭಿಮಾನದಿಂದಲೇ ಅಲ್ಲವೆ ? ನೀವೆಲ್ಲ ಸುಸ್ಥಿರವಾಗಿರಬೇಕೆಂದೇ ಅಲ್ಲವೇ ನನ್ನ ಪ್ರಯತ್ನ ? ಇದು ನಿನ್ನ ಮನಸ್ಸಿಗೆ ಬರದಿದ್ದರೆ ನಾನೇಕೆ ಒಳಕಾರುಭಾರ ಮಾಡಲಿ ಹೇಳು.

" ಹಾಗಲ್ಲ ಸೋಮಪ್ಪ! ನಾವು ನೋಡುವ ದೃಷ್ಟಿಯಲ್ಲಿ ಔದಾರ್ಯ ವಿರಬೇಕು. ನಮ್ಮ ಅಧಿಕಾರದಲ್ಲಿ ದರ್ಪದ ಸೆಳಕು ಮೂಡಬಾರದು. ನಮ್ಮದು ಗೌಡರ ಮನೆತನ. ಈ ಮನೆತನಕ್ಕೆ ತಕ್ಕ ಗೌರವದಿಂದ ನಾವು ಇರಬೇಕು. ಈ ಹಳ್ಳಿಯ ಜನ ನಮ್ಮ ಮನೆತನವನ್ನು ಗೌರವದ ದೃಷ್ಟಿ ಯಿಂದಲೇ ನೋಡುತ್ತಾರೆ. ಇದಕ್ಕೆ ತಕ್ಕಹಾಗೆ ನಮ್ಮ ನಡತೆ ಇರಬೇಡವೆ? ನೀನು ಹಿರಿಯನಾಗಿದ್ದೀ. ಆದುದರಿಂದ ನಿನ್ನ ಅನುಭವ ದೊಡ್ಡದಾಗಿದೆ. ತೂಕ ತಪ್ಪಿದ ನಡತೆಯಿಂದ ನಮ್ಮನ್ನು ರಕ್ಷಿಸುವದು ನಿನ್ನ ಹೊಣೆಯಾಗಿದೆ. ಅದನ್ನು ಬಿಟ್ಟು ನೀನೇ ಅಡ್ಡದಾರಿಯಿಂದ ಸಾಗಿದರೆ........

" ನನ್ನದು ಸರಳದಾರಿಯಾಗಿದೆ.

" ಹೇಳಿದಷ್ಟು ಕೇಳು.

ಭೀಮರಾಯ ಗದ್ದರಿಸಿ ಹೇಳಿದನು.

ತನ್ನ ಬೇಳೆ ಇನ್ನು ಬೇಯುವದಿಲ್ಲವೆಂದು ತಿಳಿದ ಸೋಮಪ್ಪನು ಆ ಮಟ್ಟಿಗೆ ಸುಮ್ಮನಾಗಬೇಕಾಯಿತು.

ಆದರೆ ಭೀಮಣ್ಣನ ಬಗ್ಗೆ ಸೋಮಪ್ಪನಲ್ಲಿ ಅಸಮಾಧಾನ ಹೊತ್ತಿದೆ ಇರಲಿಲ್ಲ. ತನ್ನ ಅಧಿಕಾರಕ್ಕೆ ಇವನು ಅಡ್ಡಬರುವನೆಂದು ಅವನಿಗೆ ಮತ್ಸರ ಮೂಡಿತು. ಈ ಮತ್ಸರಕ್ಕೆ ಸಧ್ಯ ಯಾವ ಪೋಷಣೆಯೂ ಇಲ್ಲದ್ದರಿಂದ ಸೋಮಪ್ಪನು ಯೋಗ್ಯಸಮಯ ಕಾಯಬೇಕಾಯಿತು.

ಈ ಸಂಗತಿ ಕಾಶೀಬಾಯಿಗೆ ತಿಳಿಯದಿರಲಿಲ್ಲ. ತಿಳಿದರೂ ಅವಳಿಗೆ ಏನು ಮಾಡಲೂ ಬರುವಂತಿರಲಿಲ್ಲ. ಭೀಮಣ್ಣನ ಸರಳತನದ ನಿಸ್ಪೃಹ ಸ್ವಭಾವದ ಪರಿಚಯ ಅವಳಿಗೆ ತುಂಬಾ ಇತ್ತು. ಅಲ್ಲದೆ ಅವನ ನಿಸ್ಸೀಮ ವಾದ ಸೋದರಪ್ರೀತಿಯ ಮುಂದೆ ತನ್ನ ಯಾವ ಆಟವೂ ನಡೆಯುವದಿಲ್ಲ ವೆಂಬುದೂ ಅವಳಿಗೆ ತಿಳಿದ ಮಾತಾಗಿತ್ತು.

ಭೀಮಣ್ಣನ ಬಗ್ಗೆ ಮೂಡತೊಡಗಿದ ಅಸಮಾಧಾನದ ಪ್ರವಾಹವು ಸ್ವಾಭಾವಿಕವಾಗಿ ಕಾಂತಾಬಾಯಿಯ ಕಡೆಗೆ ಹರಿಯತೊಡಗಿತು. ಏನಾದರೂ ನೆವಮಾಡಿ ಅವಳ ಮೇಲೆ ಹರಿಹಾಯ ತೊಡಗುವನು ಅವಳ ಸ್ವಭಾವವೇ ಆಗಿಬಿಟ್ಟಿತು.

ಈ ಸ್ವಭಾವವನ್ನು ರೂಪಿಸಿಕೊಟ್ಟವನು ಸೋಮಪ್ಪನೇ ಆಗಿದ್ದನು.

ಮಾವಂದಿರಾದ ಭಾವೂರಾಯರು ಇರುವ ವರೆಗೆ ಮನೆಯ ಹಿರಿಯತನ ಕಾಶೀಬಾಯಿಯ ಕಡೆಗೆ ಇದ್ದರೂ ಎಲ್ಲವೂ ಭಾವೂರಾಯರ ಅಂಕಿತದಲ್ಲಿಯೇ

ನಡೆಯುತ್ತಿತ್ತು. ಸೊಸೆಯಂದಿರು, ಮಕ್ಕಳು ಅವರು ಹೇಳಿದಂತೆ ಕೇಳ ಬೇಕೆನ್ನುವ ದರ್ಪ ಅವರದಾಗಿತ್ತು.

ಈಗ ಕಾಶೀಬಾಯಿಗೆ ಹೆಚ್ಚಿನ ಹಿರಿಯತನ ಬಂದಂತಾಗಿತ್ತು. ಎಷ್ಟಾದರೂ ಅವಳು ಊರಗೌಡನ ಹೆಂಡತಿಯಲ್ಲವೆ ?

ಮನೆಯಲ್ಲಿ ಯಾವ ಕೆಲಸವೂ ತನ್ನ ಅನುಮೋದನೆ ಇಲ್ಲದೆ ನಡೆಯ ಕೂಡದೆಂದು ಅವಳ ಅಭಿಲಾಷೆ ಇತ್ತು. ಅದನ್ನು ಅವಳು ಚಲಾಯಿಸ ತೊಡಗಿದಳು.

ಭೀಮಣ್ಣನು ಮಾಯಪ್ಪನನ್ನು ಮೆಲುಗಟ್ಟಿಗೊಂಡು ತನ್ನ ಸೋದರ ಮಾವ ಸೋಮಪ್ಪನನ್ನು ಜರಿದ ದಿನದಿಂದ ಕಾಶೀಬಾಯಿ ಅವನ ಹೆಂಡತಿಗೆ ಹೆಚ್ಚಿನ ಕಿರುಕೊಳ ಕೊಡತೊಡಗಿದಳು.

ಒಂದು ದಿನ ಕಾಶೀಬಾಯಿ ಅದೇ ಮೈ ತೊಳೆದುಕೊಂಡು ತುಳಸೀ ವೃಕ್ಷಕ್ಕೆ ಪ್ರದಕ್ಷಿಣೆ ಹಾಕುತ್ತಿದ್ದಳು. ಕಾಂತಾಬಾಯಿ ಅಡಿಗೆಯ ಮನೆಯಲ್ಲಿ ಯಾವುದೋ ಕೆಲಸವನ್ನು ಮಾಡುತ್ತಿದ್ದಳು. ಆ ಸಮಯಕ್ಕೆ ನೆರೆಮನೆಯ ರಾಧವ್ವ ಕೈಯಲ್ಲಿ ಒಂದು ಚಿಕ್ಕ ಹಿತ್ತಾಳೆಯ ಬೋಗೋಣಿಯನ್ನು ಹಿಡಿದು ಕೊಂಡು ಬಂದಳು.

ಕಡ ಬೇಡುವದರಲ್ಲಿ ಇವಳು ನಿಸ್ಸೀಮಳಾಗಿದ್ದಳು. ಕೊಟ್ಟ ಕಡವನ್ನು ಇವಳು ಎಂದಿಗೂ ಹಿಂತಿರುಗಿಸುತ್ತಿರಲಿಲ್ಲ. ಆದರೆ ತಿಂಗಳಿಗೆ ಎರಡು ಮೂರು ಬಾರಿ ಬಂದ ಮನೆಗೆ ಬಂದೇಬರುತ್ತಿದ್ದಳು. ಒಮ್ಮೆ ಜೋಳದ ಹಿಟ್ಟು, ಇನ್ನೊಮ್ಮೆ ಅಕ್ಕಿ, ಮತ್ತೊಮ್ಮೆ ಚಹಾದ ಪುಡಿ, ಮಗದೊಮ್ಮೆ ಒಂದು ಮಿಳ್ಳಿ ತುಪ್ಪ ಹೀಗೆ ಅವಳು ಯಾವ ದಿನ ಯಾರಲ್ಲಿ ಏನು ಬೇಡಬೇಕೆಂಬ ಒಂದು ಪದ್ಧತಿಯನ್ನು ಅನುಸರಿಸುತ್ತಿದ್ದಳು.

ಇವಳಿಗೆ ಕಡವನ್ನು ಕೊಟ್ಟು ಯಾವ ಹೆಂಗಳೆಯೂ ಬೇಸರಿಯು ತ್ತಿರಲಿಲ್ಲ. ಅದರ ಕಾರಣ ಅವಳ ಉಪಯುಕ್ತತೆ. ಅವಳು ಎಲ್ಲರಿಗೂ ನೆರವಾಗುತ್ತಿದ್ದಳು. ಅಳ್ಳಿಟ್ಟು ಬೀಸಲು, ಗೋದಿಯನ್ನು ಕುಟ್ಟಲು, ಮೆಂತೇದ ಹಿಟ್ಟು ಮಾಡಿಕೊಡಲು ರಾಧವ್ವನ ಸಹಾಯ ಎಲ್ಲರಿಗೂ ಒದಗು ತ್ತಿತ್ತು. ಒಲೆಗಳನ್ನು ಕಟ್ಟಿಕೊಡುವುದರಲ್ಲಿ ರಾಧವ್ವ ಕುಶಲಳಾಗಿದ್ದಳು. ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲಿ ರಾಧವ್ವ ಹಾಕಿಕೊಟ್ಟ ಒಲೆಗಳೇ ಉರಿಯುತ್ತಿದ್ದವು. ಮಾಸಾಂತ್ಯದ ನಾಲ್ಕು ದಿನಗಳಲ್ಲಿ ರಾಧವ್ವ ಅನ್ನಪೂರ್ಣೆ

ಯಾಗುತ್ತಿದ್ದಳು. ಮದುವೆ, ಮುಂಜವೆ, ಸಮಾರಾಧನೆ, ಸಮಾರಂಭಗಳಲ್ಲಿ ರಾಧವ್ವನ ದುಡಿತ ದೈತ್ಯ ದುಡಿತವಾಗುತ್ತಿತ್ತು.

ಆದುದರಿಂದ ಈ ಉಪಕಾರೀ ಜೀವಕ್ಕೆ ಯಾರೂ ಇಲ್ಲವೆನ್ನುತ್ತಿರಲಿಲ್ಲ. ಅವಳು ಮನೆಯಲ್ಲಿ ಕಾಲಿಡುತ್ತಲೇ ' ಏನು ಬೇಕಾಗಿದೆ ರಾಧವ್ವ ? ' ಎಂದು ಎಲ್ಲ ಮುತ್ತೈದೆಯರೂ ಕೇಳಿ ಅವಳು ಬೇಡಿದುದನ್ನು ಅತ್ಯಾದರದಿಂದ ಕೊಟ್ಟು ಕಳಿಸುತ್ತಿದ್ದರು ಮೇಲೆ ಅವಳಿಗೊಂದು ಬಟ್ಟಲ ಚಹವನ್ನೂ ಕೊಡುತ್ತಿದ್ದರು.

ಅಡಿಗೆಯ ಮನೆಯಲ್ಲಿ ಕೆಲಸಮಾಡುತ್ತಿದ್ದ ಕಾಂತಾಬಾಯಿ ರಾಧವ್ವನನ್ನು ನೋಡಿದ ಕೂಡಲೇ

" ಬಾ ರಾಧವ್ವ ! ಏನು ಬೇಕಾಗಿತ್ತು ?

ಎಂದು ಕೇಳಿದಳು.

" ಒಂದು ಎರಡು ಥಾಲಿ ಗೋಧಿಯ ಹಿಟ್ಟು ಸಿಕ್ಕೀತೇನು ?

ಮುನ್ನಾದಿನ ಅವಳೇ ಬೀಸಿಕೊಟ್ಟು ಹೋಗಿದ್ದರೂ ಪದ್ಧತಿಯ ಪ್ರಕಾರ ಕೇಳಿದಳು.

" ಒಯ್ಸಿರೆಲಾ. ಅದಕ್ಕೇನು ?

ಎನ್ನುತ್ತ ಕಾಂತಾಬಾಯಿ ಎರಡು ಥಾಲಿ ಅಳೆದು ಹಿಟ್ಟನ್ನು ಕೊಟ್ಟಳು.

ರಾಧವ್ವ ಈ ಹಿಟ್ಟನ್ನು ಸೆರಗಿನ ಮರೆಯಲ್ಲಿ ಒಯ್ಯುತ್ತಿರುವದನ್ನು ತುಳಸೀವೃಕ್ಷಕ್ಕೆ ಪ್ರದಕ್ಷಿಣೆ ಹಾಕುತ್ತಿದ್ದ ಕಾಶೀಬಾಯಿ ನೋಡಿದಳು.

ಅವಳ ಹಿರಿಯತನಕ್ಕೆ ಬರೆ ಎಳೆದಂತಾಯಿತು. ತಾನು ಮನೆಯಲ್ಲಿದ್ದರೂ ಕಾಂತಾಬಾಯಿ ತನ್ನನ್ನು ಕೇಳದೆ ಈ ಕಾರುಭಾರವನ್ನು ಮಾಡಿದ್ದು ಅಸಹನೀಯವಾಯಿತು.

ಅವಳು ಪ್ರದಕ್ಷಿಣೆಯನ್ನು ಅರ್ಧಕ್ಕೆ ನಿಲ್ಲಿಸಿ ಒಳ್ಳೇ ಜೋರಿನಿಂದ ಒಳಗೆ ಬಂದು ಕೇಳಿದಳು.

" ಕಾಂತಾ ! ಆ ರಾಧವ್ವನಿಗೆ ಏನು ಕೊಟ್ಟೆ ಹೇಳು ? ಅವಳು ಸೆರಗಿನ ಮರೆಯಲ್ಲಿ ಮುಚ್ಚಿಕೊಂಡು ಏನು ಒಯ್ದಳು ?

ಕಾಂತಾಬಾಯಿ ಹುಬ್ಬುಗಳನ್ನು ಮೇಲೇರಿಸಿ ಹೇಳಿದಳು.

" ಎರಡು ಥಾಲಿ ಗೋದಿಹಿಟ್ಟನ್ನು ಕೈಗಡ ಕೊಟ್ಟೆ.

" ಈ ಕಾರಭಾರವನ್ನು ಮಾಡಲು ನಿನಗೆ ಯಾರು ಹೇಳಿದರು ?

" ನನಗೆ ಒಂದು ಹಿಡಿ ಹಿಟ್ಟನ್ನು ಕಡವಾಗಿ ಕೊಡಲು ಕೂಡ ಈ ಮನೆಯಲ್ಲಿ ಸ್ವಾತಂತ್ರ್ಯವಿಲ್ಲವೆ ?

" ನನ್ನನ್ನು ಹೇಳದೆ-ಕೇಳದೆ ನೀನು ಏನನ್ನೂ ಮಾಡಕೂಡದು ತಿಳಿಯಿತೆ. ಬೇಜವಾಬುದಾರಿಯ ಹೆಂಗಸು ಹಿರಿಯತನ ಮಾಡಕೂಡದು.

" ಗೋದಿಯಹಿಟ್ಟು ಕಡ ಕೊಡುವದರಲ್ಲಿ ಎಂತಹ ಜವಾಬುದಾರಿ ಅಕ್ಕ ! ನಾನು ಈ ಮನೆಗೆ ಏನೂ ಅಲ್ಲವೇನು ? ನಿಮ್ಮ ಹಿರಿಯತನ ಮೋಜಿನದೇ ಆಗಿದೆ.

ನನ್ನ ಹಿರಿಯತನವೆಂದರೆ ನಿನಗೆ ಹೇಗೆ ಅನ್ನಿಸಿದೆಯೆ ? ನೀನು ಮನೆಯಲ್ಲಿಯ ಸಾಮಾನುಗಳನ್ನೆಲ್ಲ ಹೆರವರ ಪಾಲುಮಾಡಿ ಈ ಮನೆಯನ್ನು ತೊಳೆಯುತ್ತಿರುವದನ್ನು ನೋಡಿಯೂ ನಾನು ಸುಮ್ಮನಿರಬೇಕೆ ?

" ಎರಡು ಥಾಲಿ ಗೋದೀಹಿಟ್ಟಿನಿಂದ ಈ ಗೌಡರ ಶ್ರೀಮಂತಿಗೆ ಏನು ಕಡಿಮೆಯಾಗುವದಿಲ್ಲ ಬಿಡಿರಿ. ಏನಾದರೂ ಮಾಡಿ ನನಗೆ ಅನ್ನಲು ನಿಮಗೆ ನೆವ ಸಿಕ್ಕಿತು.

" ಹೌದವ್ವಾ ! ನನಗೆ ನಿನ್ನನ್ನು ಬಯ್ಯುವದೇ ಕೆಲಸವಾಗಿದೆ. ನೀನು ಮಾತ್ರ........

" ನಾನು ಮಾತ್ರ ಏನು ?

" ಏನೆಂಬುದು ನಿನಗೇ ಗೊತ್ತು ?

" ಅದು ನನಗೆ ಗೊತ್ತೆಂದು ನಿಮಗೆ ಹೇಗೆ ಗೊತ್ತಾಯಿತು ?

ಕಾಂತಾಬಾಯಿ ಖೊಳ್ಳನೆ ನಕ್ಕಳು.

ಕಾಶೀಬಾಯಿಗೆ ಅವಮಾನವಾದಂತಾಯಿತು. ಅವಳು ಕೂಡಲೇ ಕೆಲಸದವಳನ್ನು ಕೂಗಿ ರಾಧವ್ವನನ್ನು ಹಿಟ್ಟಿನೊಂದಿಗೆ ಬರಲು ಹೇಳಿ ಕಳಿಸಿದಳು.

ರಾಧವ್ವ ಬಂದಕೂಡಲೆ ಕಾಶೀಬಾಯಿ ಅಬ್ಬರದಿಂದ,

" ನಿನಗೆ ಇಷ್ಟು ವಯಸ್ಸಾಯಿತು ರಾಧವ್ವ ಕೊನೆಗೂ ನಿನಗೆ ಬುದ್ಧಿ ಬರಲಿಲ್ಲ.

" ಏನಾಯಿತು ಗೌಡಸಾನಿ ?

" ಈ ಮನೆಯಲ್ಲಿ ಯಾರು ಹಿರಿಯರೆಂಬುದು ನಿನಗೆ ಗೊತ್ತಿದೆಯೇನು?

" ನನಗೇನು ಗೊತ್ತು ಮಣ್ಣು ?

" ಏನೆಂದಿ ?

" ನನಗೇನು ಗೊತ್ತು ಮಣ್ಣಾ. ಅಂದರ ಈ ಮನೆಗೇ ನೀವೇ ಹಿರಿಯರುಕಾನಕ್ಕ ? ಇದನ್ನು ಹೇಳಬೇಕೇನು ?

" ಈ ಗೋದಿಯ ಹಿಟ್ಟನ್ನು ಯಾರನ್ನು ಕೇಳಿ ತೆಗೆದುಕೊಂಡು ಹೋದಿರಿ.

" ಅವ್ವಯ್ಯ ! ನನಗೇನು ಗೊತ್ತು ಮಣ್ಣು ! ಕಾಂತಕ್ಕ ಕೊಟ್ಟಳು, ತೆಗೆದುಕೊಂಡೇ. ಈಗ ನೀವು ಬೇಡವೆಂದಿರಿ ಇಲ್ಲಿಯೇ ಇಡುತ್ತೇನೆ. ನನಗೇಕೆ ಬೇಕೆ ಮಣ್ಣು ? ಅದೇನೋ ಅಂತಾರಲ್ಲಾ ಮಣ್ಣು ?

" ನಾನು ನಿನಗೆ ಇದನ್ನು ಇಡು ಎಂದು ಹೇಳಲಿಲ್ಲ. ಆದರೆ ಈಗ ನನ್ನನ್ನು ಕೇಳಿ ತೆಗೆದುಕೊಂಡು ಹೋಗು ಎಂದು ಮಾತ್ರ ಹೇಳಿದೆ. ಇನ್ನು ಮೇಲೆ ನಿನಗೆ ಏನಾದರೂ ಬೇಕಾದರೆ ನನ್ನನ್ನೇ ಕೇಳಿ ತೆಗೆದುಕೊಂಡು ಹೋಗು.

" ನನಗೇನು ಗೊತ್ತು ಮಣ್ಣು ?

ಎಂದ ರಾಧವ್ವ ಆ ಹಿಟ್ಟಿನ ಬೋಗೋಣಿಯನ್ನು ಅಲ್ಲಿಯೇ ಬಿಟ್ಟು ನಡೆದಳು.

" ರಾಧವ್ವ !

" ಬರುತ್ತೇನೆ ಗೌಡಸಾನಿ. ನನಗೇನು ಗೊತ್ತು ಮಣ್ಣು. ಈಗ ನಿಮ್ಮನ್ನು ಕೇಳಲು ಬರುತ್ತೇನೆ ತಡೆಯಿರಿ.

ಎಂದ ಗೋದವ್ವ ಸರ್ರನೇ ಹೊರಳಿ,

" ಮನೆಯಲ್ಲಿ ಗೌಡಸಾನಿಯವರು ಇದ್ದಾರೇನು ?

ಎಂದು ಕೇಳಿದಳು.

" ಏನು ಬೇಕಾಗಿತ್ತು ರಾಧವ್ವ !

" ಎರಡು ಥಾಲಿ ಗೋದೀಹಿಟ್ಟು ಸಿಕ್ಕೀತೇನು ?

" ಸಿಗದೇನು ಮಾಡೀತು ಬಾ !

ಎನ್ನುತ್ತ ಕಾಶೀಬಾಯಿ ಆ ಹಿಟ್ಟನ್ನು ಎತ್ತಿ ಅವಳ ಕೈಗಿತ್ತಳು.

" ನನಗೇನು ಗೊತ್ತು ಮಣ್ಣು ?

ಎನ್ನುತ್ತ ರಾಧವ್ವ ಕಣ್ಣು ಮೂಗು ತಿರುವುತ್ತ ನಡೆದುಬಿಟ್ಟಳು.

ಈ ನಾಟಕವು ಕಾಂತಾಬಾಯಿಯ ಸಮ್ಮುಖದಲ್ಲಿಯೇ ನಡೆಯಿತು.

ಕಾಂತಾಬಾಯಿ ಅವಮಾನದಿಂದ ಕುಂಠಿತಳಾದಳು. ಅವಳ ಕಣ್ಣಲ್ಲಿ ನೀರುಬಂತು. ಅವಳು ಆ ದನಿಯಲ್ಲಿಯೇ ಕೇಳಿದಳು,

" ಇದರ ಅರ್ಥವೇನು ಅಕ್ಕ ?

" ಇನ್ನೊಮ್ಮೆ ಇಂಥ ಕಾರುಭಾರವನ್ನು ನೀನು ಮಾಡಬಾರದೆಂಬುದೇ ಇದರ ಅರ್ಥ.

" ಆ ದರಿದ್ರ ಹೆಂಗಸಿನ ಮುಂದೆ ನೀವು ಹೀಗೆ ಗೌಡರ ಸೊಸೆಯನ್ನು ಅವಮಾನಿಸುವದು ಹಿರಿಯತನದ ಲಕ್ಷಣವೇನು ? ನೇರವಾಗಿ ಆ ಮಾತನ್ನು ನನಗೆಯೇ ಹೇಳಿದ್ದರೆ ನಾನು ಕೇಳುತ್ತಿರಲಿಲ್ಲವೇನು ? ಅಲ್ಲದೆ ನಾನಾವ ಹಿರಿತನ ಮಾಡಿದೆ ? ನೀವು ಸೋಮಪ್ಪನೊಡನೆ ತವರುಮನೆಗೆ ರಾಸಿರಾಸಿ ಕಳಿಸಿಕೊಡುತ್ತಿರುವಿರಿ. ನಾವೇನಾದರೂ ಅದರ ಬಗ್ಗೆ ಬೇಕಾದ ಶಬ್ದ ಅಂದಿರುವೆನೇನು ? ಈ ಗೌಡರ ಮನೆ ಸಮೃದ್ಧಿಯಾಗಿದೆ. ಕೊಟ್ಟಷ್ಟು ಈ ಮನೆಯ ಸಂಪತ್ತು ಹೆಚ್ಚುತ್ತದೆ. ಈ ದಿನ ನೀವು ನಿಮ್ಮ ಹಿರಿಯತನವನ್ನು ಕಿರಿದುಮಾಡಿಕೊಂಡಿರಿ.

" ನಿನ್ನ ಉಪದೇಶ ನನಗೆ ಬೇಡ. ನೀನು ಇಲ್ಲದ ಮಾತುಗಳನ್ನು ಹುಟ್ಟಿಸಿಕೊಂಡು ಏನಾದರೂ ಬಗುಳಬೇಡ. ನನ್ನ ತವರಿನ ಮನೆಯವರೇನು ನಿನ್ನ ತವರಿನವರಂತೆ ಭಿಕಾರಿಗಳೇನಲ್ಲ ತಿಳಿಯಿತೆ ?

" ನನ್ನ ತವರಿನವರು ಭಿಕಾರಿಗಳು. ಈ ಭಿಕಾರಿಗಳ ಮನೆಯಲ್ಲಿ ದಿನಾಲು ಹತ್ತು ಸೇವಕರು ನಮ್ಮ ಊಟವನ್ನೆ ಮಾಡುತ್ತಾರೆ. ನಮ್ಮ ತವರಿನಲ್ಲಿ ಬೇಡಿದವರಿಗೆ ಕೈಗಡ ಕೊಡುವದಿಲ್ಲ. ಕೊಟ್ಟು ಕೇಳುವದಿಲ್ಲ. ನಮ್ಮ ತವರಿನವರು ಭಿಕಾರಿಗಳು ಅಲ್ಲವೆ ? ನಿಮ್ಮ ತವರಿನವರು ಮಾತ್ರ ಸಕ್ಕರೆ ತುಪ್ಪದಲ್ಲಿ ಕೈ ತೊಳೆಯುತ್ತಾರೆ. ಅವರಿಗೆ ಮಗಳ ಮನೆಯ ಗೋದಿಯ ಚೀಲವೂ ಬೇಕು. ಗೌಡರ ಎಮ್ಮೆಗಳ ಬೆಣ್ಣೆಯೂ ಬೇಕು ? ನನ್ನ ತವರಿನ ಸುದ್ದಿ ಎತ್ತಬೇಡಿರಿ ಅಕ್ಕ ! ಅವರ ಬಗ್ಗೆ ಮಾತಾಡುವಾಗ ಬಾಯಿತೊಳೆದುಕೊಂಡು ಮಾತಾಡಿರಿ.

" ನಮ್ಮ ತವರಿಗೆ ಬೆಣ್ಣೆಯನ್ನು ನೀನು ಕಳಿಸಿದ್ದೀಯಾ ?

" ವಾಲೀಕಾರ ಗಂಗವ್ವನನ್ನು ಕರೆಯಲೇನು ? ಪ್ರತಿ ಸೋಮವಾರ ಅವಳು ನಿಮ್ಮ ತವರಿನ ಹಳ್ಳಿಗೆ ಹೋಗಿಬರುವದು ಸುಳ್ಳೇನು ?

ಕಾಶೀಬಾಯಿ ಸಿಟ್ಟು ತಡೆಯದಾಯಿತು.

" ನಾನು ಬೇಕಾದ್ದು ಮಾಡುತ್ತೇನೆ. ಅದನ್ನು ತೆಗೆದುಕೊಂಡು ನೀನೇನು ಮಾಡುತ್ತೀ. ಸುಮ್ಮನೆ ನಾಲಿಗೆಯನ್ನು ಹಲ್ಲಿನಲ್ಲಿ ಇಟ್ಟುಕೊಂಡು ತೆಪ್ಪಗೆ ಕೂಡ್ರು.

" ತಪ್ಪುಮಾಡಿದವರು ಬೇಕಾದರೆ ಹಾಗೆ ಮಾಡಲಿ..........

ಕಾಶೀಬಾಯಿಗೆ ಇಲ್ಲಿ ನಿಂತುಕೊಂಡರೆ ಪ್ರಸಂಗ ಮೈಮೇಲೆ ಬರುವ ದೆಂದೆನ್ನಿಸಿ ಕೂಡಲೇ ಸರಿದುಹೋಗಿ ತನ್ನ ಹಿರಿಯತನವನ್ನು ಉಳಿಸಿ ಕೊಂಡಳು.

ಯಾವುದೋ ಮಾತು ಎಲ್ಲಿಗೋ ಹೋಯಿತೆಂದು ಕಾಂತಾಬಾಯಿಗೂ ಹಳಹಳಿಯಾಯಿತು.

ಈಗ ಏನು ನಡೆಯಿಲಿಲ್ಲವೆಂಬಂತೆ ಅವಳು ಕೆಲಸಮಾಡತೊಡಗಿದಳು.

ಆದರೆ ರಾಘಪ್ಪನ ಎದುರಿಗೆ ಆದ ಮುಖಭಂಗವನ್ನು ನೆನೆದು ಕೊಂಡಾಗ ಮಾತ್ರ ಅವಳ ಎದೆಯಲ್ಲಿ ಅವಮಾನದ ಕಿಡಿ ಏಳುತ್ತಿತ್ತು. ಅದನ್ನು ಅವಳು ಪ್ರಯಾಸದಿಂದ ಹತ್ತಿಕ್ಕುತಿದ್ದಳು.

ಒಂದು ಸಣ್ಣ ವಿಷಯವನ್ನು ಇಷ್ಟು ದೊಡ್ಡದು ಮಾಡಿದ ಕಾಶೀ ಬಾಯಿಯ ಬಗ್ಗೆ ಅವಳಲ್ಲಿ ಸಿಡುಕತೇ ತುಂಬತೊಡಗಿತು.

ಆ ರಾತ್ರಿ ಅವಳು ಮುಳುಮುಳು ಅಳುತ್ತಲೇ ಮಲಗುವ ಕೋಣೆ ಯನ್ನು ಪ್ರವೇಶಿಸಿದಳು. ಭೀಮರಾಯನು ಬಾಯಿತುಂಬ ತಂಬುಲವನ್ನು ತುಂಬಿಕೊಂಡು ಹಾಸಿಗೆಯ ಮೇಲೆ ಕುಳಿತು ಇವಳ ಬರವನ್ನೇ ಹಾರೈಸು ತ್ತಿದ್ದನು.

ಇವಳ ಕಣ್ಣೀರನ್ನು ನೋಡಿ ಭೀಮರಾಯನು ಕಿಡಿಕಿಯ ಮಾರ್ಗ ವಾಗಿ ತುಂಬಲದ ಪಿಚಕಾರಿಯನ್ನು ದಾಟಿಸಿ ನೀರಿನಿಂದ ಬಾಯಿ ಮುಕ್ಕ ಳಿಸಿಕೊಂಡು ಕೇಳಿದನು.

" ಅಳುತ್ತೀಯಾಕೆ ಕಾಂತಾ ?

" ಮಾವನವರು ತೀರಿಕೊಂಡ ದಿನವೇ ನನ್ನ ನಗೆಯು ಹುಗಿದು ಹೋಯಿತು.

" ಏನಾಯಿತು ಹೇಳು.

" ಹೇಳಿ ಏನು ಪ್ರಯೋಜನ ?

" ಹಾಗಾದರೆ ಹೇಳಬೇಡ.

" ನೀವು ಹೀಗನ್ನುವಿರೆಂದು ನನಗೆ ಗೊತ್ತೇ ಇತ್ತು.

" ಹಾಗಾದರೆ ಹೇಳು.

" ನಾನು ಈ ಮನೆಗೆ ಏನೂ ಅಲ್ಲವೆ ?

" ನನ್ನ ಹೆಂಡತಿ ಈ ಮನೆಯ ಸೊಸೆಯೇ ಅಲ್ಲವೆ ?

" ಆದರೆ ?

" ಆದರೆ ಏನು ?

" ನಾನು ನಾಯಿಗಿಂತ ಕೀಳಾಗಿದ್ದೇನೆ ಈ ಮನೆಯಲ್ಲಿ.

" ಗೌಡರ ಮನೆತನದಲ್ಲಿ ನಾಯಿಗಳಿಗೂ ಬಹಳ ಬೆಲೆ ಇದೆ ಕಾಂತಾ !

" ನಾನು ಜಾತಿನಾಯಿಯ ಬಗ್ಗೆ ಈ ಮಾತು ಹೇಳಲಿಲ್ಲ. ನಿಮ್ಮ ಮನೆತನದಲ್ಲಿ ನಾಯಿಗೆ ಬೆಲೆಯಿದೆ. ಆದರೆ ಸೊಸೆಯು ಬೀದಿ ನಾಯಿಗಿಂತ ಕೀಳಾಗಿದ್ದಾಳೆ.

" ಇದು ತೀರಾ ಹೊಸಮಾತು. ನನ್ನ ತಾಯಿ ಈ ಮನೆತನದ ಸೊಸೆಯಾಗಿಯೇ ಬಂದವಳು. ಘನವಾಗಿ ಬಾಳಿದಳು. ನಮ್ಮ ಮನೆತನದಲ್ಲಿ ಯಾರಲ್ಲಿಯೂ ಕೀಳುಭಾವನೆಗಳಿಲ್ಲ. ತಿಳಿಯಿತಿಲ್ಲೊ ?

" ನಿಮ್ಮ ತಾಯಿ ಕಿರಿಯ ಸೊಸೆಯಾಗಿರಲಿಕ್ಕಿಲ್ಲ.

" ಈ ಪ್ರಶ್ನೆಯನ್ನು ಕೇಳುವ ಕಾರಣವೇನು ಹೇಳು.

" ಕಿರಿಯ ಸೊಸೆಯಾಗಿ... ....ಕಿರುಕೊಳವನ್ನು ತಾಳಿಕೊಳ್ಳುವದು ಬಹಳ ಕಷ್ಟ ತಾಯಿ ?

" ಅಣ್ಣ ಏನಾದರೂ ಅಂದನೆ ?

" ಭಾವನವರು ಧರ್ಮರಾಯರೇ ಆಗಿದ್ದಾರೆ. ಅವರಿಗೆ ಏನಾದರೂ ಅಂದರೆ ನನ್ನ ನಾಲಿಗೆಯಲ್ಲಿ ಹುಳ ಬಿದ್ದಾವು.

" ಮತ್ತೆ ?

" ಅಕ್ಕನ ಹಿರಿಯತನವನ್ನು ತಾಳಿಕೊಳ್ಳುವದು ಅಸಾಧ್ಯವಾಗಿದೆ.

" ಈಗ ಆದದ್ದಾದರೂ ಏನು ?

" ಈ ದಿನದ ಮಾತು ಇಂದಿನ ಮಾತಾಗಿಯೇ ಇಲ್ಲ. ಪ್ರತಿದಿನ ಏನಾದರೂ ನೆವಮಾಡಿ ಬಯ್ಯುತ್ತಾರೆ. ನೀವು ಸೋಮಪ್ಪನನ್ನು ತುಡುರಿದ ದಿನದಿಂದ ಅತಿಯಾಗಿಬಿಟ್ಟಿದೆ. ಹೇಗೆ ತಾಳಿಕೊಳ್ಳಬೇಕು ತಾಯಿ ?

" ಅತ್ತಿಗೆಯ ಸ್ವಭಾವ ನಿನಗರಿಯದ್ದಲ್ಲ ಕಾಂತಾ ! ನೀನು ಹೊಂದಿಕೊಂಡು ಹೋಗಬೇಕು. ಈ ಮನೆಯಲ್ಲಿ ಯಾವ ರೀತಿಯ ಬಿರುಕುಬಿಡಲೂ ನಾನು ಆಸ್ಪದ ಕೊಡಲಾರೆ.

" ಈ ಮಾತು ಅವರಿಗೆ ಅನ್ವಯಿಸುವದಿಲ್ಲವೇನು ?

" ಈ ಮಾತು ಎಲ್ಲರಿಗೂ ಅನ್ವಯಿಸುತ್ತದೆ. ಹೆಂಗಸರಿಂದ ಹೀಗಾಯಿ

ತೆಂಬ ಅಪವಾದಕ್ಕೆ ನಿನ್ನನ್ನು ಗುರಿಮಾಡಲು ನಾನೆಂದಿಗೂ ಆಸ್ಪದ ಕೊಡ ಲಾರೆ. ನೀನು ಸಂಬಾಳಿಸಿಕೊಂಡು ಹೋಗಬೇಕು.

" ನಿಮ್ಮ ಮಾತು ತೀರಾ ವಿಚಿತ್ರವಾಗಿದೆ. ಸಂಬಾಳಿಸಿಕೊಂಡು ಹೋಗುವವರು ಹಿರಿಯರೇ ಅಲ್ಲವೇನು ? ನಮ್ಮ ತವರುಮನೆಯಲ್ಲಿ ನನಗೆ ನಾಲ್ಕು ಕಕ್ಕಿಯರಿದ್ದಾರೆ. ನನ್ನ ತಾಯಿ ಅವರನ್ನೆಲ್ಲ ತಂಗೆಂದಿರ ಹಾಗೆ ನೋಡಿಕೊಳ್ಳುತ್ತಾಳೆ. ಆದರೆ............

" ಎಲ್ಲರೂ ನಿನ್ನ ತಾಯಿಯ ಹಾಗೆ ಇರುವದಿಲ್ಲ ಕಾಂತಾ !

" ಅಂದರೆ ನಾನು ಪ್ರತಿದಿನ ಅವಮಾನವನ್ನು ಸಹಿಸುತ್ತ ಸಾಯ ಬೇಕೆನ್ನಿರಿ " ಕಾಂತಾ ಸಿಡುಕಿನಿಂದಲೇ ಹೇಳಿದಳು.

" ಅಂತಹ ಅವಮಾನದ ಪ್ರಸಂಗವಾದರೂ ಯಾವುದು ಬಂದಿತು. ನಿಮ್ಮ ಹೆಂಗಸರ ರೀತಿಯೇ ನನಗೆ ವಿಚಿತ್ರವೆನ್ನಿಸುತ್ತದೆ.

ಮುಂಜಾವಿನಿಂದ ಸಂಜೆಯವರೆಗೆ ಹೊರಗೆ ಅಡ್ಡಾಡುವ ಗಂಡಸರಿಗೆ ಹೆಂಗಸರ ಬಾಳು ಹೇಗೆ ಅರ್ಥವಾದೀತು. ನಾಲ್ಕು ದಿನ ನಮ್ಮೊಟ್ಟಿಗೆ ಇರ್ರಿ. ಎಲ್ಲವೂ ತಿಳಿಯುತ್ತದೆ.

" ಆದದ್ದಾದರೂ ಏನು ಹೇಳು ?

" ನಾನು ಕಿವಿಯೂದಲು ಇದನ್ನು ಹೇಳುತ್ತಿರುವದಿಲ್ಲ. ನನ್ನ ಸಮಸ್ಯೆ ಯನ್ನು ಮಾತ್ರ ನಿಮಗೆ ನಿವೇದಿಸುತ್ತೇನೆ.

" ಆಗಲಿ. ನಾನು ನಿನ್ನ ಪುರಾಣ ಕೇಳಲು ಸಿದ್ಧನಿದ್ದೇನೆ.

ಕಾಂತಾಬಾಯಿ ಕಣ್ಣೀರು ತುಂಬಿಕೊಂಡು ಕುತ್ತಿಗೆಯ ಶಿರಗಳನ್ನು ಉಬ್ಬಿಸಿಕೊಂಡು ರಾಧವ್ವನ ಪ್ರಕರಣವನ್ನೆಲ್ಲ ಚಾಚೂ ಬಿಡದಂತೆ ಹೇಳಿ, ಕೊನೆಯ ಅವಮಾನದ ಪ್ರಸಂಗವನ್ನೂ ಬಣ್ಣಿಸಿದಳು.

ಕಾಂತಾಬಾಯಿ ಹೇಳಿ ಮುಗಿಸಿದಾಗ ಭೀಮರಾಯನ ಮುಖದಲ್ಲಿ ಗಾಂಭೀರ್ಯ ನೆಲೆಸಿತ್ತು. ಚಿಂತೆಯ ಒಂದು ಗೆರೆ ಹಣೆಯಮೇಲೆ ಮೂಡಿ ಮಾಯವಾಯಿತು. ಅವನು ಹೆಂಡತಿಯನ್ನು ರುಕ್ಷವಾಗಿ ನೋಡುತ್ತ

" ಇದರಲ್ಲಿ ನಿನ್ನ ತಪ್ಪೇ ಹೆಚ್ಚಾಗಿದೆ ಕಾಂತಾ ! ಎಂದನು.

" ನಾನು ಮಾಡಿದ ಅಪರಾಧವೇನು ?

" ಅತ್ತಿಗೆಯನ್ನು ಕೇಳದೆ ಕಾರುಭಾರ ಮಾಡಿದ್ದು ನಿನ್ನದೇ ತಪ್ಪು. ಇನ್ನುಮೇಲೆ ಹಾಗೆ ಮಾಡಬೇಡ. ಎಲ್ಲದಕ್ಕೂ ಅವರನ್ನು ಕೇಳುತ್ತಿರು.

" ಈ ಮನೆಯಲ್ಲಿ ನನಗೆ ಯಾವ ಸ್ವಾತಂತ್ರ್ಯವೂ ಇಲ್ಲವೆ ?

“ ಇದೆ. ನಿನಗೆ ಎಲ್ಲ ಸ್ವಾತಂತ್ರ್ಯವೂ ಇದೆ. ಈ ಮನೆ ನಿನ್ನದೂ ಆಗಿದೆ. ಆದರೆ ಒಂದು ಮನೆಯೆಂದ ಬಳಿಕ ಅಲ್ಲಿ ಕೆಲವು ಕಟ್ಟು ನಿಷ್ಟುರಗಳಿರುತ್ತವೆ. ಅವನ್ನು ಎಲ್ಲರೂ ಪಾಲಿಸಬೇಕಾಗುತ್ತದೆ. ಎಲ್ಲರೂ ಕಾರುಭಾರ ಮಾಡಿದರೆ ಆ ಮನೆ ಗಂಟೀಚವಡೆಯರ ಸಂತೆಯಾದೀತು.

ಅತ್ತಿಗೆಯ ಸ್ವಭಾವಕ್ಕೆ ಹೊಂದಿಕೊಂಡಿರು.

ಇಷ್ಟು ಹೇಳಿದ ಭೀಮರಾಯನು ಹೆಂಡತಿಯ ಮುಖವನ್ನು ನೋಡಿದಾಗ ಅಲ್ಲಿ ದೈನ್ಯತೆ ತುಂಬಿಕೊಂಡಿತ್ತು. ಭೀಮರಾಯನಿಂದ ಆ ಮುಖ ಕರುಣೆಯನ್ನು ಅಪೇಕ್ಷಿಸಿತ್ತು.

ಭೀಮರಾಯನ ನೋಟದಲ್ಲಿ ಅದರ ಅಭಾವವಿತ್ತು.

## ೩

ತಮ್ಮಂದಿರ ಮೇಲ್ವಿಚಾರಣೆಯಲ್ಲಿ ಬಳವಂತರಾಯನು ಅತ್ಯಂತ ದಕ್ಷನಾಗಿರುವಂತೆ ಅಂತಃಕರುಣೆಯೂ ಆಗಿದ್ದ. ಕಾಶೀಬಾಯಿಗೆ ಈ ವೆಚ್ಚದ ಅಂತಃಕರಣವು ಅಷ್ಟು ಸರಿಬೀಳುತ್ತಿರಲಿಲ್ಲ. ಆದರೆ ಈ ವಿಷಯದಲ್ಲಿ ಬಳವಂತರಾಯರು ಹೆಂಡತಿಯ ಮಾತನ್ನು ಕೇಳುತ್ತಿರಲಿಲ್ಲ.

ಬಳವಂತರಾಯನು ಪಟ್ಟಣಕ್ಕೆ ಹೋದಾಗಲೊಮ್ಮೆ ಜವಳೀ ಖರೀದಿ ಮಾಡಿಕೊಂಡು ಬರುತ್ತಿದ್ದ. ಅವರಲ್ಲಿ ಬಹು ಬೆಲೆಯುಳ್ಳದ್ದು ಕಾಂತಾ ಬಾಯಿಗೆ ಸೇರುತ್ತಿತ್ತು. ತಾನು ಡಬ್ಬಣಕಾಟೀ ಧೋತರ ಉಡುತ್ತಿದ್ದರೂ ತಮ್ಮ ಭೀಮರಾಯನಿಗೆ 'ಪರಮಸುಖ'ದ ಗೀರಂಚಿನ ಧೋತರವನ್ನು ಕೊಂಡು ತರುತ್ತಿದ್ದ. ಮುತ್ತುಗಾರರು ಬಂದಾಗ ಕಾಂತಾಬಾಯಿ ಕೇಳಿದಷ್ಟು ಮುತ್ತು ಗಳನ್ನು ಕೊಂಡು ಕೊಡುತ್ತಿದ್ದ. ಹೆಂಡತಿಗೆ ಅವನು ಕಡಿಮೆ ಮಾಡು ತ್ತಿರಲಿಲ್ಲ. ಆದರೆ ತಮ್ಮನ ಹೆಂಡತಿಗೆ ಹೆಚ್ಚಾಗಿ ಕೊಡಿಸುತ್ತಿದ್ದ. ಇದನ್ನು ಕಾಶೀಬಾಯಿ ಪ್ರತಿಭಟಿಸದಿರುತ್ತಿರಲಿಲ್ಲ. ಆದರೆ ಬಳವಂತರಾಯ ಇದಕ್ಕೆ ಸೊಪ್ಪು ಹಾಕುತ್ತಿರಲಿಲ್ಲ.

ಪಟ್ಟಣದಲ್ಲಿ ಕಲಿಯತ್ತಿರುವ ವಿಠ್ಠಲ, ಹಾಗೂ ರಾಜಣ್ಣರನ್ನು ಯುವರಾಜರಂತೆ ನೋಡಿಕೊಳ್ಳುತ್ತಿದ್ದ. ಅವರಿಗಾಗಿ ಬೇಕಾದಷ್ಟು ವೆಚ್ಚ ಮಾಡುತ್ತಿದ್ದ. ಅವರ ಯಾವ ಬೇಡಿಕೆಗಳನ್ನೂ ನಿರಾಕರಿಸುತ್ತಿರಲಿಲ್ಲ. ತಂದೆತಾಯಿಯಿಲ್ಲದ ಮಕ್ಕಳನ್ನು ಅಚ್ಚೆಯಿಂದ ಪೋಷಿಸುವದು ತನ್ನ ಕರ್ತವ್ಯಕರ್ಮವೆಂದು ತಿಳಿದುಕೊಂಡಿದ್ದ.

ರಾಜಣ್ಣನಿಗೆ ಖರ್ಚುಮಾಡಲು ಇನ್ನೂ ತಿಳಿಯುತ್ತಿರಲಿಲ್ಲ. ಅಣ್ಣನ ಧಾರಾಳವಾದ ಮನಸ್ಸನ್ನು ದುರುಪಯೋಗಮಾಡಿಕೊಳ್ಳುವುದರಲ್ಲಿ ವಿಠ್ಠಲನು ಮಾತ್ರ ನಿಸ್ಸೀಮನಾಗಿದ್ದ. ವಿಠ್ಠಲನು ಜಮೀನುದಾರನ ಮಗನ ಠೀವಿಯ ನಿಟ್ಟು ಹಾಸ್ಟೆಲ್‌ದಲ್ಲಿ ಕುಬೇರನ ಮರಿಯಂತೆ ಶ್ರೀಮಂತಿಕೆಯನ್ನು ಪ್ರದರ್ಶಿ ಸುತ್ತಿದ್ದನು.

ಮುಂಜಾವಿನ ಉಪಹಾರಕ್ಕೆ ನಾಲ್ಕೆಂಟು ಗೆಳೆಯರಾದರೂ ಅವನಿಗೆ ಬೇಕು. ಶಿನೇಮಾಕ್ಕೆ ಹೋಗಲಿ, ನಾಟಕಕ್ಕೆ ಹೋಗಲಿ, ಸರ್ಕಸ್ಸಿಗೆ ಹೋಗಲಿ ವಿಠ್ಠಲನು ಒಬ್ಬೊಂಟಿಗನಾಗಿ ಎಂದೂ ಹೋಗುತ್ತಿರಲಿಲ್ಲ. ಅವನ

ಸುತ್ತಲೂ ಅವನ ಪರಿವಾರವಿರುತ್ತಿತ್ತು. ಇವರೆಲ್ಲ ಅವನ ಮುಖಸ್ತುತಿ ಮಾಡಿ ಬಿಟ್ಟೀ ಸೌಕರ್ಯಗಳನ್ನು ಗಿಟ್ಟಿಸುವವರೇ ಆಗಿದ್ದರು.

ಅಣ್ಣನ ಈ ರೀತಿ ರಾಜಣ್ಣನ ಮನಸ್ಸಿಗೆ ಬರುತ್ತಿರಲಿಲ್ಲ. ಅವನು ನಾಟಕ, ಸಿನೇಮಾಗಳಿಗೆ ಅತ್ಯಂತ ಮಿತವಾಗಿ ಹೋಗುತ್ತಿದ್ದನು. ಅಭ್ಯಾಸ, ಆಟಪಾಟಗಳಲ್ಲಿ ಅವನು ಹೆಚ್ಚಿನ ಉತ್ಸಾಹವನ್ನು ತೋರಿಸುತ್ತಿದ್ದ.

ವಿಠ್ಠಲ ದೃಷ್ಟಿಯಲ್ಲಿ ತಮ್ಮನು ಕೆಲಸಕ್ಕೆ ಬಾರದವನಾಗಿದ್ದ. ಅವನ ಗೆಳೆಯರು ಅದೃಷ್ಟಹೀನನೆಂದು ರಾಜಣ್ಣನನ್ನು ಹೀಗಳೆಯುತ್ತಿದ್ದರು. ಇವನು ಜಮೀನುದಾರರ ಮಗನಾಗಿ ಜನ್ಮತಾಳದೆ ವೈದಿಕಬ್ರಾಹ್ಮಣನ ಕುನ್ನಿಯಾಗಿ ಜನ್ಮತಾಳುವದೇ ಯೋಗ್ಯವಾಗಿತ್ತು ಎಂದು ಇವರು ನಿರ್ಣಯ ಕೊಡುತ್ತಿದ್ದರು.

ಮೊದಮೊದಲು ರಾಜಣ್ಣನನ್ನು ಬಿಟ್ಟು ಇಂತಹ ಮೋಜು ಮಾಡುವದು ವಿಠ್ಠಲನಿಗೆ, ಆಗುತ್ತಿರಲಿಲ್ಲ. ಆದರೆ ತಮ್ಮನು ಹೇಳಿದಂತೆ ಕುಣಿಯುವದೂ ಅವನಿಗೆ ಇಷ್ಟವಿರಲಿಲ್ಲ.

ಮೂರು ವರುಷಗಳು ದಾಟಿದವು.

ವಿಠ್ಠಲನು ಇನ್ನೂ ಎಸ್.ಎಸ್.ಸಿ. ಕ್ಲಾಸಿನಲ್ಲಿಯೇ ವಿರಾಜಮಾನನಾಗಿದ್ದ. ಪರೀಕ್ಷಾದಿನಗಳು ಬರುತ್ತಿದ್ದವು; ಹೋಗುತ್ತಿದ್ದವು.

ವಿಠ್ಠಲನು ಮಾತ್ರ ಈ ವಾಸುದೇವತೆಯ ಕಣ್ಣಳತೆಯಲ್ಲಿ ಇನ್ನೂ ಬಂದಿರಲಿಲ್ಲ. ಆ ದೇವತೆಯು ಕೃಪಾಕಟಾಕ್ಷವೂ ಅವನಿಗೆ ಬೇಕಾಗಿರಲಿಲ್ಲ. ಪಾಸಾಗಿ ಹಳ್ಳಿಗೆ ಹೋಗುವದಕ್ಕಿಂತ ನಪಾಸು ಆಗುತ್ತ ಪಟ್ಟಣದಲ್ಲಿರುವದೇ ಸುಖವಾಗಿತ್ತು ವಿಠ್ಠಲನಿಗೆ. ಈ ಭಾವನೆಯಲ್ಲಿ ಅವನು ನಿಶ್ಚಿಂತನಾಗಿದ್ದ.

ಬಳವಂತರಾಯನಾಗಲಿ, ಭೀಮರಾಯನಾಗಲಿ ಈ ಬಗ್ಗೆ ಏನೂ ಮಾತಾಡುತ್ತಿರಲಿಲ್ಲ.

ಒಮ್ಮೆ ಮಾತ್ರ ಭೀಮರಾಯನು ಇವನ ಅಭ್ಯಾಸದ ಬಗ್ಗೆ ಛೀ ಹಾಕಿದಾಗ ವಿಠ್ಠಲನು ಒಂದು ಹಗರಣವನ್ನೇ ಮಾಡಿದನು. ಆ ದಿನ ಎಸ್.ಎಸ್.ಸಿ. ಪರಿಣಾಮದ ಯಾದಿಯಲ್ಲಿ ಅವನ ಹೆಸರು ಇರಲಿಲ್ಲ. ವಿಠ್ಠಲನಿಗೆ ಇದು ಮೊದಲೇ ಗೊತ್ತಿದ್ದರಿಂದ ಅವನು ಅದನ್ನು ನೋಡುವ ಗೊಡವೆಗೇ ಹೋಗಿರಲಿಲ್ಲ.

ಭೀಮರಾಯನಿಗೆ ರಾಜಣ್ಣನ ಮುಖಾಂತರವಾಗಿ ವಿಠ್ಠಲನು ಎರಡನೆಯ ಬಾರಿ ಪರೀಕ್ಷೆಯಲ್ಲಿ ಡುಮುಕಿ ಹೊಡೆದದ್ದು ಗೊತ್ತಾಯಿತು.

ಭೀಮರಾಯನಿಗೆ ತುಸು ವ್ಯಸನವೆನ್ನಿಸಿತು. ಅವನಿಗಾಗಿ ಇಷ್ಟು ಹಣ ಸುರಿಯುತ್ತಿದ್ದರೂ ಅವನು ಮಾತ್ರ ತನ್ನ ಕರ್ತವ್ಯವನ್ನು ಮಾಡುತ್ತಿಲ್ಲ ವೆಂಬುದೇ ಈ ವ್ಯಸನಕ್ಕೆ ಕಾರಣವಾಯಿತು.

ವಿಠ್ಠಲನು ಮನೆಗೆ ಬರುತ್ತಲೇ ಭೀಮರಾಯನು,

"ಈ ಹೊತ್ತು ನಿನ್ನ ಪರೀಕ್ಷೆಯ ಪರಿಣಾಮದ ದಿನವಲ್ಲವೇ ? ಎಂದು ಕೇಳಿದನು.

" ಆ ಪರಿಣಾಮ ಏನಾಗುವದೆಂಬುದನ್ನು ನಾನು ಮೊದಲೇ ಅರಿತದ್ದ ರಿಂದ ನನಗೆ ಅದರ ಬಗ್ಗೆ ಆಸ್ಥೆಯೇ ಇರಲಿಲ್ಲ.

" ಹೀಗೆ ಹೇಳಲು ನಿನಗೆ ನಾಚಿಕೆ ಬರಬೇಕಾಗಿತ್ತು. ಪಟ್ಟಣದಲ್ಲಿ ನಿನ್ನನ್ನು ಗೂಳಿಯಂತೆ ಮೇಯಲು ಮಾತ್ರ ಇಡಲಾಗಿದೆಯೆಂದು ತಿಳಿದೆಯಾ ? ನೀನು ಮಾಡುವ ಖರ್ಚಿಗೆ ಮಿತಿ ಇಲ್ಲ. ಆದರೆ ಅಭ್ಯಾಸ ಮಾತ್ರ ಪೂಜಿ. ಈ ಬಗ್ಗೆ ನಿನಗೆ ವ್ಯಸನವೂ ಇಲ್ಲ. ಈ ಪರಿಯಿಂದ ಏತಕ್ಕೆ ಮಣ್ಣು ಹೊಯ್ದುಕೊಳ್ಳಲು ಪಟ್ಟಣವಲ್ಲಿದ್ದೀ.

ಎಂದು ಚನ್ನಾಗಿ ತುಡರಿದನು.

" ನನ್ನ ಖರ್ಚು ನಿಮಗೆ ಭಾರವಾಗಿದ್ದರೆ ಹೇಳಿಬಿಡಿರಿ.

ವಿಠ್ಠಲ ಕಣ್ಣೆತ್ತಿ ಮಾತಾಡಿದ.

" ನಿನ್ನ ವೆಚ್ಚ ನಮಗೆ ತಲೆಭಾರವಾಗಿದೆಯೆಂದು ನಾನು ಹೇಳಲಿಲ್ಲ. ನೀನು ಲಂಡನ್ನಿನಲ್ಲಿ ಕಲಿತರೂ ಪೂರೈಸುವ ಯೋಗ್ಯತೆ ಇದೆ. ಆದರೆ ನೀನು ಕತ್ತೆಯಂತೆ ಬೀದಿಬೀದಿ ತಿರುಗಿ ಉಂಡಾಡಿಗನಾಗುವುದು ಮಾತ್ರ ನನಗೆ ನೋಡಲು ಸಾಧ್ಯವಿಲ್ಲ.

" ನಾನು ಹೀಗೆ ಮಾಡುತ್ತೇನೆಂದು ರಾಜಣ್ಣಾ ಹೇಳಿದನೇನು ?

" ಅಂಗೈ ಹುಣ್ಣಿಗೆ ಕನ್ನಡಿಯಾಕೆ ವಿಟಾ ? ನಿನ್ನ ಸ್ವರೂಪದರ್ಶನ ವಾಗುತ್ತಿರುವದು ಸುಳ್ಳೇನು ?

ಹಾಗಾದರೆ ನನಗೆ ಇದಕ್ಕೂ ಹೆಚ್ಚಿಗೆ ಅಭ್ಯಾಸಮಾಡಲು ಸಾಧ್ಯವಿಲ್ಲ. ನನ್ನ ತಲೆಗೆ ತ್ರಾಸವಾಗುತ್ತದೆ.

" ಎಷ್ಟು ಸೂಕ್ಷ್ಮವಾಗಿದೆಯೋ ನಿನ್ನ ತಲೆ ! ತನಗೆ ಕುಣಿಯುವ ಮನಸ್ಸಿಲ್ಲ ಅಂಗಳ ಡೊಂಕೆಂದು ಹೇಳುತ್ತಾನೆ. ನಿನ್ನನ್ನು ತಿನ್ನಲು ಮಾತ್ರ ಪಟ್ಟಣದಲ್ಲಿ ಇಟ್ಟಿರುವೆವೇನು ?

" ಈ ಸಲ ನಾನು ಹೋಗುವದೇ ಇಲ್ಲ ಆಯಿತಿಲ್ಲೋ ? ಒಮ್ಮೆ

ನಪಾಸು ಆದ ಕೂಡಲೇ ಹೀಗೆ ನೀನು ಬಯ್ಯಬೇಕೆ? ಅಪ್ಪನು ಜೀವಂತ ವಿದ್ದರೆ ಹೀಗೆ ಒಂದೇ ಸವನೇ ಅಡ್ಡಮಳೆ ಸುರಿದ ಹಾಗೆ ಪೂಜೆ ಮಾಡು ತ್ತಿದ್ದನೆ? ಅಪ್ಪನು ಇಲ್ಲವೆಂದು ನೀನು ಅನ್ನುತ್ತೀ. ಅನ್ನು. ಬೇಕಾದಷ್ಟು ಅನ್ನು.

ವಿಠ್ಠಲ ಕಣ್ಣೊರಸಿಕೊಳ್ಳುತ್ತ ಗದ್ಗದಾಯಮಾನವಾಗಿ ಹೇಳಿದನು.

" ಅಪ್ಪನು ಜೀವಂತವಿದ್ದರೆ ನಿನ್ನನು ಒದ್ದುಬಿಡುತ್ತಿದ್ದನು. ಹೆಣ್ಣು ಹೆಂಗಸಿನ ಹಾಗೆ ಅಳಲಿಕ್ಕೆ ನಿನಗೇನು ಧಾಡಿಯಾಯಿತು. ನೀನು ಪಟ್ಟಣಕ್ಕೆ ಹೋಗುವ ಕಾರಣವಿಲ್ಲ. ಮನೆಯಲ್ಲಿ ಬಿದ್ದುಕೋ! ಉಡಾಳನ್ನು ತಂದು.

ಭೀಮರಾಯ ಮತ್ತೆ ದನಿ ಏರಿಸಿ ನುಡಿದನು.

ವಿಠ್ಠಲನು ಈ ಅಬ್ಬರದಿಂದ ಎದೆಗೆಡದೆ ತನ್ನ ಅಳುವನ್ನು ಹೆಚ್ಚಿಸಿ

" ನಾನು ಹೋಗುವದೇ ಇಲ್ಲ........ಅಪ್ಪ!....ಅಪ್ಪ....ನಿದ್ದರೆ....

" ಭೀಮರಾವ ಭಾವಜೀ!

ಕಾಶೀಬಾಯಿ ಅಡಿಗೆಯ ಮನೆಯ ಬಾಗಿಲಲ್ಲಿ ನಿಂತು ಕೂಗಿದಳು.

" ಏನು ಅತ್ತಿಗೆ?

" ಇನ್ನು ಸಾಕುಮಾಡಿರಿ. ಪಾಪ! ಮಾವನವರನ್ನು ಸ್ಮರಿಸಿ ಚಿಕ್ಕ ಭಾವಜಿಯವರು ಸುಮ್ಮನೆ ಅಳುತ್ತಾರೆ ಪಾಪ!

ಅವನು ಪಕ್ಕ ಕಳ್ಳನಾಗಿದ್ದಾನೆ ಬಿಡಿರಿ. ತನ್ನ ತಪ್ಪನ್ನು ಮುಚ್ಚಿ ಕೊಳ್ಳಲು ಈ ಸೋಗು ಹಾಕಿದ್ದಾನೆ.

" ಹೌದು. ನಾನು ಸೋಗು ಹಾಕುತ್ತೇನೆ. ಆಯಿತಲ್ಲೊ! ಅಪ್ಪ ನನ್ನು ಸ್ಮರಿಸಿ ಅಳುವದೂ ನಿನಗೆ ಸೋಗು ಅಲ್ಲವೇ! ಅಯ್ಯೋ! ಅಪ್ಪಾ!

ವಿಠ್ಠಲ ಕರವಸ್ತ್ರದಿಂದ ಮೂಗು ಹಿಂಡಿಕೊಂಡನು.

ಇದೆಲ್ಲವನ್ನೂ ಕೋಣೆಯಲ್ಲಿ ಕುಳಿತು ಕೇಳುತ್ತಿದ್ದ ಬಳವಂತರಾಯನು ಹೊರಗೆ ಬಂದು,

" ಭೀಮಣ್ಣಾ! ವಿಠ್ಠಲನು ನಪಾಸು ಆದರೆ ಏನಾಯಿತು ಬಿಡು. ಇನ್ನೊಂದು ವರುಷ ಕಲಿಯಲಿ.

ಎಂದು ವಿಠ್ಠಲನ ಬೆನ್ನ ಸವರತೊಡಗಿದನು.

" ಅವನು ಕಲಿಯಲು ನಾನು ಬೇಡವೆನ್ನುವದಿಲ್ಲ ಅಣ್ಣಾ! ನಮ್ಮ ಮನೆಯಲ್ಲಿ ಕಲಿಯುವವರೇ ಇವರು. ಆದರೆ........

" ಇನ್ನುಮೇಲೆ ನಪಾಸು ಆಗುವದಿಲ್ಲ ಭೀಮಣ್ಣಾ!

ವಿಠ್ಠಲ ಬಳವಂತನ ಅಂಗರಕ್ಷೆಯಲ್ಲಿ ಹೇಳಿದ.

"ಬಹಳ ಪಂಡಿತನೋ ನೀನು!" ಎಂದು ಭೀಮಣ್ಣ ನಗುತ್ತಲೇ ನುಡಿದ.

ಮರುದಿನ ಭೀಮರಾಯನು ದೇವರ ಪೂಜೆಗೆ ಕುಳಿತಾಗ ವಿಠ್ಠಲನು ಕಾಂತಾಬಾಯಿಯ ಮುಂದೆ ಗಟ್ಟಿಸಿ ಗಟ್ಟಿಸಿ ಹೇಳುತ್ತಿದ್ದ.

"ನಾನು ಹತ್ತುಸಾರೆ ನಪಾಸು ಆಗುತ್ತೇನೆ. ಇದರಲ್ಲಿ ಭೀಮಣ್ಣನ ದೇನು ಗಂಟು ಹೋಗುತ್ತದೆ. ನನ್ನ ದುಡ್ಡಿನಿಂದ ನಾನು ಕಲಿಯುತ್ತೇನೆ. ನನಗೇನು ಇವನು ತನ್ನ ದುಡ್ಡು ಕೊಡುತ್ತಾನೇನು!

ಭೀಮರಾಯನ ಪೂಜೆ ಸಾಗಲಿಲ್ಲ. ಆದರೆ ಅವನು ಈ ಬಗ್ಗೆ ತಮ್ಮನನ್ನು ಕೇಳಲಿಲ್ಲ.

ಇದರಲ್ಲಿ ಅವನು ಸೋಮಪ್ಪನ ಕೈವಾಡವನ್ನೇ ಗುರುತಿಸಿದ.

ಅತ್ತಿಗೆಗೆ ನೋವಾಗಬಾರದೆಂದು ಭೀಮರಾಯನು ಸೋಮಪ್ಪನಿಗೆ ಏನೂ ಅನ್ನುತ್ತಿರಲಿಲ್ಲ.

ಸೋಮಪ್ಪನಿಗೆ ಇದು ತಿಳಿದಿತ್ತು. ಅದಕ್ಕಾಗಿ ಅವನು ತನ್ನ ವಿಷ ದುಸಿರನ್ನು ಈ ಪ್ರಸಂಗ ಬಂದಿತೆಂದು ವಿಠ್ಠಲನ ಕಿವಿಯಲ್ಲಿ ಊದಿ ಯಶಸ್ವಿ ಯಾಗಿದ್ದ. ವಿಠ್ಠಲನ ಮನಸ್ಸಿನಲ್ಲಿ ಈ ಮನೆಯ ಪಾಲುಗಾರಿಕೆಯಲ್ಲಿ ತನಗೂ ಸಾಕಷ್ಟು ಪಾಲು ಇದೆ ಎಂಬುದನ್ನು ಬಿಂಬಿಸಿದ್ದ.

ತರುಣವಯಸ್ಸು ಇದನ್ನು ನಂಬಿತು.

ಇದನ್ನು ಈಗಲೇ ಇನ್ನಷ್ಟು ಹಿಂಜಿದರೆ ಮನೆಯಲ್ಲಿ ಒಣ ಹಗರಣ ವಾಗುವದೆಂದು ತಿಳಿದು ಭೀಮರಾಯ ಸುಮ್ಮನಿದ್ದುಬಿಟ್ಟ.

ಈ ತಮ್ಮಂದಿರನ್ನು ಪ್ರೀತಿಸುವದು ಕೂಡ ಕಾಶೀಬಾಯಿಯ ರಾಜ ಕೀಯವಾಗಿತ್ತು. ಭೀಮರಾಯನ ವರ್ಚಸ್ಸನ್ನು ಕಡಿಮೆ ಮಾಡುವದೇ ಈ ಪ್ರೀತಿಯ ಉದ್ದೇಶವಾಗಿತ್ತು. ಪ್ರಸಂಗ ಪಕ್ವವಾದಾಗ ಇದರ ಲಾಭ ಸಿಗು ತ್ತದೆ ಎಂಬುದು ಅವರ ಗ್ರಹಿಕೆಯಾಗಿತ್ತು.

ಭೀಮರಾಯನಿಗೆ ಈ ಪರಿವೆ ಇರಲಿಲ್ಲ. ಅವನು ಅಣ್ಣತಮ್ಮಂದಿ ರನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದನು. ಈ ಒಂದು ವಿಷಯವನ್ನು ಬಿಟ್ಟರೆ ವಿಠ್ಠಲನು ಕೂಡ ಭೀಮರಾಯನನ್ನು ಗೌರವದಿಂದಲೇ ಕಾಣು ತ್ತಿದ್ದನು.

ಆ ಸಲ ಪಟ್ಟಣಕ್ಕೆ ಹೊರಡುವ ದಿನ ಭೀಮರಾಯನು ವಿಠ್ಠಲನ ಬೆನ್ನಮೇಲೆ ಕೈಯಾಡಿಸುತ್ತ,

" ನಾನು ಆ ದಿನ ಹಾಗೆಂದೆನೆಂದು ಮನಸ್ಸಿಗೆ ಹಚ್ಚಿಕೊಳ್ಳಬೇಡ ವಿಠ್ಠಲಾ! ಅದನ್ನು ಮರೆತುಬಿಡು. ಖರ್ಚಿಗೆ ಕಡಿಮೆಮಾಡಿಕೊಳ್ಳಬೇಡ. ಈ ಮನೆಯು ನಿನ್ನದೇ ಆಗಿದೆ. ಇದರಲ್ಲಿ ನಿನ್ನದೂ ಇದೆ. ನೀನು ದಾಕ್ಷಿಣ್ಯ ಪಟ್ಟುಕೊಳ್ಳಬೇಡ ತಿಳಿಯಿತೆ ?

ಎಂದಾಗ ಭೀಮರಾಯನ ಕಣ್ಣು ತುಂಬಿದ್ದವು.

ವಿಠ್ಠಲನು ಅಣ್ಣನ ಕಾಲಿಗೆ ಬಿದ್ದು ಹೇಳಿದನು.

" ನಾನು ಅದನ್ನು ಅಂದೇ ಮರೆತುಬಿಟ್ಟಿದ್ದೇನೆ ಅಣ್ಣ! ನೀನು ನಾನು ಆಡಿದ ಮಾತುಗಳನ್ನು ಕ್ಷಮಿಸಬೇಕು. ನನ್ನಿಂದ ತಪ್ಪಾಯಿತು.

ಭೀಮರಾಯನು ತಮ್ಮನನ್ನು ಗಾಢವಾಗಿ ಆಲಿಂಗಿಸಿದನು. ಇದನ್ನು ನೋಡುತ್ತಿದ್ದ ಬಳವಂತರಾಯನು ಧೋತರದ ಚುಂಗಿನಿಂದ ಕಣ್ಣೊರಿಸಿ ಕೊಂಡನು.

ಗಾಡಿಯನ್ನು ಏರುವ ಮೊದಲು ವಿಠ್ಠಲನು ಭೀಮಣ್ಣನನ್ನು ಪಕ್ಕಕ್ಕೆ ಕರೆದು ಹೇಳಿದನು.

" ಈ ಪಿಶಾಚಿಯನ್ನು ಸಾಧ್ಯವಾದಷ್ಟು ಬೇಗನೆ ನಮ್ಮ ಮನೆಯಿಂದ ಓಡಿಸಬೇಕು. ಅಣ್ಣ !

" ಯಾವ ಪಿಶಾಚಿಯೊ ?

" ಸೋಮಪ್ಪನೇ ಈ ಗಂಡುಪಿಶಾಚಿ ಅಣ್ಣ! ನನ್ನ ತಲೆಯಲ್ಲಿ ಇಲ್ಲದ ವಿಚಾರವನ್ನು ಬಿಂಬಿಸಿದ್ದಾನೆ. ಈ ಮನೆಯ ಆಸ್ತಿಯಲ್ಲಿ ನಾಲ್ಕರ ಲ್ಲೊಂದುಪಾಲು ನನ್ನದೆಂದೂ, ನಾನು ಧಾರಾಳವಾಗಿ ಖರ್ಚುಮಾಡ ಬಹುದೆಂದೂ ಹೇಳುತ್ತಾನೆ.

" ಅವನು ಸತ್ಯವನ್ನೇ ಹೇಳಿದ್ದಾನೆ ತಮ್ಮ!

" ಆದರೆ ಇದನ್ನು ಹೇಳಲು ಅವನು ಯಾರು ?

" ಅವನು ಯಾರೂ ಅಲ್ಲವೆಂದು ನಿನಗೆ ಅನ್ನಿಸಿದ್ದರೆ ಇದನ್ನು ಕೇಳುವ ಆಗತ್ಯವಾದರೂ ಏನು ತಮ್ಮ! ಅವನು ಅಲುಗಿಸಿದರೆ ನಿನ್ನ ಹೃದಯ ಅಲ್ಲಾಡಬೇಕೇನು. ನಾವು ನಾಲ್ಕು ದೇಹಗಳಾಗಿದ್ದರೇನಾಯಿತು. ಅವೆಲ್ಲ ಒಂದೇ ತಾಯಿಬೇರಿನ ನಾಲ್ಕು ಕುಡಿಗಳಲ್ಲವೇನು ? ನನ್ನದೆಲ್ಲ ನಿನ್ನದು ತಮ್ಮ !

" ನನ್ನದು ?

" ನಿನ್ನದೆಲ್ಲ ನನ್ನದು.

ಭೀಮರಾಯನು ಸಂತೋಷದಿಂದ ನಕ್ಕನು. ಆ ನಗೆಯಲ್ಲಿ ವಿಠ್ಠಲನು ತನ್ನ ನಗೆಯನ್ನೂ ಬೆರೆಯಿಸಿದನು.

" ನೀವು ಯಾಕ ನಕ್ಕರಿ ಹೇಳ್ರಿ ! ನಾನೂ ನಗ್ತೀನಿ.

ಸುಧಾ ನಗುತ್ತಲೇ ಓಡಿಬಂದು ಕೇಳಿದಳು.

" ನಾವು ನಕ್ಕದ್ದು ನಿನಗಾಗಿಯೇ ತಂಗಿ !

" ನಾನು ನಗುವ ಗೊಂಬೆಯೇನು ?

" ಹಾಗೆ ರಾಜೂ ಹೇಳುತ್ತಾನೆ.

" ಇರಲಿ ಬಿಡು. ಈಗ ಯಾಕ ನಕ್ಕರಿ ಹೇಳ್ರಿ.

" ಹೇಳಿದರೆ ನೀನೂ........

" ಅದಕ್ಕೇ ಹೇಳು. ನಾನು ನಗಬೇಕಾಗಿದೆ.

" ಆದರೆ ಅದನ್ನು ಹೇಳಿದರೆ ನೀನು ನಗುವದಿಲ್ಲ, ಓಡಿಹೋಗುತ್ತಿ !

" ನಾನು ಏನೇ ಮಾಡಲಿ ಹೇಳು.

" ಹೇಳಲಿಯಾ ?

" ಹೂಂ ! ಹೇಳು.

" ಭೀಮಣ್ಣಾ ನನಗೆ ಒಂದು ಕೆಲಸವನ್ನು ಹೇಳಿದ್ದಾನೆ.

" ಯಾವ ಕೆಲಸವಪ್ಪಾ ಅಂಥದು ?

" ನಿನಗೆ ಒಬ್ಬ ಗಂಡನನ್ನು ಪಟ್ಟಣದಲ್ಲಿ ನೋಡಲು ಹೇಳಿದ್ದಾನೆ ಭೀಮಣ್ಣಾ.

ಈ ಮಾತನ್ನು ಕೇಳಿ ಅಲ್ಲಿ ನಿಂತವರೆಲ್ಲ ಬೊಳ್ಳನೇ ನಕ್ಕರು.

ಸುಧಾ ಮಾತ್ರ ನಗಲಿಲ್ಲ. ಅವಳು ಗಂಭೀರವಾಗಿ ಹೇಳಲು ಪ್ರಯತ್ನಪಟ್ಟಳು,

" ನನ್ನ ಗಂಡನ್ನ....ಅಪ್ಪಯ್ಯಾ....

ಬಳವಂತರಾಯ ಬಂದು ಸುಧೆಯನ್ನು ಪಕ್ಕಕ್ಕೆ ಕರೆದುಕೊಂಡನು. ಎಲ್ಲರೂ ಏಕಕಾಲಕ್ಕೆ ಹೋಗಿಬನ್ನಿರೆಂದು ಹೇಳುತ್ತಿರುವಾಗ ರಾಜಣ್ಣಾ, ವಿಠ್ಠಲ ಕುಳಿತ ಬಂಡಿ ಮುಂದೆ ಸರಿಯಿತು.

ವಿಠ್ಠಲನ ಕಣ್ಣು ತುಂಬಿದುದನ್ನು ಭೀಮಣ್ಣಾ ನೋಡಿದ.

" ವಿಠ್ಠೂ........ವಿಠ್ಠೂ................ಹೋಗಿ....ಬಾ !

ವಿಠ್ಠಲ ಗೋಣುಹಾಕಿ ಕೈ ನೇವರಿಸಿದನು.

" ಹೋಗಿ ಬರತೀನಿ ಭೀಮಣ್ಣ !

ರಾಜೂ ನಡಗುವ ದನಿಯಲ್ಲಿ ಹೇಳಿದ.

ಈಸಲ ಮೌನವಾಗಿ ಕೈನೇವರಿಸುವ ಸರದಿ ಭೀಮರಾಯನದಾಯಿತು.

ಈ ಸನ್ನಿವೇಶ ಪೂರ್ತಿಯಾದ ಮೇಲೆ ಭೀಮರಾಯನು ತಪ್ಪಿ ಕೂಡ ವಿಠ್ಠಲನ ಪರೀಕ್ಷೆಯ ಪರಿಣಾಮದ ಬಗ್ಗೆ ಮಾತಾಡುತ್ತಿರಲಿಲ್ಲ. ಮೂರು ಸಾರೆ ಅವನು ತೇರ್ಗಡೆ ಹೊಂದದಿದ್ದರೂ ಅವನು ಆ ಬಗ್ಗೆ ನಿರ್ಲಕ್ಷ್ಯ ದಿಂದಲೇ ಇದ್ದನು.

ಈ ಮೂರು ವರುಷಗಳ ಅವಧಿಯಲ್ಲಿ ಮನೆಯಲ್ಲಿ ಹೇಳಿಕೊಳ್ಳು ವಂತಹ ಸ್ಥಿತ್ಯಂತರಗಳಾಗದಿದ್ದರೂ ಕಾಂತಾಬಾಯಿ ಹಿರಿಯವಳೊಡನೆ ಯಾವಾಗಲೂ ಅಸಮಾಧಾನದಿಂದಲೇ ಇರುತ್ತಿದ್ದಳು. ಬೆಳೆದುನಿಂತ ಸುಧಾ ಮಾತ್ರ ಇವಳ ಮೆಚ್ಚಿಗೆಯವಳಾಗಿದ್ದಳು.

ಸುಧಾನಿಗೆ ಯಾರೂ, ಯಾವ ರೀತಿಯಿಂದಲೂ ಕಡಿಮೆ ಮಾಡು ತ್ತಿರಲಿಲ್ಲ.

ಗಂಡಸರ ಏಕಸೂತ್ರತೆಯ ಅಂಜಿಕೆಯಲ್ಲಿ ಈ ಹೆಂಗಸರು ಏನು ಮಾಡಲೂ ಸಾಧ್ಯವಿರಲಿಲ್ಲ. ಅವರ ಹೃದಯದಲ್ಲಿ ಬಿರುಕು ಬಿಡಿಸಲು ತಮಗೆ ಸಾಧ್ಯವಿಲ್ಲವೆಂಬುದನ್ನು ಇಬ್ಬರೂ ಕಂಡುಕೊಂಡಿದ್ದರು. ಕಾಶೀಬಾಯಿ ಸೋಮಪ್ಪನನ್ನು ಪುಸಲಾಯಿಸುತ್ತಲೇ ಇದ್ದಳು. ಆದರೆ ಬಳವಂತರಾಯನು ಸೋಮಪ್ಪನ ಯಾವ ಮಾತನ್ನು ಕೇಳಿದರೂ ತಮ್ಮಂದಿರ ಬಗ್ಗೆ ಯಾವ ದೂರನ್ನೂ ಕೇಳುತ್ತಿರಲಿಲ್ಲ. ಬದಲಾಗಿ ಅವನಿಗೆ ಈ ವಿಷಯದಲ್ಲಿ ತಲೆಹಾಕ ಕೂಡದೆಂದು ನಿರ್ದಾಕ್ಷಿಣ್ಯವಾಗಿ ಹೇಳುತ್ತಿದ್ದನು. ಇನ್ನೊಮ್ಮೆ ಇಂತಹ ಮಾತು ಹೇಳಿದರೆ ಅವನು ತನ್ನ ಆಶ್ರಯಕ್ಕೆ ಎರವಾಗಬಹುದೆಂದೂ ಅಬ್ಬರಿ ಸುತ್ತಿದ್ದನು.

ಇಂತಹ ಸಂದರ್ಭವಾದಾಗ ಕಾಶೀಬಾಯಿ ತನ್ನ ವಾಗ್ಬಾಣಗಳನ್ನು ಕಾಂತಾಬಾಯಿಗೆ ಎಸೆದು ಗಾಸಿಮಾಡುತ್ತಿದ್ದಳು.

ಆ ಶುಕ್ರವಾರದಿನ ಕಾಂತಾಬಾಯಿ ಲಕ್ಷ್ಮೀಗುಡಿಗೆ ಹೋದಾಗ ಅಲ್ಲಿ ಮೇಲಿನ ಓಣಿಯ ಜೋಯಿಸರ ಸುಂದರವ್ವ ಭೇಟಿಯಾಗಿ ಅವಳನ್ನು ಮನೆಗೆ ಕರೆದುಕೊಂಡು ಹೋಗಿ ಆದರ ಉಪಚಾರಮಾಡಿದಳು. ಇದರಿಂದ ಮನೆಗೆ ಹೋಗಲು ಕಾಂತಾಬಾಯಿಗೆ ಕತ್ತಲೆಯೇ ಆಯಿತು.

ರಾಧವ್ವನ ಮುಖಾಂತರವಾಗಿ ಕಾಂತಾಬಾಯಿ ಎಲ್ಲಿ ಹೋಗಿದ್ದ ಳೆಂಬ ಸುದ್ದಿ ಆಗಲೇ ಕಾಶೀಬಾಯಿಗೆ ತಿಳಿದಿತ್ತು.

ಆ ಹಳ್ಳಿಯಲ್ಲಿ ಅಗ್ರಮರ್ಯಾದೆ ತನಗೇ ಆಗಬೇಕೆಂಬುದು ಅವಳ ಇಚ್ಛೆಯಾಗಿರುತ್ತಿತ್ತು. ಇದರ ವ್ಯತಿರಿಕ್ತವಾಗಿ ನಡೆದರೆ ಅವಳಿಗೆ ಬಹಳ ಸಿಟ್ಟುಬರುತ್ತಿತ್ತು.

ಕಾಂತಾಬಾಯಿ ಮನೆಗೆ ಬಂದು ಅಕ್ಕನ ಗಂಟುಹಾಕಿದ ಮುಖವನ್ನು ನೋಡಿಹೇಳಿದಳು.

" ಜೋಯಿಸರ ಸುಂದರವ್ವನ ಮನೆಗೆ ಹೋಗಿದ್ದೆ. ಬರಲು ತಡವಾಯಿತು.

" ಹೇಳದೆ ಕೇಳದೆ ಹೋದ ನಿನಗೆ ಈಗ ಹೇಳುವ ಅಗತ್ಯವಾದರೂ ಏನಿತ್ತು ?

ಬದ್ಧ ಬುಕುಟಿತಳಾಗಿ ಕಾಶೀಬಾಯಿ ಕೇಳಿದಳು.

" ನಾನು ಅವಳ ಮನೆಗೆ ಹೋಗಬೇಕೆಂದು ಹೋದವಳಲ್ಲ. ಬಹಳ ದಿನಗಳಮೇಲೆ ಗುಡಿಯಲ್ಲಿ ಭೆಟ್ಟಿಯಾಯಿತು. ಅವಳು ಆಗ್ರಹಮಾಡಿ ಕರೆದಳು. ನನಗೆ ಒಲ್ಲೆವೆನ್ನುವ ಮನಸ್ಸಾಗಲಿಲ್ಲ.

" ಆ ಸುಂದರಿಗೊಂದು ರೀತಿ ರಿವಾಜು ಇಲ್ಲದಿದ್ದರೆ ನಿನಗೆ ಮರ್ಯಾದೆ ಯಾದರೂ ಇರಬೇಡವೆ ?

" ಇದರಲ್ಲಿ ಮರ್ಯಾದೆಯ ಪ್ರಶ್ನೆಯಾದರೂ ಎಲ್ಲಿದೆ ಅಕ್ಕ ?

" ಚಿಲ್ಲರೆ ಮನೆತನದಿಂದ ಬಂದವರಿಗೆ ಇದು ಹೇಗೆ ತಿಳಿದೀತು ? ಗೌಡರ ಮನೆಯ ಹೆಂಗಸರು ಜೋಯಿಸರ ಮನೆಗೆ ಅನಾಯಾಸವಾಗಿ ಹೋಗುತ್ತಾರೇನೆ ?

" ಅವಳು ಬಾಜಾಬಜಂತ್ರಿಯನ್ನು ತೆಗೆದುಕೊಂಡು ಪಲ್ಲಕ್ಕಿಯನ್ನು ತರಬೇಕಾಗಿತ್ತೇನು ? ನಾನು ಮಾತ್ರ ಚಿಲ್ಲರೆ ಮನೆತನದಿಂದ ಬಂದವಳು ಜೋಯಿಸರ ಮನೆಗೆ ಹೋಗಿದ್ದೆ. ಊರನ್ನಾಳುವ ಗೌಡರ ಹೆಂಡತಿ ನೀವು ಆಗಾಗ ಆ ವಾಲೀಕಾರ ಗಂಗವ್ವನ ಮನೆಗೆ ಹೋಗುತ್ತೀರಲ್ಲ! ಅದು ಮರ್ಯಾದೆಯೇನು ?

" ಮಾತಿಗೆ ಮಾತು ಬೆಳಿಸಬೇಡ ಸುಮ್ಮನಿರು.

" ಮಾತು ಬೆಳೆಸಿದವಳು ನಾನೋ ನೀವೋ ?

" ನನಗೆ ನಿಮ್ಮಿಂದ ಸಾಕುಸಾಕಾಗಿಹೋಗಿದೆ.

" ಈ ಮಾತನ್ನು ನನ್ನ ಮುಂದೆ ಹೇಳಿ ಏನು ಪ್ರಯೋಜನ ? ಗಂಡಸರ ಮುಂದೆ ಹೇಳಿ ಬೇಸರವನ್ನು ಕಳೆದುಕೊಳ್ಳಿರಲ್ಲ !

" ಇಷ್ಟು ಮಾತಾಡಿದರೆ ಎಷ್ಟು ಮಾತಾಡುತ್ತೀಯೇ ?

" ಕಡ್ಡಿ ಇದ್ದುದನ್ನು ಗುಡ್ಡಮಾಡಿ ನನ್ನನ್ನು ಬಯ್ಯುವ ಹಿರಿಯರು ನೀವೇ ವಿಚಾರಿಸಬೇಕು.

" ಇತ್ತೀಚೆಗೆ ನಿನ್ನ ಸೊಕ್ಕು ಬಹಳವಾಗಿದೆ.

" ಇದು ಸಹವಾಸದ ಫಲವೇ ಆಗಿರಬೇಕು.

" ನನ್ನನ್ನು ಸೊಕ್ಕಿನವಳೆನ್ನುವಿಯಾ ?

" ನಾನೇಕೆ ಹಾಗೆನ್ನಲಿ ? ನನ್ನ ಸೊಕ್ಕಿನ ಕಾರಣವನ್ನು ಮಾತ್ರ ಹೇಳಿದೆ.

" ಇದು ನಡೆಯುವ ಮಾತಲ್ಲ ನೋಡು. ಇದು ನನಗೆ ಬಗೆಹರಿಯುವದಿಲ್ಲ ತಿಳಿಯಿತೆ ?

" ಬಗೆ ಹರಿಸಿಕೊಂಡು ಬಿಡಿರಲ್ಲ. ನನಗೂ ದಿನಾಲು ನಿಮ್ಮಿಂದ ಸೋಟಿ ತಿವಿಸಿಕೊಂಡು ಸಾಕಾಗಿ ಹೋಗಿದೆ. ಬಯ್ಯುವದೊಂದೇ ನಿಮ್ಮ ಹಿರಿಯತನವಾಗಿದೆ.

" ಹೌದವ್ವಾ ! ನನಗೆ ಬಯ್ಯುವದೊಂದೇ ಕೆಲಸವಾಗಿದೆ.

ಹೊರಗೆ ಕಾಲು ಸಪ್ಪಳವಾಗಿದ್ದರಿಂದ ಇವರ ಸಂಭಾಷಣೆ ಮೊಟಕಾಗಬೇಕಾಯಿತು.

ಆದರೆ ಆ ರಾತ್ರಿ ಕೆಲಸಮಾಡುತ್ತಿರುವಾಗ ಅವರ ಮನಸ್ಸಿನ ಉದ್ವೇಗ ನಾನಾರೀತಿಯಿಂದ ವ್ಯಕ್ತವಾಗತೊಡಗಿತು.

ಬಚ್ಚಲಮನೆಗೆ ಮುಸುರೆಯ ಭಾಂಡಿಗಳನ್ನು ಕಾಶೀಬಾಯಿ ಎತ್ತಿ ಇಡುವಾಗ ಅವೆಲ್ಲ ಠಳ್ಳನೇ ಬಿದ್ದು ಬಿಟ್ಟು ಭಯಂಕರ ಸಪ್ಪಳ ಮಾಡಿದವು.

ಅವಳು ಅವನ್ನೆಲ್ಲ ಸಾವರಿಸಿ ಇಡುವಾಗ ಗಟ್ಟಿಸಿಯೇ ಇಡುತ್ತಿದ್ದಳು.

ಆದಿನ ಗೌಡರ ಮನೆಯ ಭಾಂಡಿಗಳಿಗೆ ದುರವಸ್ಥೆಯೇ ಬಂದಿತು.

ಅಡಿಗೆಯ ಮನೆಯ ಸಾರಣೆ ಮಾಡುವಾಗ ಕಾಂತಾಬಾಯಿ ನೀರಿನ ಕೊಡವನ್ನೇ ಉರುಳಿಸಿದಳು. ಅಡಿಗೆಯ ಮನೆ ನೀರಮನೆಯೇ ಆಗಿ ಚಿಕ್ಕ ಪುಟ್ಟ ಪಾತೇರಿಗಳು ನೀರಯಾನಗಳಂತೆ ತೇಲಾಡತೊಡಗಿದವು.

ಭಾಂಡಿಯ ಸಪ್ಪಳದ ಬಗ್ಗೆ ಕಾಂತಾಬಾಯಿಯೂ ಕೇಳಲಿಲ್ಲ. ಅಡಿಗೆ ಮನೆಯ ಚಿಕ್ಕ ಹರಗೋಲುಗಳ ಬಗ್ಗೆ ಕಾಶೀಬಾಯಿಯೂ ಕೇಳಲಿಲ್ಲ.

ಒಬ್ಬರನ್ನೊಬ್ಬರು ದುರುಗುಟ್ಟಿ ಮಾತ್ರ ನೋಡುತ್ತಿದ್ದರು.

ಇದರ ಬಗ್ಗೆ ಗಂಡಸರ ಮುಂದೆ ದೂರು ಒಯ್ಯುವದು ಇಬ್ಬರಿಗೂ ಪ್ರಯೋಜನಕಾರಿಯಲ್ಲವೆಂದು ತಿಳಿದದ್ದರಿಂದ ಇಬ್ಬರೂ ತಮ್ಮ ಹೃದಯದಲ್ಲಿ ಈ ಕೆಚ್ಚನ್ನು ಬಚ್ಚಿಟ್ಟುಕೊಂಡರು.

ಗೌಡರಮನೆಯ ಅಡಿಗೆಯಮನೆಯಲ್ಲಿ ಬಿರುಕುಬಿಡಹತ್ತಿತು.

ಗಂಡಸರು ಈ ಬಿರುಕನ್ನು ಕಾಣದಾದರು. ಅವರ ಅಂಜಿಕೆಯಲ್ಲಿ ಈ ಬಿರುಕಿನ ಬಾಯಿಗೆ ಮಣ್ಣುಸವರಿದಂತಾದರೂ ಒಳಗಿನ ಬಿರುಕು ಬಿರಿಯುತ್ತಲೇ ಇತ್ತು.

ತಲೆಮಾರುಗಳಿಂದ ಒಂದೇ ಮನೆಯಾಗಿ ಹಳ್ಳಿಯಲ್ಲಿ ಮೆರೆದ ಈ ಗೌಡರ ಮನೆ ಈಗಲೂ ತುಂಬಿದ ಮನೆಯೇ ಆಗಿತ್ತು.

ಆಳು ಹೋಳುಗಳು ಕೆಲಸಮಾಡುತ್ತಿದ್ದರು. ಭೂಮಿತಾಯಿ ಸಮೃದ್ಧಿಯಾಗಿದ್ದಳು. ಗೌಡರ ಆಳಿಕೆ ಚನ್ನಾಗಿಯೇ ಸಾಗಿತ್ತು.

ತುಂಬಿದಮನೆ ತುಂಬಿದಂತೆಯೇ ಇತ್ತು.

ಆದರೆ ಮನೆಯ ಗೋಡೆಗಳಲ್ಲಿ ಅಪಸವ್ಯದ ಬಿರುಕು ತೋರ ತೊಡಗಿದವು.

ಅಣ್ಣತಮ್ಮಂದಿರ ಪ್ರೀತಿಯ ರಜ್ಜು ಗಾಢವಾಗಿದ್ದುದರಿಂದ ಈ ಬಿರುಕುಗಳು ಸಧ್ಯದ ಮಟ್ಟಿಗೆ ಅಪಾಯಕಾರಕವಾಗಿರಲಿಲ್ಲ.

ಆದರೆ ಎಷ್ಟೆಂದರೂ ಬಿರುಕುಗಳು. ಬಿರಿಯದಿರಬಹುದೆ ?

೪

ರಾಜಣ್ಣನಲ್ಲಿ ಈಗ ತಿಳುವಳಿಕೆ ಮೂಡತೊಡಗಿತ್ತು. ವಿಠ್ಠಲನ ಸ್ವಭಾವಕ್ಕೂ ಅವನ ಸ್ವಭಾವಕ್ಕೂ ಅಜಗಜಾಂತರವಿತ್ತು. ವಿಠ್ಠಲನು ದುಂದುಗಾರ; ರಾಜಣ್ಣ ಮಿತವ್ಯಯಿ. ವಿಠ್ಠಲ ಪ್ರದರ್ಶನಾಪ್ರಿಯನಾಗಿ ತನ್ನ ಸಂಪತ್ತನ್ನು ಕೊಚ್ಚಿಕೊಳ್ಳುವವನಾಗಿದ್ದರೆ ರಾಜಣ್ಣನು ಏಕಾಂತಪ್ರಿಯನಾಗಿ ಸದಾ ಸರಳಜೀವನವನ್ನು ಸಾಗಿಸುತ್ತಿದ್ದನು. ವಿಠ್ಠಲನ ಜೀವನದಲ್ಲಿ ಯಾವ ಶಿಸ್ತೂ ಇರಲಿಲ್ಲ. ಅವನು ರಾತ್ರಿ ನಿದ್ರೆಗೆಡುತ್ತಿದ್ದ. ಹಗಲು ಮಧ್ಯಾಹ್ನದ ಸುಮಾರಿಗೆ ಏಳುತ್ತಿದ್ದ. ಅವನಲ್ಲಿ ಯಾವ ತಾಳಮೇಳವೂ ಇರಲಿಲ್ಲ. ಇದರಿಂದಾಗಿ ಅವನ ಮುಖದಲ್ಲಿ ಕಾಂತಿಯ ಹೊಳಪು ಇರಲಿಲ್ಲ. ಆದರೆ ರಾಜಣ್ಣ ಅತ್ಯಂತ ವ್ಯವಸ್ಥಿತ ಜೀವನವನ್ನು ಸಾಗಿಸುತ್ತಿದ್ದನು. ಅವನು ಮುಂಜಾವು ನಾಲ್ಕು ಗಂಟೆಗೆ ಎದ್ದು ಅಭ್ಯಾಸಕ್ಕೆ ಕುಳಿತುಕೊಳ್ಳುತ್ತಿದ್ದನು. ಬೆಳಗು ಮುಂಜಾವು ತುಸು ವ್ಯಾಯಾಮಮಾಡಿ ಸ್ನಾನವನ್ನು ತೀರಿಸಿಕೊಂಡು ಒಂದು ಬಟ್ಟಲ ಹಾಲು ಕುಡಿದು ಮತ್ತೆ ಅಭ್ಯಾಸಕ್ಕೆ ಕೂಡ್ರುತಿದ್ದನು. ಸಾಲೆಯಲ್ಲಿ ಯಾವಾಗಲೂ ಇವನು ಮುಂದೆಯೇ ಕೂಡ್ರುತ್ತಿದ್ದನು. ಯಾರೊಡನೆಯೂ ಹೆಚ್ಚಾಗಿ ಮಾತಾಡುತ್ತಿರಲಿಲ್ಲ. ತಾನಾಯಿತು ತನ್ನ ಅಭ್ಯಾಸವಾಯಿತು. ಅವನಿಗೆ ಮಿತ್ರರ ಬಳಗವಿರಲಿಲ್ಲ. ಒಬ್ಬಿಬ್ಬರು ಮಾತ್ರ ಅವನ ವಿಶ್ವಾಸಕ್ಕೆ ಪಾತ್ರರಾಗಿದ್ದರು. ರಾಜಣ್ಣ ಎಂದಿಗೂ ರಾತ್ರೆ ನಿದ್ದೆಗೆಡುತ್ತಿರಲಿಲ್ಲ. ಒಂದು ಒಳ್ಳೆಯ ಸಿನೇಮಾ ಬಂದರೆ ಹಗಲಿನ ಆಟಕ್ಕೆ ಮಾತ್ರ ಹೋಗಿಬರುತ್ತಿದ್ದ.

ಸ್ವಭಾವದಲ್ಲಿ, ಜೀವನದ ಕ್ರಮದಲ್ಲಿ ನಡೆವಳಿಕೆಯಲ್ಲಿ ಈ ಅಣ್ಣ ತಮ್ಮಂದಿರು ಪೂರ್ವ ಪಶ್ಚಿಮವಾಗಿದ್ದರು. ಅವರಲ್ಲಿರುವ ಒಂದೇ ಒಂದು ಇಬ್ಬರಿಗೂ ಸಮಾನವಾದ ಸ್ವಭಾವವೆಂದರೆ ಅವರಿಬ್ಬರಲ್ಲಿಯೂ ಮನೆತನದ ಬಗೆಗೆ ಇರುವ ಪ್ರೀತಿ; ಅಣ್ಣಂದಿರ ಬಗ್ಗೆ ಇರುವ ಅಭಿಮಾನ.

ಇಬ್ಬರೂ ಅಣ್ಣಂದಿರನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದರು. ಮನೆತನದ ಹಿರಿಯರೆಂಬ ಗೌರವದಲ್ಲಿ ಅತ್ಯಂತ ಪೂಜ್ಯವಾಗಿ ನೋಡುತ್ತಿದ್ದರು.

ಎಸ್.ಎಸ್.ಸಿ. ಪರೀಕ್ಷೆಯಲ್ಲಿ ಮೂರು ಸಾರೆ ಲಾಗಹಾಕಿದ ವಿಠ್ಠಲನು

ಈಗ ಸದ್ಗ್ರಹಸ್ತನಂತೆ ವ್ಯವಹರಿಸುತ್ತಿದ್ದನು. ಚುನಾವಣೆ ಸುದ್ದಿ, ಜಗತ್ತಿನ ಆಟಗಾರರ ಸುದ್ದಿ, ಉಮ್ರಿಗಾರ, ಮೊದಲಾದ ಕ್ರಿಕೆಟವಟುಗಳ ಸುದ್ದಿ, ಸಿನೇಮಾ ತಾರೆಯರ ಪಾತ್ರ ವಿಮರ್ಶೆ, ಊರಲ್ಲಿಯ ಸುಂದರ ಯುವತಿಯರ ಬಗ್ಗೆ ನಗೆಚಾಟಿಕೆ, ಪ್ರಜಾಪ್ರಭುತ್ವ, ಕಾಂಗ್ರೆಸ್ ನಾಯಕರು, ಮೊದಲಾದವು ಗಳು ಹರಟೆಯ ವಸ್ತುಗಳಾಗಿ ಬಿಡಹತ್ತಿದವು. ಅವನ ಜತೆಗಾರರು ಕೂಡ ಉಂಡಾಡಿಗಳೇ ಆಗಿದ್ದರು.

ಊರಲ್ಲಿಯ ಹಾಟೆಲ್ಲುಗಳಲ್ಲಿಯ ಅಪರೂಪವಾದ ಜೀನಸುಗಳ ಬಗ್ಗೆ ಇವರಿಗೆ ತುಂಬಾ ಪರಿಚಯವಿರುತ್ತಿತ್ತು. ಆದಿತ್ಯವಾರ ಕೃಷ್ಣಪ್ಪನ ದೋಸೆ, ಸೋಮವಾರ ಬಾಂಬೆ ರೆಸ್ಟೋರಂಟಿನ ತುಪ್ಪದ ಭಜಿ, ಮಂಗಳವಾರ ಬಸಪ್ಪನ ರೊಟ್ಟಿ ಇಡೀ ಬದನೀಕಾಯಿಯ ಪಲ್ಲೆ, ಬುಧವಾರ ರಾಮಸ್ವಾಮಿ ಆಯ್ಯರ್‌ನ ಹಾಟೇಲದಲ್ಲಿ ಇಡ್ಲಿ ಹಾಗೂ ವಡೆ, ಗುರುವಾರ ಧಾರವಾಡ ರೆಸ್ಟೋರಂಟಿನ ಟೋಸ್ಟ ಹಾಗೂ ಬೆಣ್ಣೆ, ಗುರುವಾರ 'ಶ್ರೀನಿವಾಸಾ ಸ್ವರ್ಗ ನಿವಾಸ'ದ ಮಸಾಲೆ ಉಪ್ಪಿಟ್ಟು, ಶುಕ್ರವಾರದ ದಿನ ಡ್ಯೂ ಆರ್ಟ್ ಡಿಸೋಜಾನ ಇಂಪೀರಿಯಲ್ ಕೆಫೆಯಲ್ಲಿ ತತ್ತಿಯ ಆಮ್ಲೆಟ್ ಹಾಗೂ ಕಟ್ಲೆಟ್, ಶನಿವಾರ ದಿನ ಮಾಂಸಾಹಾರ, ಬಿರ್ಯಾನಿ, ಮೀನ ಮೊದಲಾದವುಗಳು ಅದೇ ಅಂಗಡಿಯಲ್ಲಿ.

ಹೀಗೆ ಕ್ರಮಬದ್ಧವಾದ ಕಾರ್ಯಕ್ರಮವನ್ನು ಈ ತಂಡದವರು ಸಾಗಿಸುತ್ತಿದ್ದರು. ಇದರ ವೆಚ್ಚದ ಭಾರವೆಲ್ಲಾ ವಿಠ್ಠಲನ ಕಡೆಗೆಯೇ ಎಂದು ಹೇಳಬೇಕಾಗಿಲ್ಲ.

ಈ ಗೆಳೆಯರು ಅವನಿಗೆ 'ರಾವಸಾಹೇಬ' ಎಂದು ಕರೆಯುತ್ತಿದ್ದರು. ಇದರಿಂದ ಅವನು ಅತ್ಯಂತ ಪ್ರೀತನಾಗುತ್ತಿದ್ದನು.

ಗೆಳೆಯರಿಗೆ ತಿನ್ನಿಸುವದರಲ್ಲಿ ವಿಠ್ಠಲನಿಗೆ ಅತ್ಯಂತ ಹರುಷವಾಗುತ್ತಿತ್ತು.

ಈ ತಂಡುಲಧ್ವಂಸಿಗಳ ಗೊಂದಲದಲ್ಲಿ ರಾಜಣ್ಣನ ಏಕಾಂತಕ್ಕೆ ಧಕ್ಕೆ ತಗುಲಹತ್ತಿತು. ಅವನ ಅಭ್ಯಾಸ ಸಾಗದಾಯಿತು.

ವಿಠ್ಠಲನು ಪಟ್ಟಣದಲ್ಲಿ ಏತಕ್ಕಾಗಿ ಇರುವನೆಂಬುದೂ ಅವನಿಗೆ ತಿಳಿಯದಾಯಿತು.

ಈ ಗೆಳೆಯರು ಅವನಿಗೆ ತಲೆಬೇಸರವನ್ನು ಕೊಡತೊಡಗಿದರು. ಇವರ ತಾಳದಲ್ಲಿ ತಾಳತಪ್ಪಿ ಕುಣಿಯುತ್ತಿರುವ ಅಣ್ಣನನ್ನು ಎಚ್ಚರಿಸುವದು

ತನ್ನ ಕರ್ತವ್ಯವೆಂದು ರಾಜಣ್ಣ ತಿಳಿದುಕೊಂಡು ಹಾಗೆ ಮಾಡಲು ನಿಶ್ಚಯಿಸಿದ. ಆದರೆ ವಿಠ್ಠಲನನ್ನು ಒಬ್ಬಂಟಿಗನಾಗಿ ಭೆಟ್ಟಿಯಾಗುವುದು ಅಷ್ಟು ಸುಲಭದ ಕೆಲಸವಾಗಿರಲಿಲ್ಲ.

ಅದಾವ ಕಾರಣದಿಂದಲೋ ಆ ದಿನ ವಿಠ್ಠಲನು ಕೋಣೆಯನ್ನು ಬಿಟ್ಟು ಹೊರಬೀಳಲೇ ಇಲ್ಲ. ಅವನ ಸಾರಥಿಗಳು ಕೂಡ ಆ ದಿನ ಈ ಕೋಣೆಯತ್ತ ಸುಳಿಯಲೇ ಇಲ್ಲ.

ರಾಜಣ್ಣನಿಗೆ ಇದು ಅಚ್ಚರಿಯ ಮಾತಾಯಿತು.

" ಇದೇನು ಅಣ್ಣಾ ! ಈ ದಿನವೇ ಬೇರೆಯಾಗಿದೆಯಲ್ಲ !

" ಅಂದರೇನೋ ರಾಜೂ !

" ನಿನ್ನ 'ಭಟ್ಟಂಗಿ'ಗಳು ಮಾಯವಾಗಿಬಿಟ್ಟಿದ್ದಾರಲ್ಲ.

" ಈ ಚಕ್ರವರ್ತಿಯೇ ಅದಕ್ಕೆ ಕಾರಣವಾಗಿದ್ದಾನೆ.

" ಅವರಿಗೆ ಇನ್ನುಮೇಲೆ ಈ ಕೋಣೆಗೆ ಬರಬೇಡವೆಂದು ಹೇಳಿದಿಯಾ?

" ಒಂದೆರಡು ತಿಂಗಳು ಯಾರೂ ಬರುವಂತಿಲ್ಲ.

" ಕಾರಣ ?

" ನೀನು ಚಿಕ್ಕಹುಡುಗ, ಇದನ್ನೆಲ್ಲಾ ಕೇಳಬಾರದು.

" ಹೇಳು ಅಣ್ಣಾ ! ಇದು ಸಂತೋಷದ ಸುದ್ದಿಯಾಗಿದೆ.

" ಪಾಪ ! ಜೂಜಾಟದಲ್ಲಿ ಸಿಕ್ಕುಬಿದ್ದು ಎರಡೆರಡು ತಿಂಗಳು ಅವರು ಸರಕಾರದ ಅತಿಥಿಗಳಾಗಿಬಿಟ್ಟಿದ್ದಾರೆ. ಇದು ಸಂತೋಷದ ವಿಷಯವೆ ?

" ನಿನ್ನ ಗೆಳೆಯರು ಜೈಲಿಗೆ ಹೋದರೆ ?

" ಹಿರಿಯರ ಹೆಸರು ಹೇಳಿ ನಾನು ಪಾರಾದೆ ರಾಜೂ ! ನಾನು ಭಾವೂರಾಯರ ಮಗನೆಂದು ಕೇಳಿದ ಕೂಡಲೇ ಪೋಲೀಸ ಸಾಹೇಬರು ಪಕ್ಕಕ್ಕೆ ಕರೆದು ಹೇಳಿದರು.

' ಎಂಥವರ ಹೊಟ್ಟೆಯಲ್ಲಿ ಎಂಥವನು ಹುಟ್ಟಿದೆಯೋ ! ಇಲ್ಲಿಂದ ಪಾರಾಗು. ಇವರಿಗೆಲ್ಲ ಆದಂತೆ ನಿನಗೂ ಆಗಬಾರದಷ್ಟೆ ' ಎಂದು ಕಿವಿ ಹಿಂಡಿದರು.

" ಅಣ್ಣಾ ! ನೀನೂ ಜೂಜಾಟ ಆಡುತ್ತಿದ್ದೆಯಾ ?

" ಆದರೆ ನಾನು ಎಂದೂ ಸೋತಿಲ್ಲ ತಮ್ಮ !

" ನಿನ್ನ ದುಶ್ಚಟದ ಸಮರ್ಥನೆ ವಿಚಿತ್ರವಾಗಿದೆ. ನೀನು ಸೋಲಲಿ, ಗೆಲಿಯಲಿ ಜೂಜಾಟ ಆಡುವದು ಸುಳ್ಳಲ್ಲವಷ್ಟೆ.

“ ಜೀವನವೇ ಒಂದು ಜೂಜಾಟವಾಗಿದೆ ರಾಜೂ !

“ ಈ ಮಾತು ನನಗೆ ತಿಳಿಯುವದಿಲ್ಲ ಅಣ್ಣಾ ! ಆದರೆ ಇದು ಒಳ್ಳೆಯ ನಡತೆಯಲ್ಲವೆಂದು ಮಾತ್ರ ನಾನು ಹೇಳಬಲ್ಲೆ. ನಾವು ಇಲ್ಲಿ ಅಭ್ಯಾಸ ಮಾಡುತ್ತಿರುವೆವೆಂದು ಹಣ ತರಿಸಿಕೊಂಡು ಆ ಹಣವನ್ನು ಇಂತಹ ಹೇಯ ಕೆಲಸಗಳಲ್ಲಿ ತೊಡಗಿಸುವದು ವಂಚಕತನವೆಂದೇ ನನ್ನ ಅಭಿಪ್ರಾಯ.

“ ಇದರಿಂದ ನಮ್ಮ ಸಂಪತ್ತಿಗೇನು ಕೊರತೆಯಾಗುವದಿಲ್ಲ ಬಿಡು.

“ ಎಂತಹ ಮಾತನ್ನು ಆಡುತ್ತೀ ಅಣ್ಣಾ ! ಇಲ್ಲಿ ಸಂಪತ್ತಿನ ಪ್ರಶ್ನೆ ಮುಖ್ಯವಾದುದಲ್ಲ. ನಡತೆಯ ಪ್ರಶ್ನೆ ಭೀಕರವಾಗಿದೆ. ನಮ್ಮ ಮನೆತನದಲ್ಲಿ ಒಬ್ಬನು ಹೆಡ್ಡಾಟವಾಡುತ್ತಾನೆಂದು ಅಪಕೀರ್ತಿ ಗಳಿಸಿಕೊಳ್ಳುವದು ಅವ ಮಾನಾಸ್ಪದವಾಗಿದೆ. ಇದನ್ನು ಕೇಳಿ ಬಾಳಣ್ಣನು ಎದೆಯೊಡೆದುಕೊಳ್ಳುವನು. ಭೀಮಣ್ಣನ ವ್ಯಸನ ಹತ್ತುಪಟ್ಟಾಗುವದು. ಇದನ್ನು ನೀನು ವಿಚಾರಿಸ ಬೇಕಾಗಿತ್ತು.

“ ಇದನ್ನೆಲ್ಲ ನೀನು ತಲೆಯಲ್ಲಿ ಹಾಕಿಕೊಳ್ಳಬೇಡ ಸುಮ್ಮನಿರು. ಕಲಿಯುವ ಹುಡುಗರು ಹೀಗೆ ವಿಚಾರಿಸಿ ತಲೆ ಹಾಳುಮಾಡಿಕೊಳ್ಳಬಾರದು. ನೀನಾಯಿತು ನಿನ್ನ ಅಭ್ಯಾಸವಾಯಿತು................

“ ಆದರೆ ಅಣ್ಣಾ !

“ ಮಾತು ಬೆಳಿಸಬೇಡ ರಾಜೂ !

“ ಒಂದು ಮಾತನ್ನು ನಾನು ಕೇಳಲೇಬೇಕಾಗಿದೆ ಅಣ್ಣಾ !

“ ಯಾವ ಮಾತು ಕೇಳು.

“ ನೀನು ಅಭ್ಯಾಸವನ್ನಂತೂ ಮಾಡುವದಿಲ್ಲ. ಇಲ್ಲಿ ಏತಕ್ಕಿರಬೇಕು. ಹಳ್ಳಿಯಲ್ಲಿದ್ದುಕೊಂಡು ಅಣ್ಣಂದಿರ ಕೆಲಸದಲ್ಲಿ ನೆರವಾದರೆ ಆಗದೆ ?

ಈ ಅನಿರೀಕ್ಷಿತವಾದ ಮಾತನ್ನು ಕೇಳಿ ವಿಠ್ಠಲನು ಅವಾಕ್ಕಾದನು. ಅವನೊಮ್ಮೆ ರಾಜಣ್ಣನನ್ನು ನೇರವಾಗಿ ನೋಡಿ ಕೇಳಿದನು.

“ ನನ್ನಿಂದ ನಿನಗೆ ಬೇಸರವಾಗಿದೆಯೇನು ?

“ ದಯವಿಟ್ಟು ಸಿಟ್ಟಿಗೇಳಬೇಡ ಅಣ್ಣಾ ! ನೀನು ಇಲ್ಲಿ ಹೀಗೆ ವ್ಯರ್ಥ ಕಾಲ ಕಳೆಯುವದು ನನ್ನ ಮನಸ್ಸಿಗೆ ಬರುವದಿಲ್ಲ. ಕೆಲಸವಿಲ್ಲದವನ ತಲೆ ಯಲ್ಲಿ ಭೂತಪ್ರವೇಶವಾಗುತ್ತಿದೆಯಂತೆ. ನಿನ್ನ ಜೂಜಾಟವೇ ಇದರ ಸಾಕ್ಷಿ. ನನಗೆ ಬಹಳ ವ್ಯಸನವಾಗಿದೆ ಅಣ್ಣಾ ! ನೀನು ಸಾಧ್ಯವಾದಷ್ಟು ಬೇಗನೆ ಇಲ್ಲಿಂದ ತಳ ಕಿತ್ತಬೇಕು.

" ನಾನು ಬೇರೆ ಕೋಣೆಯಲ್ಲಿರಬೇಕೆಂದು ನಿನ್ನ ಅಭಿಪ್ರಾಯವಿದ್ದರೆ ಹಾಗೆ ಸ್ಪಷ್ಟವಾಗಿ ಹೇಳಲ್ಲ.

" ನೀನು ಈ ಊರಲ್ಲಿಯೇ ಇರಬೇಕೆಂದು ನನ್ನ ಅಭಿಪ್ರಾಯವಾಗಿದೆ.

" ನಿನ್ನ ಅಭಿಪ್ರಾಯವನ್ನು ಕೇಳಿದಾಗ ಹೇಳುವಿಯಂತೆ. ಇಲ್ಲದ ಅಧಿಕಪ್ರಸಂಗ ಮಾಡಬೇಡ.

" ಅಧಿಕಪ್ರಸಂಗ ಮಾಡಿದವರು ಯಾರು ?

" ಉದ್ಧಟ !

" ಅಣ್ಣಾ !

" ಬಾಯಿಮುಚ್ಚು !

" ನೀನು ಸಿಟ್ಟಿಗೆದ್ದು ನನ್ನನ್ನು ಥಳಿಸಿದರೂ ಸರಿ. ನನ್ನಿಂದ ಇದನ್ನು ನೋಡಲಾಗುವದಿಲ್ಲ. ನಿನ್ನ ಗೆಳೆಯರು ಅನಾಚಾರಿಗಳಾಗಿದ್ದಾರೆ. ಬದ ಮಾಷರಾಗಿದ್ದಾರೆ. ನಾನು ಎಲ್ಲವನ್ನೂ ಕೇಳಿದ್ದೇನೆ ಅಣ್ಣಾ !

" ಏನು ಕೇಳಿದ್ದೀಯೋ ಮೂರ್ಖಾ !

" ನೀವು ಮಾಂಸ ತಿನ್ನುವದು ಸುಳ್ಳೇನು ? ಒಮ್ಮೊಮ್ಮೆ ಹುಬ್ಬಳ್ಳಿಗೆ ಹೋಗಿ ಗುಟ್ಟಾಗಿ ಕ್ರಿಶ್ಚನ್ ಗೆಳೆಯರ ಮನೆಯಲ್ಲಿ ಅಪೇಯಪಾನ ಮಾಡಿ ಬರುವದನ್ನು ಅಲ್ಲಗಳೆಯುವೆ ಏನು? ಈಗ ಮೂರು ತಿಂಗಳ ಹಿಂದೆ ಆಚಾಳದ ಹಿಂದಿನ ಓಣಿಯಲ್ಲಿ ನೀವು ಏನುಮಾಡಿದಿರಿ ? ಎಲ್ಲರಿಗೂ ಪಾದರಕ್ಷೆಗಳ ಪೂಜೆ ಏಕಾಯಿತು ಹೇಳುವಿಯಾ ? ಇವೆಲ್ಲ ಗೌರವದ ಮಾತುಗಳೇನು ? ಉಳಿದವರು ಹಾಳಾಗಿಹೋಗಲಿ. ನಮ್ಮದು ಗೌಡರ ಮನೆತನ. ಗೌಡರ ಮಗನು ಅಭ್ಯಾಸಕ್ಕೆಂದು ಬಂದು ಕಾಮನಕಟ್ಟಿಯನ್ನು ಹತ್ತಿ ಸೂಳೆಗಾರಿಕೆಯ ಕುಂಡವಲ್ಲಿ ಬಿದ್ದು ಹೊರಳಾಡಬೇಕೇನು ? ಅಣ್ಣಾ ! ಇದೆಲ್ಲ ಏನು............

ವಿಠ್ಠಲನು ಫಳೀರೆಂದು ರಾಜೂನ ಕಪಾಳಿಗೊಂದು ಪೆಟ್ಟುಕೊಟ್ಟು ಗದ್ದರಿಸಿದನು,

" ಇನ್ನೊಮ್ಮೆ ಹೀಗೆಲ್ಲಾ ಮಾತಾಡಿದರೆ ನಿನ್ನ ಪ್ರಾಣವನ್ನೇ ತೆಗೆದು ಕೊಂಡೇನು ಎಚ್ಚರಿಕೆ ! ಚಿಕ್ಕ ಹುಡುಗನೆಂದು ಆಜ್ಞೆಮಾಡಿದರೆ ನೀನು ಹೀಗೆ ಬಗುಳುತ್ತೀಯಾ ? ಸಲಿಗೆಯ ನಾಯಿ ತಲೆಗೇರಿತಂತೆ ! ನನಗೆ ಬುದ್ಧಿ ಹೇಳಲು ಬರುತ್ತಾನೆ ಲಫಂಗ !

ರಾಜೂನ ಕೆನ್ನೆ ಉರಿಯತೊಡಗಿತು. ಅಯ್ಯೋ ! ಅಪ್ಪಾ ! ಎಂದು ಅವನು ಚಿಟ್ಟನೇ ಚೀರಿ, ಅಳಹತ್ತಿದನು. ಅವನಿಗೆ ಎಲ್ಲಿಲ್ಲದ ದುಃಖ ಮರು

ಕೊಳಿಸಿತು. ತಂದೆ ಸತ್ತಬಳಿಕ ಭಾರೀ ಪ್ರಮಾಣದಲ್ಲಿ ಅತ್ತದ್ದು ಇದೇ ದಿನವಾಗಿತ್ತು.

" ನೀನು ನನ್ನನ್ನು ಕೊಲ್ಲುವಿಯಾದರೆ ಕೊಂದುಬಿಡು. ಆದರೆ ನಾನು ಈ ಮಾತನ್ನು ಬಚ್ಚಿಡಲಾರೆ. ಇದು ಅನಾಚಾರ! ಇದು ಭ್ರಷ್ಟಾಚಾರ! ಇದು ವಂಚಕತನ! ಹಿರಿಯರಿಗೆ ದ್ರೋಹ! ಸರಸ್ವತಿಗೆ ಅಪಚಾರ........

ವಿಠ್ಠಲನು ರಾಜೂನ ಇನ್ನೊಂದು ಕೆನ್ನೆಗೆ ಬಲವಾಗಿ ಇನ್ನೊಂದು ಏಟುಕೊಟ್ಟು ಮತ್ತೊಂದನ್ನು ಮುಖಕ್ಕೆ ಕೊಟ್ಟನು. ಆ ಪೆಟ್ಟು ತುಟಿಗೆ ತಗಲಿದ್ದರಿಂದ ತುಟಿ ಹರಿದು ನೆತ್ತರು ಚಿಮ್ಮಿತು.

" ಅಣ್ಣಾ....ಅಯ್ಯೋ !....ನನ್ನನ್ನು ಕೊಲ್ಲುತ್ತೀಯೇನು ?

" ನಿನ್ನ ಉದ್ದ ನಾಲಿಗೆಯನ್ನು ಸೀಳಿಬಿಡುತ್ತೇನೆ.

ರಾಜೂ ಹೆದರಿ ನಡುಗತೊಡಗಿದನು. ಅವನ ಸರ್ವಾಂಗ ತತ್ತರಿಸ ತೊಡಗಿತು. ಪ್ರಾಣಭಯ ಅವನನ್ನು ಆವರಿಸತೊಡಗಿತು.

" ನನ್ನಿಂದ ತಪ್ಪಾಯಿತು ಅಣ್ಣ ! ನಿನ್ನ ಕಾಲು ಬೀಳುತ್ತೇನೆ ! ನನ್ನನ್ನು ಹೊಡೆಯಬೇಡ, ಅಪ್ಪನನ್ನು ಸ್ಮರಿಸಿ ಹೇಳುತ್ತೇನೆ ಅಣ್ಣ ! ನಾನು ನಿನ್ನಮೇಲಿನ ಕ್ರೋಧದಿಂದ ಹೀಗನ್ನಲಿಲ್ಲ. ನನ್ನ ಅಣ್ಣನಾದ ನೀನು ಭಾವೂರಾಯರ ಮಗನೂ ಅಹುದು. ಅವರ ಧವಳಕೀರ್ತಿಗೆ...ಅಯ್ಯೊ !.... ಕೈ ಎತ್ತಬೇಡ ಅಣ್ಣ ! ನನ್ನನ್ನು ನಾಯಹೊಡೆಯಬೇಡ........

ರಾಜೂ ಗದಗುಟ್ಟಿ ನಡುಗುತ್ತ ಹಾಸಿಗೆಯಮೇಲೆ ಹೋಗಿ ಕುಳಿತನು. ವಿಠ್ಠಲನ ಕಣ್ಣು ಭೀಕರವಾಗಿದ್ದವು. ಅವನಿಗೆ ಅಪಮಾನವಾಗಿತ್ತು. ಅದಕ್ಕಾಗಿ ಪ್ರಚಂಡ ಕೋಪಾಗ್ನಿ ಕಳಕಳಿಸಿತು. ಆ ಕೂಡಲೇ ಅವನು ಧಡಾರೆಂದು ಬಾಗಿಲು ಹಾಕಿಕೊಂಡು ಹೊರಗೆ ಹೋಗಿಬಿಟ್ಟನು.

ತಪ್ಪುಮಾಡುವದು ಬೇಕು. ಆ ತಪ್ಪನ್ನು ಇನ್ನೊಬ್ಬರು ಆಡುವದು ಮಾತ್ರ ಬೇಡ ಎನ್ನುವ ಮನಸ್ಥಿತಿಯಲ್ಲಿ ಗಾಸಿಯಾದ ವಿಠ್ಠಲನು ಆಗ ಹೋದವನು ತಿರುಗಿ ಮಧ್ಯಾಹ್ನ ನಾಲ್ಕು ಗಂಟೆಯ ಸುಮಾರಿಗೆ ಕೋಣೆಯ ಕಡೆಗೆ ಬಂದನು.

ಅವನ ಮುಖ ಬಿದ್ದುಹೋಗಿತ್ತು. ಏನೂ ತಿನ್ನದೆ ಉಪವಾಸವಿದ್ದ ಅವಲಕ್ಷಣಕಳೆ ಆ ಮುಖವನ್ನು ಮೆತ್ತಿತ್ತು. ಅವನ ಹೃದಯದಲ್ಲಿ ಪಶ್ಚಾತ್ತಾಪ ಮೂಡಿತ್ತು. ತನ್ನಿಂದ ಪರಮೇಶಿ ತಮ್ಮನಿಗೆ ಅಪಚಾರವಾಯಿತೆಂಬ ಭಾವ, ಅವನ ಅಂತಃಕರಣವನ್ನು ಸುಡುತ್ತಿತ್ತು.

ಅವನ ಕಣ್ಣಂಚಿನಲ್ಲಿ ನೀರಾಡುತ್ತಿತ್ತು.

ವಿಠ್ಠಲನು ಕಳ್ಳನಂತೆ ಮೃದುವಾಗಿ ಕೋಣೆಯ ಬಾಗಿಲವನ್ನು ದೂಡಿ ಒಳಗೆ ಬಂದನು. ರಾಜೂ ಮಲಗಿದ್ದಲ್ಲಿಯೇ ಮಲಗಿದ್ದನು. ಅವನ ದೇಹದ ಮೇಲೆ ಹೊದಿಕೆ ಇರಲಿಲ್ಲ.

ವಿಠ್ಠಲನು ನಾಲ್ಕು ಹೆಜ್ಜೆ ಮುನ್ನಡೆದುಬಂದನು. ಕಿಟಕಿಯ ಮಾರ್ಗವಾಗಿ ಬಂದು ರಾಜಣ್ಣನ ಮುಖದಮೇಲೆ ಬಿದ್ದ ಸೂರ್ಯರಸ್ಮಿಗಳ ಬೆಳಕಿನಲ್ಲಿ ಅವನು ತಮ್ಮನ ಮುಖವನ್ನು ನೋಡಿದನು.

ಎರಡೂ ಗಲ್ಲಗಳ ಮೇಲೆ ಬಾಸುಂಡೆಗಳು ಢಾಳವಾಗಿ ಮೂಡಿದ್ದವು. ತುಟಿಯೊಡೆದು ಚಿಮ್ಮಿದ ನೆತ್ತರು ಅಲ್ಲಿಯೇ ಕಟಕಾಗಿ ಒಣಗಿ ನಿಂತಿತ್ತು.

ರಾಜಣ್ಣ ಈ ವರೆಗೂ ಎದ್ದಿಲ್ಲವೆಂಬ ಪ್ರಜ್ಞೆ ಬಂದಿತು ವಿಠ್ಠಲನಿಗೆ. ಅವನ ಒಡಲಿನಲ್ಲಿ ಚೂರಿಯಿಂದ ಅಲುಗಾಡಿಸಿದಂತಾಯಿತು. ಸೋದರ ಪ್ರೀತಿ ಉಕ್ಕಿಬಂದು ಅವನ ಕಣ್ಣಾಲಿಗಳು ಪಳಕ್ಕನೆ ಚಿಮ್ಮಿದವು.

'ರಾಜೂ !' ಎಂದು ಹತ್ತಿರ ಹೋಗಿ ಕುಳಿತು ಕರೆದ.

ರಾಜೂನಿಗೆ ಎಚ್ಚರವಾಗಲಿಲ್ಲ.

'ರಾಜಣ್ಣ !" ಏಳು ತಮ್ಮ !

ರಾಜಣ್ಣ ಪಳಕ್ಕನೆ ಕಣ್ಣುಬಿಟ್ಟು ಎದುರಿಗೆ ಕುಳಿತ ಅಣ್ಣನನ್ನು ನೋಡಿ ಮತ್ತೆ ಕಣ್ಣುಮುಚ್ಚಿಕೊಂಡು ಚೀರಿದನು.

'ನನ್ನನ್ನು ಹೊಡೆಯಬೇಡ ಅಣ್ಣಾ !'

"ನಿನ್ನನ್ನು ಹೊಡೆದ ನನ್ನ ಕೈಗಳಿಗೆ ಮುಳ್ಳುಮುರಿಯಲಿ ತಮ್ಮಾ! ನನ್ನಿಂದ ತಪ್ಪಾಯಿತು. ವಿಷವೇಳೆಯಲ್ಲಿ ಹೀಗೆಲ್ಲ ಆಯಿತು. ನನ್ನನ್ನು ಕ್ಷಮಿಸು ರಾಜಣ್ಣ !

ವಿಠ್ಠಲ, ರಾಜಣ್ಣ ತಲೆಗೂದಲಗಳನ್ನು ನೇವರಿಸುತ್ತ ಇಷ್ಟನ್ನು ಹೇಳಿದ. ಅವನ ಕಂಠ ಉಬ್ಬಿಬಂದದ್ದರಿಂದ ಮಾತುಗಳು ಕುಂಠಿತವಾದವು.

ರಾಜಣ್ಣ ಚಟ್ಟನೆ ಎದ್ದು ಕುಳಿತು ವಿಠ್ಠಲ ಪಾದಗಳ ಮೇಲೆ ಹಣೆಯಿಟ್ಟು ಬಿಕ್ಕಳಿಸಿದ. ಚಿಕ್ಕ ಮಗುವಿನ ಹಾಗೆ ಅಳಹತ್ತಿದ.

ವಿಠ್ಠಲ ಕಣ್ಣುಗಳು ಹರಿಯತೊಡಗಿದವು.

"ನನ್ನಿಂದ ತಪ್ಪಾಯಿತೆಂದು ಹೇಳಿದಮೇಲೆ ಮುಗಿಯಿತು ರಾಜೂ !

ರಾಜಣ್ಣ ಅಣ್ಣನ ಬಾಯಿಯಮೇಲೆ ಕೈಯಿಟ್ಟು ಗದ್ಗದಿತನಾಗಿ ಹೇಳಿದ.

" ನಿನಗೆ ನನ್ನ ಆಣೆಯಾಗಿದೆ ಅಣ್ಣ ! ಈ ಮಾತನ್ನು ಆಡಬೇಡ.

" ನಾನು ನಿನ್ನನ್ನು ಬಹಳವಾಗಿ ಹೊಡೆದೆ ತಮ್ಮ !

ಎಂದ ವಿಠ್ಠಲ ಗದ್ಗದಿತನಾಗಿದ್ದ.

ರಾಜೂ ಮುಖವೆತ್ತಿ ಅಣ್ಣನ ಮುಖ ನೋಡಿದ. ಆ ಮುಖದಲ್ಲಿ ಕಣ್ಣುಗಳು ಕಾಸಾರದ ಕಮಲಗಳಾಗಿದ್ದವು.

" ನೀನು ಅಳುತ್ತೀಯಾಕೆ ಅಣ್ಣ !

ರಾಜೂ ಅಣ್ಣನನ್ನು ಅಪ್ಪಿಕೊಂಡು ಕೇಳಿದ.

" ತಮ್ಮ ! ನಾನೆಲ್ಲಿ ಅಳುತ್ತೇನೋ !

" ಮತ್ತೆ ?

" ಮತ್ತೇನೂ ಇಲ್ಲ ಬಿಡು.

ಎನ್ನುತ್ತ ವಿಠ್ಠಲ ತುಂಬಿದ ತಂಬಿಗೆಯನ್ನು ತೆಗೆದುಕೊಂಡು ಬಂದು ಅದರಲ್ಲಿ ತನ್ನ ವಸ್ತ್ರವನ್ನು ಅದ್ದಿ ನೆತ್ತರು ಮೆತ್ತಿದ ತಮ್ಮನ ತುಟಿಗಳನ್ನು ತೊಳೆಯತೊಡಗಿದ.

" ಆಹಾ....ಹಾ....ಹಾ....ಅಯ್ಯಯ್ಯೊ !....

" ನಾನು ಪಾಪಿ ರಾಜೂ !........

ಆಮೇಲೆ ತೊಳೆಯುವಾಗ ಚುರುಕು ಎಂದರೂ ರಾಜೂ ಲಿಸ್ ಎನ್ನಲಿಲ್ಲ. ಇದರಿಂದ ಅಣ್ಣನಿಗೆ ವ್ಯಥೆಯಾಗುವದೆಂಬುದೇ ಅದರ ಒಳಗುಟ್ಟಾಗಿತ್ತು

ತೊಳೆಯುವದಾದಮೇಲೆ ವಿಠ್ಠಲ ತಮ್ಮನ ಮುಖವನ್ನೊಮ್ಮೆ ನೋಡಿದ ಬಾಸುಂಡೆಗಳು ಇನ್ನೂ ಎದ್ದು ಕಾಣುತ್ತಿದ್ದವು. ಅವನಿಗೆ ಮತ್ತೆ ದುಃಖವಾಯಿತು.

ಈ ದುಃಖವನ್ನು ತೋರಗೊಡದೆ

" ತಮ್ಮ ! ನೀನು ಬಹಳ ಹಸಿದಿದ್ದೀ ! ಮುಂಜಾವಿನಿಂದ ನೀನು ಹೊಟ್ಟೆಯಲ್ಲಿ ಏನನ್ನೂ........

" ಅಣ್ಣ ! ನೀನು ನಿಜವಾಗಿ ಹೇಳು. ನಿನ್ನ ಹೊಟ್ಟೆಯಲ್ಲಿ ಏನಾದರೂ ಅನ್ನ ಹೋಗಿದೆಯೇನು ?

" ಅಂದ ಹಾಗೆ........

ರಾಜಣ್ಣನು ಚಟ್ಟನೆ ಎದ್ದು ನಿಂತು ನೇರವಾಗಿ ಕಪಾಟಿನ ಬಾಗಿಲ ತೆಗೆದ. ಒಳಗಿನಿಂದ ನಾಲ್ಕು ಮಾವಿನ ಹಣ್ಣುಗಳನ್ನೂ, ಮುಂಜಾವು ತಂದಿಟ್ಟ ಬ್ರೆಡ್‌ಗಳನ್ನೂ 'ಪೊಲ್ಸನ್ ಬಟರ್'ದ ಡಬ್ಬಾವನ್ನೂ, ಚೂರಿ

ಯನ್ನೂ ಕಾಜಿನ ಹರಿವಾಣವನ್ನೂ ತೆಗೆದುಕೊಂಡು ಟೇಬಲ್ಲಿನ ಮೇಲಿಟ್ಟು ಅಣ್ಣನಿಗೆ ಕೇಳಿದ.

" ನಿನ್ನ ಕಪಾಟಿನಲ್ಲಿ ಚಟ್ನಿಯ ಪುಡಿಯಿದ್ದರೆ ತೆಗೆದುಕೊಂಡು ಬಾ ಅಣ್ಣ ! ನನಗೂ ಹಸಿವೆಯಾಗಿದೆ. ನಿನಗೂ ಹಸಿವೆಯಾಗಿದೆ. ಸಾಯಂಕಾಲ ಊಟವಾಗುವ ವರೆಗೆ ಇಷ್ಟನ್ನು ತಿಂದು ತಾಳಿಕೊಳ್ಳೋಣ.

ರಾಜೂನ ಮುಖದಲ್ಲಿ ನಗೆಯ ಸುಳಿ ತೇಲಿತು.

ನೀನು ತಿನ್ನು, ನೀನು ತಿನ್ನು ಎನ್ನುತ್ತ ಇಬ್ಬರೂ ಅಂತಃಕರಣದ ಸವಿಜಲದಲ್ಲಿ ಮಿಂದು ತಿಂದು ತೇಗಿದರು.

ಆ ರಾತ್ರಿ ಊಟವನ್ನು ಕೋಣೆಗೆ ತರಿಸಲು ರಾಜೂ ಹೇಳಿದ. ತನ್ನ ಗಲ್ಲಗಳ ಮೇಲೆ ಇನ್ನೂ ಢಾಳವಾಗಿ ಕಾಣುವ ಬಾಸುಂಡೆಗಳ ಇತಿಹಾಸವು ಗೆಳೆಯರಿಗೆ ಗೊತ್ತಾಗಬಾರದೆಂಬುದೇ ಇದರ ಮರ್ಮವಾಗಿತ್ತು.

ವಿಠ್ಠಲನಿಗೆ ಇದರ ಅರಿವಾಯಿತು.

" ನಿನ್ನ ಹೃದಯ ಬಂಗಾರದ್ದು ರಾಜೂ !

ಎಂದಾಗ ವಿಠ್ಠಲನ ಹೃದಯ ತುಂಬಿನಿಂತಿತು.

" ನಿನ್ನ ಹೃದಯ ?

" ಕಬ್ಬಿಣದ್ದು. ಅಲ್ಲದೇ ಅದಕ್ಕೆ ಉಕ್ಕಿನ ಲೇಪನವೂ ಆಗಿದೆ.

" ಇದು ತೀರಾ ಸುಳ್ಳು ಅಣ್ಣ ! ನಿನ್ನ ಬಂಗಾರದ ಹೃದಯಕ್ಕೆ ಕುಂದಣದ ಲೇಪನವಾಗಿದೆ.

ವಿಠ್ಠಲನು ತಮ್ಮನನ್ನು ಬರಸೆಳೆದುಕೊಂಡನು.

ಊಟವಾದಮೇಲೆ ವಿಠ್ಠಲನು ಮತ್ತೆ 'ಸ್ಟೋ' ಹಚ್ಚಿದನು.

" ಮತ್ತೇಕೆ ಇದು ಅಣ್ಣ !

" ನಿನ್ನ ಗಲ್ಲಗಳು ಇನ್ನೂ ಉಬ್ಬಿನಿಂತಿವೆ. ಅವಕ್ಕೆ ಶಾಖವನ್ನು ಕೊಡಬೇಕು.

" ನಿನಗೇನು ಹುಚ್ಚು ಹಿಡಿದಿದೆ ಏನು ? ನನ್ನ ಗಲ್ಲಗಳಿಗೆ ಏನೂ ಆಗಿಲ್ಲ.

ರಾಜೂ ಗಲ್ಲಗಳನ್ನು ತಿಕ್ಕಿಕೊಳ್ಳುತ್ತ ಹೇಳಿದನು.

" ನಾನು ಹೇಳಿದಂತೆ ಕೇಳಬೇಕು ರಾಜೂ !

" ಸುಮ್ಮನೆ ಗಲ್ಲಗಳನ್ನು ಕಾಶಿನೋ ಎಂದರೆ ಹೇಗೆ ತಾಳಿಕೊಳ್ಳುವದು ಅಣ್ಣ !

" ನನಗೆಲ್ಲ ತಿಳಿಯುತ್ತದೆ ಸುಮ್ಮನೆ ನಾನು ಹೇಳಿದಷ್ಟು ಕೇಳು.

ಅಡಿಗೆಯವನಿಂದ ತರಿಸಿದ ಅರಿಷಣ ಪುಡಿಯನ್ನು ಎಣ್ಣೆಯಲ್ಲಿ ಬೆರಸಿ ವಿಠ್ಠಲನು ತಮ್ಮನ ಗಲ್ಲಗಳಿಗೆ ತೊಡೆದನು. ಶಾಖವಾದಮೇಲೆ ಹಚ್ಚಿದ ಈ ಲೇಪನದಿಂದ ರಾಜೂವಿಗೆ ನಿಜವಾಗಿಯೂ ಹಾ ಎನ್ನಿಸಿತು.

ಇಬ್ಬರೂ ಪ್ರತ್ಯೇಕವಾದ ಹಾಸಿಗೆಗಳ ಮೇಲೆ ಸನಿಸನಿಯಕ್ಕೆ ಮಲಗಿದರು. ಅಣ್ಣನ ಆರೈಕೆಯ ನೆಮ್ಮದಿಯಲ್ಲಿ ರಾಜೂವಿಗೆ ಕೂಡಲೇ ನಿದ್ರೆ ಹತ್ತಿತು.

ವಿಠ್ಠಲನು ಮಾತ್ರ ಕಣ್ಣು ಪಿಳಕಿಸುತ್ತ ಹಾಸಿಗೆಯಮೇಲೆ ಬಿದ್ದುಕೊಂಡನು.

ಮಧ್ಯರಾತ್ರಿ ಮೀರಿಹೋದರೂ ಅವನ ಕಣ್ಣಿಗೆ ಕಣ್ಣು ಹತ್ತಲಿಲ್ಲ. ಆ ದಿನದ ಘಟನೆ ಅವನ ಕರುಳನ್ನು ಕೊರೆಯತೊಡಗಿದ್ದು ಸ್ಪಷ್ಟವಾಗಿತ್ತು.

ಆ ದಿನ ಮುಂಜಾವು ತಮ್ಮನು ಆಡಿದ ಮಾತುಗಳು ಸುತ್ತಿಗೆಯ ಪೆಟ್ಟಿನಂತೆ ಅವನ ಹೃದಯದಮೇಲೆ ಬಲವಾಗಿ ಬೀಳತೊಡಗಿದವು. ಆ ಮಾತುಗಳನ್ನೆಲ್ಲ ಅವನು ವಿಚಾರಿಸತೊಡಗಿದನು. ಆ ಕೂಡಲೇ ಅವನಿಗೆ ತಂದೆಯ ಸ್ಮರಣೆಯಾಯಿತು. ತಂದೆಯ ಅಚ್ಚಿಯ ಕೂಸಾದ ರಾಜೂನನ್ನು ತಾನು ದನದಹಾಗೆ ಬಡಿದದ್ದು ಕರುಳುಗಳನ್ನು ಕಿವಿಚತೊಡಗಿತು. ರಾಜೂ ಆಡಿದ ಮಾತುಗಳಲ್ಲಿ ಅಸತ್ಯವೇನೂ ಇರಲಿಲ್ಲವೆಂಬ ಭಾವನೆ ಬಂದಾಗ ಅವನಿಗೆ ವ್ಯಸನವಾಯಿತು.

ಅವನು ಚಟ್ಟನೆ ಎದ್ದು ಕುಳಿತು ರಾಜೂನನ್ನು ನೋಡಿದನು. ಆ ಮುಗ್ಧ ಮುಖ ಪ್ರಶಾಂತವಾಗಿತ್ತು.

ವಿಠ್ಠಲ ಮತ್ತೆ ಹಾಸಿಗೆಯಮೇಲೆ ಹೊರಳಿದನು. ಹೊರಳಾಡುವುದೇ ಅವನ ಹಣೆಯಬರಹವಾಯಿತು.

ಅದೇ ಸುಮಾರಿಗೆ ರಾಜೂ ಒಮ್ಮೆ ನರಳಿದನು. ' ಅಪ್ಪಾ........' ಎಂದು ಕನವರಿಸಿದನು.

ವಿಠ್ಠಲನು ಚಟ್ಟನೆ ಎದ್ದು ತಮ್ಮನ ಮೈಮೇಲೆ ಕೈಯಾಡಿಸುತ್ತ

" ನಿನಗೆ ಇನ್ನೂ ನೋವಾಗುತ್ತಿದೆಯೇ ತಮ್ಮ !

ಎಂದು ಕೇಳಿದನು.

ರಾಜೂವಿಗೆ ಎಚ್ಚರವಾಗಿ,

" ನನಗೆಲ್ಲಿ ನೋವು ಅಣ್ಣಾ ! ನೀನು ಇನ್ನೂ ಮಲಗಿಲ್ಲವೆ ?

ಎಂದನು.

" ನೀನು ನೆರಳಿದಿ ರಾಜೂ !

" ನಾನು ನೆರಳಿದೆನೆ ? ನಾನು ನೆರಳಿಲ್ಲ ಅಣ್ಣಾ. ನಿನಗೆ ಏನೋ ಭ್ರಮೆಯಾಗಿರಬೇಕು.

" ಹಾಗಾದರೆ ಮಲಗು.

" ಅಣ್ಣಾ !

" ಏನು ?

" ನೀನು ನನ್ನ ಹಾಸಿಗೆಯಲ್ಲಿಯೇ ಮಲಗು.

" ಹೆದರಿಕೆಯಾಗುತ್ತಿದೆಯೆ ?

" ಇಲ್ಲ. ಆದರೂ ಮಲಗು ಅಣ್ಣ !

ಒಂದೇ ದಿಂಬಿನಮೇಲೆ ಅಣ್ಣತಮ್ಮಂದಿರು ತಲೆ ಇಟ್ಟುಕೊಂಡು ಮಲಗಿದರು. ರಾಜೂ ತನ್ನ ಕೈಯನ್ನು ಅಣ್ಣನ ಹೃದಯದ ಮೇಲಿಟ್ಟು ಕೂಡಲೇ ನಿದ್ರೆಹೋದನು.

ಅಣ್ಣನ ತೋಳತೆಕ್ಕೆಯಲ್ಲಿ ರಾಜೂ ಗಾಢವಾಗಿ ಮಲಗಿದನು.

ತಮ್ಮನು ಹಾಗೆ ಮಲಗಿರುವದನ್ನು ಅಣ್ಣನು ಬೆಳ್ಳಂಬೆಳಗು ನೋಡುತ್ತಲೇ ಇದ್ದನು.

## ೫

ಆ ಹಳ್ಳಿಯಲ್ಲಿ ಈಗ ಭೀಮರಾಯನೇ ನಿಜವಾದ ಗೌಡನಾಗಿದ್ದನು. ಬಳವಂತರಾಯನು ಹೆಸರಿಗೆ ಮಾತ್ರ ಅಂಕಿತಹಾಕುವ ಅಧಿಕಾರಿಯಾಗಿದ್ದನು.

ಈ ವ್ಯವಸ್ಥೆಯಿಂದ ಬಳವಂತರಾಯನು ಅತ್ಯಂತ ಸುಖಿಯಾಗಿದ್ದನು. ಅವನಿಗೆ ಒಣಜೊಂಜಾಟವು ಬೇಡವಾಗಿತ್ತು. ಭೀಮರಾಯನ ಸಮರ್ಥ ಕಾರುಭಾರದಲ್ಲಿ ಆ ಹಳ್ಳಿಗೂ, ಮನೆಗೂ ಕ್ಷೇಮವೆಂಬ ಮಾತು ಅವನಿಗೆ ಮನವರಿಕೆಯಾಗಿತ್ತು.

ಈ ಎರಡು ವರುಷಗಳಲ್ಲಿ ಹಳ್ಳಿಯಜನ ಭಾವೂರಾಯರನ್ನು ಮರೆತರು. ಬಳವಂತಗೌಡನು ಯಾರ ಕಣ್ಣಿಗೂ ಬೀಳದ್ದರಿಂದ ಭೀಮರಾಯನ ಅಂತಸ್ತು ಸಾಕಷ್ಟು ಬೆಳೆಯಿತು. ಕಾಶೀಬಾಯಿಯ ಸೋದರ ಮಾವನಾದ ಸೋಮಪ್ಪನು ಈಗ ಭೀಮರಾಯನ ಬಾಲ ಗುಂಡಾಡಿಸುವ ನಾಯಿಯ ಹಾಗೆ ಸುತ್ತಾಡುತ್ತಿದ್ದನು. ಅವನ ಕಾರಸ್ಥಾನಕ್ಕೆ ಯಾವ ಅವಕಾಶವೂ ಇರಲಿಲ್ಲ.

ಮನಸ್ಸಿನಲ್ಲಿ ಹೊಗೆಯಾಡುತ್ತಿದ್ದರೂ ಕಾಶಿಬಾಯಿ ಈಗ ಕಾಂತಾ ಬಾಯಿಯೊಡನೆ ಅನ್ಯೋನ್ಯವಾಗಿಯೇ ಇರಬೇಕಾಗಿತ್ತು. ಇದು ನಟನೆಯ ವ್ಯಾಪಾರವೆಂದು ಇಬ್ಬರಿಗೂ ತಿಳಿದಿತ್ತು.

ವಿಠ್ಠಲನು ಈಗ ಹಳ್ಳಿಯಲ್ಲಿಯೇ ಬಂದು ನಿಂತದ್ದರಿಂದ ಈ ಹೆಣ್ಣು ಮಕ್ಕಳ ಕಚ್ಚಾಟಕ್ಕೆ ಆಸ್ಪದ ಸಿಗುತ್ತಿರಲಿಲ್ಲ. ಅಡಿಗೆಯ ಮನೆಯಲ್ಲಿ ಏನಾದರೂ ಹೆಚ್ಚಿನಮಾತು ನಡೆದದ್ದು ಕೇಳಿದಕೂಡಲೇ 'ಏನು ಮಾತು ಅತ್ತಿಗೆ'? ಎಂದು ಕೇಳಿಬಿಡುತ್ತಿದ್ದನು.

ಒಮ್ಮೊಮ್ಮೆ ಪಕ್ಕದ ಕೋಣೆಯಲ್ಲಿ ಬಾಳಣ್ಣನಿರುವದು ನಿಮಗೆ ಗೊತ್ತಿದ್ದರೂ ಬಾಯಿ ಮಾಡುತ್ತಿರುವದು ನಿಮಗೆ ಚೆಂದವೆ? ನಿಮಗೆ ಹಿರಿಯರು ಕಿರಿಯರು ಯಾರು ಕಾಣಿಸುವದಿಲ್ಲವೆ?' ಎಂದು ಗದರಿಸುತ್ತಿದ್ದನು.

ಸದಾಕಾಲ ವಿಠ್ಠಲನು ಮನೆಯಲ್ಲಿಯೇ ಇರುತ್ತಿದ್ದುದರಿಂದ ಹೆಂಗಸರಿಗೆ ಮಾತಾಡುವ ಸ್ವಾತಂತ್ರ್ಯವೂ ಇಲ್ಲದಾಯಿತು. ಅವರು ವಿಠ್ಠಲನನ್ನು ಮನಸ್ಸಿನಲ್ಲಿ ಶಪಿಸತೊಡಗಿದರು.

ಒಂದು ವರುಷದ ಹಿಂದೆ ವಿಠ್ಠಲನು ಒಂದು ದಿನ ತನ್ನ ಟ್ರಂಕು, ಹಾಸಿಗೆ ಸುರುಳಿಗರೊಂದಿಗೆ ಹಳ್ಳಿಗೆ ಅಕಸ್ಮಾತ್ತಾಗಿ ಬಂದಿಳಿದನು. ಎಲ್ಲರಿಗೂ ಅಚ್ಚರಿಯಾಯಿತು. ಬಳವಂತರಾಯನು 'ಏನುಸುದ್ದಿ ವಿಠ್ಠಲಾ. ನೀನೊಬ್ಬನೆ ಬಂದೆಯೇಕೆ? ರಾಜಣ್ಣನೇಕೆ ಬರಲಿಲ್ಲ?' ಮೊದಲಾಗಿ ಕೇಳತೊಡಗಿದನು.

ಭೀಮರಾಯನ ಕುತೂಹಲವೂ ಇಮ್ಮಡಿಸಿತು.

"ನನ್ನಿಂದ ಪರೀಕ್ಷೆ ಪಾಸಾಗಲು ಸಾಧ್ಯವಿಲ್ಲವೆಂದು ಮನವರಿಕೆಯಾಯಿತು ಅಣ್ಣ! ಅಲ್ಲಿದ್ದು ಸುಮ್ಮನೆ ಹಣ ಹಾಳುಮಾಡುವದಕ್ಕಿಂತ ಇಲ್ಲಿದ್ದು ಮನೆಗಾದರೂ ಏನಾದರೂ ಉಪಯೋಗವಾಗಬೇಕೆಂದು ಬಂದು ಬಿಟ್ಟೆ. ತಮ್ಮನಿಗೂ ಇದು ಸಮ್ಮತವಾಯಿತು.

ಈ ಮಾತನ್ನು ಕೇಳಿ ಭೀಮರಾಯನು,

"ಎಷ್ಟೆಂದರೂ ನೀನು ಗೌಡರ ಮನೆತನದವನಲ್ಲವೇ ವಿಠ್ಠಲ! ನಾವು ಲಕ್ಷ್ಮಿಯ ಒಕ್ಕಲು. ಸರಸ್ವತಿಯ ಒಕ್ಕಲಲ್ಲ.

"ಆದರೆ ಭೀಮಣ್ಣ! ಈ ಮಾತು ನಾವು ಮೂವರಿಗೆ ಮಾತ್ರ ಅನ್ವಯಿಸುತ್ತದೆ. ರಾಜೂ ಇಡೀ ಸಾಲೆಯಲ್ಲಿಯೇ ಜಾಣ ವಿದ್ಯಾರ್ಥಿಯಾಗಿದ್ದಾನೆ. ಅವನು ಯಾವ ಪರೀಕ್ಷೆಯಲ್ಲಿಯೂ ಒಂದನೆಯ ನಂಬರು ಬಿಟ್ಟಿಲ್ಲ. ಅವನ ಗುಣ ಹೊನ್ನಿನದು ಅಣ್ಣ. ಅವನು ಗೌಡರ ಮನೆತನಕ್ಕೆ ಅಪವಾದವಾದರೂ ಗೌಡರ ಕೀರ್ತಿಗೆ ಕಳಸವಿಡುತ್ತಾನೆ. ನನಗೆ ಕೊಡುವ ದುಡ್ಡನ್ನು ಅವನಿಗೆ ಕೊಡುವದು ಸಾರ್ಥಕವಾಗುತ್ತದೆ.

ಎಲ್ಲರಿಗೂ ರಾಜಣ್ಣನ ನೆನವಾಯಿತು. ಸುಧೆಯ ಕಣ್ಣು ತುಂಬಿ ನಿಂತಿತು.

"ಅಲ್ಲೋ! ವಿಠ್ಠಣ್ಣ! ರಾಜಣ್ಣನನ್ನು ಒಬ್ಬಂಟಿಯಾಗಿ ಬಿಟ್ಟುಬರಬೇಕೇನು? ಪಾಪ! ಅವನು ಒಬ್ಬನೇ ಹೇಗೆ ಇದ್ದಾನು. ಇಲ್ಲಿದ್ದಾಗ ಅಪ್ಪನ ಮಗ್ಗುಲಲ್ಲಿಯೇ ಮಲಗುವ ಕೂಸಾಗಿದ್ದನು,

ಎಂದು ಗದ್ಗದಿತಳಾದಳು.

"ನಿನ್ನ ರಾಜಣ್ಣ ಇನ್ನೂ ಮಗ್ಗುಲಲ್ಲಿ ಮಲಗಿಸಿಕೊಳ್ಳುವ ಕೂಸಾಗಿರುವನೆಂದು ತಿಳಿದೆಯೇನು ಸುಧಾ? ಅವನು ಈಗ ಗಿಡಗಂಟೆಗಳನ್ನು ಕೂಡ ಮಾತಾಡಿಸುತ್ತಾನೆ. ಮೊನ್ನೆ ಅವನು ವಾರ್ಷಿಕ ವಾಕ್ಸ್ಪರ್ಧೆಯಲ್ಲಿ ಮಾತಾಡಿದ ಮಾತುಗಳನ್ನು ಕೇಳಿ ಪಟ್ಟಣಕ್ಕೆ ಪಟ್ಟಣವೇ ಬೆರಳು ಕಚ್ಚಿತು.

ಜಮೀನುದಾರರ ಮಗನಾಗಿ ರೈತರ ಪಕ್ಷ ಹಿಡಿದು ವಾದಿಸಿದ ಅವನ ವಾದ ವೈಖರಿ ಅಸದಳವಾಗಿತ್ತು.

" ಇಷ್ಟು ಮಾತಾಡುತ್ತಾನೆಯೇ ರಾಜಣ್ಣ !

ಎಂದು ಸುಧಾ ಸಂತೋಷದಿಂದ ನುಡಿದಳು.

ಭೀಮರಾಯನಿಗೆ ತಮ್ಮ ಮನೆಗೆ ಬಂದದ್ದರಿಂದ ಅನುಕೂಲವೇ ಆಯಿತು. ಅವನು ಮುಗುಳುನಗೆ ನಗುತ್ತ,

" ನೀನು ಬಂದದ್ದು ಒಳ್ಳೆಯದಾಯಿತು ಬಿಡು ವಿಠ್ಠಲಾ ! ನಾಲ್ಕೆಂಟು ದಿನ ವಿಶ್ರಾಂತಿ ತೆಗೆದುಕೊ. ಆಮೇಲೆ ಮನೆಯ ಮೇಲ್ವಿಚಾರಣೆಯನ್ನು ನೀನೇ ವಹಿಸಿಕೋ. ಕೆಲಸದಲ್ಲಿ ಮನೆಯ ಕಡೆಗೆ ನೋಡಲು ಪುರುಸೊತ್ತೇ ನನಗೆ ಆಗುವದಿಲ್ಲ.

" ನನಗೆ ವಿಶ್ರಾಂತಿಯೆಂದರೇನು ಅಣ್ಣ ! ನನಗೆ ಪಟ್ಟಣದಲ್ಲಿ ಅದೇ ಕೆಲಸವಾಗಿತ್ತು. ವಿಶ್ರಾಂತಿ ಹೆಚ್ಚಾಗಿದ್ದರಿಂದ ನನಗೆ ವಿಶ್ರಾಂತಿಗೇ ವಿಶ್ರಾಂತಿ ಕೊಡಬೇಕಾಗಿದೆ.

ಈ ಮಾತನ್ನು ಕೇಳಿ ಎಲ್ಲರೂ ನಕ್ಕರು.

ಅಂದಿನಿಂದ ಆಗಲೇ ವಿಠ್ಠಲನ ಮನೆಯ ಮೇಲ್ವಿಚಾರಣೆಯ ಕಾರ್ಯ ಆರಂಭವಾಯಿತು.

ಮುಂಜಾವು ಎದ್ದವನೇ ಅಡಿಗೆಯ ಮನೆಗೆ ಹೋಗಿ " ಈ ಹೊತ್ತು ಯಾವ ಪಲ್ಯ ಮಾಡುತ್ತೀರಿ ? ಒಂದು ಹೋಳು ಪಲ್ಯೆ, ಒಂದು ಸೊಪ್ಪಿನ ಪಲ್ಲೆ ಆಗಬೇಕು. ಚಟ್ನಿ ಯಾವುದು ಅರೆಯುತ್ತೀರಿ ? ಹಸಿಮೆಣಸಿನಕಾಯಿ ಹಸಿಕೊಬ್ಬರಿ ಕೂಡಿಸಿ ಅರೆದುಬಿಡಿರಿ. ಟೊಮ್ಯಾಟೋ ಹಣ್ಣುಗಳ ಭಜ್ಜಿ ಪ್ರತಿದಿನವಿರಲೇಬೇಕು. ಅದರಲ್ಲಿ ಎಲ್ಲ ವ್ಹಿಟಾಮಿನ್ನುಗಳು ಇರುತ್ತವೆ. ಪ್ರತಿದಿನ ನಮ್ಮ ಆಹಾರದಲ್ಲಿ ಬದಲಾವಣೆಯಾಗುವಂತೆ ದಕ್ಷತೆ ವಹಿಸಿರಿ" ಮೊದಲಾಗಿ ಒಂದು ಉಪನ್ಯಾಸವನ್ನೆ ಬಿಗಿಯುತ್ತಿದ್ದನು.

ಎಂಟು ದಿನಗಳಲ್ಲಿ ಈ ವೈದುನನು ಹಣ ಹಾಳುಮಾಡುತ್ತ ಪಟ್ಟಣದಲ್ಲಿರುವದೇ ಕ್ಷೇಮಕರವಾಗಿತ್ತೆಂದು ಇಬ್ಬರೂ ಅತ್ತಿಗೆಯರಿಗೆ ಅನ್ನಿಸತೊಡಗಿತು. ಆದರೆ ಅವನು ಹೇಳಿದಂತೆ ಕೇಳಬೇಕೆಂದು ಭೀಮರಾಯನ ಶಾಸನವಾಗಿದ್ದರಿಂದ ಅವರು ತೆಪ್ಪಗೆ ಕೂಡ್ರುತ್ತಿದ್ದರು.

ಈಗ ಮನೆಯ ಹೆಣ್ಣಾಳುಗಳಿಗೆ ಪುರುಸೊತ್ತೇ ಸಿಗದಾಯಿತು.

ಹೊರಗಿನಿಂದ ಬಂದವನೇ ವಿಠ್ಠಲನು ಪಡಸಾಲೆಯ ಕಸವನ್ನು

ಯಾರು ಗುಡಿಸಿದ್ದಾರೆ ಎಂದು ಕೂಗುತ್ತಲೇ ಬರುತ್ತಿದ್ದನು.

ಗುಡಿಸಿದ ಆಳು ಬರುತ್ತಲೇ ಅವನು ಒಂದು ಮೂಲೆಯಲ್ಲಿ ಬಿದ್ದ ಕಡ್ಡಿಯ ಚೂರನ್ನು ತೋರಿಸಿ 'ಇದು ಗುಡಿಸಿದ ಲಕ್ಷಣವೆ? ಈ ಕಡ್ಡಿಯ ಚೂರು ಇಲ್ಲಿ ಹೇಗೆ ಉಳಿಯಿತು ಹೇಳು? ಕೆಲಸಮಾಡುತ್ತೀಯೋ ಇಲ್ಲವೆ ಹೊರಗೆ ಹೋಗಬೇಕೆನ್ನುತ್ತೀಯೋ ಹೇಳಿಬಿಡು."

ಪಾಪ! ಆ ದಾಸಿ ಕಣ್ಣೀರು ತುಂಬಿಕೊಂಡು ಆ ಕಡ್ಡಿಯನ್ನು ಎತ್ತಿಕೊಂಡು ಹೋಗುತ್ತಿದ್ದಳು.

ವಿಠ್ಠಲನಿಗೆ ಇದರಿಂದ ತೃಪ್ತಿಯಾಗುತ್ತಿತ್ತು.

ಮುಂಜಾವಿನಿಂದ ಸಂಜೆಯ ವರೆಗೆ ಯಾರಿಗಾದರೂ ಏನಾದರೂ ಕೆಲಸ ಹೇಳದಿದ್ದರೆ ಸಮಾಧಾನವಾಗುತ್ತಿರಲಿಲ್ಲ ಇವನಿಗೆ. ಎಲ್ಲರೂ ಬೇಸತ್ತರು. ಆದರೂ ಯಾರೂ ಏನೂ ಅನ್ನುವಂತಿರಲಿಲ್ಲ. ಚಿಕ್ಕಗೌಡರ ಮಾತನ್ನು ಮೀರುವದು ಹೇಗೆ?

ಹದಿನಾರು ವರುಷದ ನೀಲವ್ವ ಮಾತ್ರ ಈ ಚಿಕ್ಕ ಗೌಡನನ್ನು ಒಮ್ಮೊಮ್ಮೆ ಕೆಣಕುತ್ತಿದ್ದಳು.

ಅವಳು ಒಂದು ದಿನ ಗೋದಲೆಯಲ್ಲಿ ಸಗಣಿ ಬಳಿದು ಕೈತೊಳೆದು ಕೊಳ್ಳುತ್ತ ನಿಂತಿದ್ದಳು.

ಚಿಕ್ಕಗೌಡನು ಅಲ್ಲಿ ಹೋಗಿ ನೋಡಿದಾಗ ಒಂದು ಎಮ್ಮೆಯ ಕಾಲ ಬುಡಕ್ಕೆ ಇನ್ನೂ ಸಗಣಿಯ ಗುಂಪಿ ಇದ್ದದ್ದು ಕಂಡುಬಂದಿತು.

" ನೀಲೀ!

ನೀಲವ್ವ ಕೈ ತೊಳೆದುಕೊಳ್ಳುತ್ತಲೇ ಕೊಂಕುನೋಟದಲ್ಲಿ ವಿಠ್ಠಲನನ್ನು ನೋಡಿದಳು. ಅವಳು ಬುದ್ಧಿವಂತೆ. ಇವನು ಕೂಗಿದ ಕಾರಣವನ್ನು ಕೂಡಲೇ ಅರಿತು ಮುಖದಲ್ಲಿ ಮಂದಹಾಸವನ್ನು ಬೀರುತ್ತ

" ನಾನು ಕೈ ತೊಳೆದುಕೊಳ್ಳೊಹೊತ್ತಿಗೆ ಆ ಎಮ್ಮೆ ಮತ್ತೆ ಸಗಣಿ ಹಾಕಿತು ದಣಿಯರೆ?

" ಆದರೇನಾಯಿತು? ಮತ್ತೆ ತೆಗೆಯಲಿಲ್ಲವೇಕೆ?

" ದಣಿಯರು ಒಂದು ಎಮ್ಮೆಗಾಗಿ ಮುಂಜಾನಿಂದ ಚಂಜಿವರೆಗೆ ಒಂದು ಮುದಿಯಾಳು ಇಡಬೇಕಾದೀತು. ಗೋದಲೆಯಲ್ಲಿ ಸಗಣಿ ಇರದೇ ಮತ್ತೇನು ಇರಬೇಕು. ಹಗಲು ಹನ್ನೆರಡು ತಾಸು ಸಗಣಿ ಬಳಿಯುತ್ತ ನಿಂತರ ನಿಮ್ಮ ಕೋಣ್ಯಾಗಿನ ಕಸಾ ಯಾರು ಗುಡಿಸಬೇಕು.

ಎಂದ ನೀಲವ್ವ ಕೈ ತೊಳೆದುಕೊಂಡು ನಡದೇಬಿಟ್ಟಳು. ಚಿಕ್ಕ ಗೌಡರು ಅಪ್ರತಿಭರಾದರು. ಅವಳು ಅವರ ತೀರಸನಿಯದಲ್ಲಿಯೇ ಹಾಯುತಂತೆ ಸರ್ರನೆ ಬಂದು ಕೂಡಲೇ ಮಿಂಚಿನಂತೆ ಪಕ್ಕಕ್ಕೆ ಸರಿದು ಕುಣಿತದ ನಡಗೆಯಲ್ಲಿ ಹೋಗಿಬಿಟ್ಟಳು.

ಚಿಕ್ಕ ಗೌಡರ ಬಾಯಿ ಏಳಲಿಲ್ಲ. ಒಂದು ಮಂದಹಾಸ ಮಾತ್ರ ಮಿನುಗಿತು.

ನೀಲಿ ಎಂಬುದು ಅವಳ ಹೆಸರಾಗಿದ್ದಿತೇ ವಿನ ಅದು ಅವಳ ಮೈ ಬಣ್ಣದಿಂದ ಬಂದುದಾಗಿರಲಿಲ್ಲ. ಅವಳ ಬಣ್ಣ ಗೋದಿಬಣ್ಣದ ಕೆಂಪಿನದು ಜವ್ವನೆ. ಆಕರ್ಷಣೆಯಲ್ಲಿ ಅವಳ ತಾಯಿಯನ್ನೂ ಮೀರಿಸಿದ್ದಳು. ಅವಳು ಬಹಳ ದಿನಗಳಿಂದ ಗೌಡರ ಆಳಾಗಿ ದುಡಿದವಳು. ಅವರ ಅನ್ನದಿಂದಲೇ ಬೆಳೆದವಳು. ಆ ಅನ್ನದ ಮೆರಗು ಅವಳ ಅಂಗಾಂಗದಲ್ಲಿ ಮೆತ್ತಿಕೊಂಡಂತಿತ್ತು. ಅವಳ ಮೇಲೆ ಎಲ್ಲರದೂ ಪ್ರೀತಿ. ಭೀಮರಾಯನು ಕೂಡ ಅವಳಿಂದ ಏನಾದರೊಂದು ಕೆಲಸಮಾಡಿಸಿಕೊಂಡು ತೃಪ್ತಿಬಡುತ್ತಿದ್ದನು.

ನೀಲಿ ಮಾತಿನಲ್ಲಿ ಚತುರೆ. ಅವಳ ಮಾತುಗಳನ್ನು ಕೇಳಲೆಂದೇ ಹೆಂಗಸರು ಅವಳ ಬಾಯಿಯಿಂದ ಏನಾದರೂ ಕೇಳಿ ತಿಳಿದುಕೊಳ್ಳುತ್ತಿದ್ದರು.

ಎಲ್ಲ ಆಳುಗಳನ್ನು ಗದರಿಸುತ್ತಿದ್ದ ವಿಠ್ಠಲ ನೀಲಿಯನ್ನು ಕಂಡಾಗ ಮೆತ್ತಗಾಗುತ್ತಿದ್ದನು. ಒಂದೊಂದು ದಿನ ಅವಳು ಯಾವ ಕೆಲಸವನ್ನೂ ಮಾಡದೆ ಸ್ವಸ್ಥವಾಗಿ ಕುಳಿತುಬಿಡುತ್ತಿದ್ದಳು.

ಕುಳಿತೆ ಏಕೇ ನೀಲಿ ! ಎಂದು ವಿಠ್ಠಲ ಕೇಳಿದರೆ

" ಗೌಡರಿಗೆ ಮಾತ್ರ ಬೇಸರ ಬರತೆರಕದೇನು ? ನಂದೇನು ಜಿವಾ ಅಲ್ಲೇನು. ನನಗೂ ಬ್ಯಾಸರಿಕೆ ಬಂದೈತೆ ಎನ್ನುತ್ತ ಕಿಲಕಿಲನೆ ನಕ್ಕುಬಿಡುತ್ತಿದ್ದಳು. ವಿಠ್ಠಲನು ಅಷ್ಟೇ ದರ್ಪದ ದನಿಯಲ್ಲಿ ಅವಳ ಕೆಲಸವನ್ನು ಇನ್ನೊಬ್ಬ ಆಳಿಗೆ ಹೇಳುತ್ತಿದ್ದನು.

ಅದ್ಭುತರಮ್ಯಕಥೆಗಳನ್ನು ಹೇಳುವುದರಲ್ಲಿ ಈ ನೀಲವ್ವ ನಿಸ್ಸೀಮಳಾಗಿದ್ದಳು. ಅದಕ್ಕಾಗಿ ಹೆಂಗಸರು ಇವಳನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಒಮ್ಮೊಮ್ಮೆ ವಿಠ್ಠಲನು ಸಹ ಇವಳ ಕಥೆಯನ್ನು ಕೇಳಲು ಕುಳಿತುಕೊಳ್ಳುತ್ತಿದ್ದನು. ಆಗ ನೀಲಿ,

" ಗೌಡರು ಮುಂದ ಕುಂತರ ನನಗ ನಾಚಿಕೆ ಬರತೈತೆ ' ಎನ್ನುತ್ತಲೇ ಹೇಳಲು ಆರಂಭಿಸುತ್ತಿದ್ದಳು.

ಒಂದು ವರುಷ ದಾಟುವ ಸುಮಾರಿಗೆ ನೀಲವ್ವನಿಗೆ ವಿಠ್ಠಲನು ಯಾವ ಕೆಲಸವನ್ನೂ ಹೇಳುತ್ತಿರಲಿಲ್ಲ. ಅವಳನ್ನು ಉಳಿದ ಆಳುಗಳ ಮೇಲ್ವಿಚಾರಕಳನ್ನಾಗಿ ನಿಯಮಿಸಿದನು.

ಹೀಗೆ ಹೇಳಿದ ದಿನ ಕಾಂತಾಬಾಯಿ ಕಾಶೀಬಾಯಿಯ ಮುಖ ನೋಡಿದಳು. ಕಾಶೀಬಾಯಿ ಕಾಂತಾಬಾಯಿಗೆ ಕಣ್ಣು ಚಿವುಟಿದಳು.

ಆದರೆ ಇಬ್ಬರೂ ಅಂದಿನಿಂದ ನೀಲವ್ವನನ್ನು ನೋಡುವ ದೃಷ್ಟಿ ಬದಲಾಯಿತು. ಅವರು ಅವಳನ್ನು ಅಜ್ಜುಗಾವಲು ಕಾಯತೊಡಗಿದರು.

ಎಸ್. ಎಸ್. ಸಿ. ಪರೀಕ್ಷೆಯನ್ನು ಕೊಟ್ಟು ಮನೆಗೆ ಬಂದ ರಾಜಣ್ಣನಲ್ಲಿ ಯಾವ ಆಡಂಬರವೂ ಇರಲಿಲ್ಲ. ಅವನ ಸಾದಾ, ಸರಳಜೀವನವು ಎಲ್ಲರಲ್ಲಿಯೂ ಗೌರವವನ್ನು ತರತೊಡಗಿತು. ಅವನು ಖಾದೀ ಪ್ರೇಮಿಯಾಗಿದ್ದನು. ಒಂದು ಶರ್ಟು, ಮೇಲೊಂದು ಜಾಕೀಟು, ಪಾಯಜಾಮಾ ಇವು ಅವನ ದೈನಂದಿನ ಧರಿಸುವ ವಸ್ತ್ರಗಳಾಗಿದ್ದವು. ಅವುಗಳನ್ನು ತಾನೇ ಒಗೆದುಕೊಳ್ಳುತ್ತಿದ್ದನು. ಇವನನ್ನು ನೋಡಿದ ಹಳ್ಳಿಯ ಜನರು ಇವನು ಗೌಡರ ಮನೆತನಕ್ಕೆ ಅಪವಾದವಾಗಿ ಜನ್ಮ ತಾಳಿದ್ದಾನೆ ಎನ್ನಹತ್ತಿದರು.

ಅವನು ಸುಮ್ಮನೆ ಮನೆಯಲ್ಲಿ ಕುಳಿತುಕೊಂಡು ಇಲ್ಲದ ಕಾರುಭಾರ ಮಾಡುತ್ತಿರಲಿಲ್ಲ. ಯಾವಾಗಲೂ ಓದುತ್ತಿದ್ದನು. ಓದಿಗೆ ಬೇಸರವಾದ ಕೂಡಲೇ ಹೊಲಗದ್ದೆಗಳ ಕಡೆಗೆ ಒಬ್ಬನೇ ತಿರುಗಾಡಲು ಹೋಗುತ್ತಿದ್ದನು. ಗದ್ದೆಗಳ ಮಧ್ಯದಲ್ಲಿ ನಿಂತಾಗ ಅವನಿಗೆ ವಿಲಕ್ಷಣವಾದ ಆನಂದವಾಗುತ್ತಿತ್ತು. ರೈತಮಕ್ಕಳಿಂದ ಬೇಸಾಯದ ಪಾಠಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದನು. ಒಮ್ಮೊಮ್ಮೆ ತಾನೇ ಹರಗುತ್ತಿದ್ದನು. ಇನ್ನೊಮ್ಮೆ ತಾನೇ ಒಡ್ಡಿನಗುಂಟ ಬೆಳೆದ ಕಸವನ್ನು ಕೀಳುತ್ತಿದ್ದನು.

ಈ ಕೆಲಸವನ್ನು ಮಾಡುವಾಗ ಅವನಿಗೆ ಯಾವ ತಾರತಮ್ಯವೂ ಇರುತ್ತಿರಲಿಲ್ಲ. ರೈತಮಕ್ಕಳಿಗೆ ಇದರಿಂದ ರಾಜಣ್ಣನು ತೀರ ಹತ್ತಿರದವನಾಗಹತ್ತಿದನು.

ಮನೆಯಲ್ಲಿ ಕೂಡ ಇವನ ತೊಂದರೆಯೇ ಇರುತ್ತಿರಲಿಲ್ಲ. ಅತ್ತಿಗೆಯರೊಡನೆ ಅವನು ಅತ್ಯಂತ ಮಿತವಾಗಿ ಮಾತಾಡುತ್ತಿದ್ದನು. ಅಣ್ಣಂದಿರೊಡನೆ ಅತ್ಯಂತ ಗೌರವದಿಂದಲೇ ನಡೆದುಕೊಳ್ಳುತ್ತಿದ್ದನು.

ಕಿರಿಯ ತಮ್ಮನ ಈ ಸ್ವಭಾವವನ್ನು ನೋಡಿ ಎಲ್ಲರಿಗೂ ಬಹಳ ಸಮಾಧಾನವಾಯಿತು.

ನೀಲವ್ವನಂತೂ ರಾಜಣ್ಣನನ್ನು 'ಗಾಂಧೀ ಮಹರಾಜ'ನೆಂದು ಅನ್ನುತ್ತ ಹೆಚ್ಚಿನ ಗೌರವ ತೋರಿಸುತ್ತಿದ್ದಳು.

ಒಂದು ದಿನ ಬಾಳಣ್ಣ ಯಾವುದೋ ಕೆಲಸಕ್ಕಾಗಿ ರಾಜಣ್ಣನ ಕೋಣೆಗೆ ಹೋದಾಗ ಅವನು ಕಸ ಗುಡಿಸುತ್ತಿದ್ದನು.

ಗೌಡರ ಮನೆತನದ ಗಂಡಸರು ಈ ವರೆಗೆ ಯಾರೂ ಯಾವ ಸಮಯಕ್ಕೂ ಕಸ ಗುಡಿಸಿರಲಿಲ್ಲ. ಕಸ ಗುಡಿಸುವದು ಕೀಳು ಕೆಲಸವೆಂದೇ ಸಂಪ್ರದಾಯ ಹೇಳುತ್ತಿತ್ತು. ಆ ಸಂಪ್ರದಾಯದಲ್ಲಿಯೇ ಬಳವಂತರಾಯ ಬೆಳೆದವನು. ತಮ್ಮನ ಈ ಕೃತಿಯನ್ನು ನೋಡಿ ಅವನು,

" ನೀನೇಕೆ ಕಸ ಗುಡಿಸುತ್ತೀಯೋ ರಾಜೂ! ಮನೆಯಲ್ಲಿ ಆಳುಗಳೆಲ್ಲ ಸತ್ತುಹೋದರೇನು ?

ಎಂದು ಕೇಳಿದನು.

" ನನ್ನ ಕೋಣೆಯ ಕಸವನ್ನು ಇನ್ನೊಬ್ಬರು ಗುಡಿಸುವದು ನನ್ನ ಮನಸ್ಸಿಗೆ ಬರುವದಿಲ್ಲ ಅಣ್ಣ ! ಕಸಗುಡಿಸಲಾರದಷ್ಟು ನಾನು ಕೈಲಾಗದವನೇನು ?

" ಆದರೆ ಯಾರು ಯಾವ ಕೆಲಸವನ್ನು ಮಾಡಬೇಕೋ ಅವರು ಆ ಕೆಲಸವನ್ನು ಮಾಡಬೇಕು.

" ಆದರೆ ಪ್ರತಿಯೊಂದು ವ್ಯಕ್ತಿ ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳಬೇಕೆಂದು ದೊಡ್ಡವರು ಹೇಳುತ್ತಾರೆ. ಅದು ನನಗೂ ಸರಿಯೆಂದು ತೋರಿದೆ.

" ಇದರಿಂದ ನಮ್ಮ ಇಭ್ರತಿ, ಅಂತಸ್ತು ಕಡಿಮೆಯಾಗುತ್ತದೆ ತಮ್ಮ! ಗೌಡರ ಮಕ್ಕಳು ಕಸ ಗುಡಿಸಿದರೆ ಆಳುಗಳು ನಗಲಾರರೆ?

" ನನ್ನನ್ನು ಕೇಳಿದರೆ ಇದರಿಂದ ನಮ್ಮ ಅಂತಸ್ತು ಬೆಳೆಯುತ್ತದೆ. ತನ್ನನ್ನು ತಾನೇ ಆಳಿಕೊಳ್ಳುವ ಪಾಠಕ್ಕೆ ಇಂತಹ ಕೆಲಸಗಳು ನಾಂದಿಯನ್ನು ಇಡುತ್ತವೆ. ಜಮೀನುದಾರರಾದರೇನಾಯಿತು ? ಸಾಮಾನ್ಯ ಮನುಷ್ಯನಿಗೆ ಇರಬೇಕಾದ ಸೌಕರ್ಯಗಳೇ ಇವರಿಗೂ ಇರಬೇಕು. ಮನುಷ್ಯವರ್ಗದಲ್ಲಿ ತಾರತಮ್ಯ ಮಾಡುವದು ಮಾನವಜಾತಿಗೆ ಕಲಂಕಪ್ರಾಯವಾಗಿದೆ ಅಣ್ಣ ! ನಾವು ಮಾಡುವ ಕೆಲಸವೆಂದರೇನು ? ನಮ್ಮ ಆಹಾರವೇ ಅವರ ಆಹಾರವಾಗಿದೆ. ನಮ್ಮ ನೀರನ್ನೇ ರೈತರೂ ಕುಡಿಯುತ್ತಾರೆ. ಕೂಲಿಯವರೂ

ಕುಡಿಯುತ್ತಾರೆ. ಅಂದಬಳಿಕ....ಅವರ ಕೆಲಸವನ್ನೂ ನಾವು ಮಾಡಲೇ ಬೇಕು. ಅಲ್ಲವೇನು ?

ಬಳವಂತಗೌಡನಿಗೆ ತಮ್ಮನ ಈ ಮಾತುಗಳು ಬಹಳ ಮೋಜಿನ ವೆನ್ನಿಸಿದವು. ಆ ಮಾತಿನಲ್ಲಿ ಯಾವುದೋ ಸವಿಯಿರುವದಾಗಿ ಅವನು ತಮ್ಮನನ್ನು ಮುಗುಳುನಗೆಯಿಂದ ನೋಡುತ್ತ ಹೇಳಿದನು,

" ನೀನು ಹೇಗೆ ಬೇಕೋ ಹಾಗೆ ಇರು. ಸುಮ್ಮನೆ ದಣಿದುಕೊಳ್ಳ ಬೇಡ. ನಿನ್ನ ಸ್ವಾತಂತ್ರ್ಯದಲ್ಲಿ ನಾನು ಅಡ್ಡಬರುವದಿಲ್ಲ"

ಎಂದು ಹೇಳಿ ಹೋಗಿಬಿಟ್ಟನು. ನಾಲ್ಕು ದಿನ ಹಾಗೆ ಹೀಗೆ ತೂಗಿದ ತೊಟ್ಟಿಲು ಮತ್ತೆ ತನ್ನ ಸ್ಥಾನಕ್ಕೆ ಬರುವದೆಂಬ ಭಾವವೇ ಈ ಮಾತಿಗೆ ಕಾರಣವಾಗಿತ್ತು.

ಇನ್ನೊಂದು ದಿನ ರಾತ್ರಿ ಒಂಬತ್ತು ಗಂಟೆಯ ಸುಮಾರಿಗೆ ಭೀಮ ರಾಯನು ರಾಜಣ್ಣನ ಕೋಣೆಗೆ ಹೋಗಿನೋಡಿದಾಗ ಅವನು ಒಂದು ಕಂಬಳಿಯನ್ನು ಹಾಸಿಕೊಂಡು ಅದರ ಮೇಲೆ ಒಂದು ಟಾವೇಲನ್ನು ಒಗೆದು ಕೊಂಡು ಚಿಕ್ಕ ತಲೆದಿಂಬನ್ನು ಇಟ್ಟುಕೊಂಡು ಮಲಗಿ ಓದುತ್ತಿರುವದನ್ನು ನೋಡಿದನು. ಅವನ ಅಂತಃಕರಣ ಚುರ್ರೆಂದಿತು.

ಭೀಮರಾಯ ತಮ್ಮನನ್ನು ಕೇಳಿದನು

" ಮನೆಯಲ್ಲಿ ಮೆತ್ತನ್ನ ಗಾದೆಗಳು ಲೆಕ್ಕವಿಲ್ಲದಷ್ಟು ಬಿದ್ದಿರುವಾಗ ನೀನು ಬರಿಯ ಕಂಬಳಿಯ ಮೇಲೆ ಮಲಗುವದೆಂದರೇನು ರಾಜೂ !

" ಮನೆಯಲ್ಲಿ ಗಾದೆಗಳಿಲ್ಲವೆಂದು ನಾನು ಕಂಬಳಿಯ ಮೇಲೆ ಮಲಗಿಲ್ಲ ಅಣ್ಣ ! ಇದೂ ಒಂದು ನನ್ನ ಸಾಧನೆಯಾಗಿದೆ. ನಮ್ಮ ದೇಶದಲ್ಲಿ ಎಷ್ಟು ಜನ ಮೆತ್ತನ್ನ ಹಾಸಿಗೆಯ ಮೇಲೆ ಮಲಗುತ್ತಾರೆ ? ಸಾವಿರ ಜನಕ್ಕೆ ಇಲ್ಲದ ಸೌಕರ್ಯ ನನಗೊಬ್ಬನಿಗೆ ಯಾತಕ್ಕೆ ಬೇಕು ? ಇದು ದೊಡ್ಡ ಮಾತಾದೀತು. ಆದರೆ ನನಗೆ ಮೆತ್ತನ್ನ ಹಾಸಿಗೆಯಮೇಲೆ ಮಲಗುವ ಮನಸ್ಸಿಲ್ಲ.

ಅವರವರ ಹಣೆಯಬರಹ ಅವರಿಗಿರುತ್ತದೆ. ನೀನೇನು ದಟ್ಟದರಿದ್ರನಲ್ಲ ತಿಳಿಯಿತೇ ?

" ಗಾದೆಯ ಮೇಲೆ ಮಲಗುವದು ಮಾತ್ರ ಶ್ರೀಮಂತಿಕೆಯ ಲಕ್ಷಣ ವೇನು ಅಣ್ಣ ? ಈ ದೇಹಕ್ಕೆ ಎಲ್ಲ ರೀತಿಯ ಅನುಭವವೂ ಇರಬೇಕೆಂದು ನಾನು ಇದನ್ನು ಅನುಭವಿಸುತ್ತಿದ್ದೇನೆ.

" ಗೌಡರ ಮಗನಾದ ನೀನು ಬೈರಾಗಿಯಂತೆ ಇರುವದು ನನ್ನ ಮನಸ್ಸಿಗೆ ಬರುವದಿಲ್ಲ ಬಿಡು. ಇಲ್ಲದ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಳ್ಳುವದು ಅಪಾಯಕಾರವಾಗಿದೆ ತಿಳಿಯಿತೇನು ?

" ಅಣ್ಣಾ ! ನೀನು ಆಗ್ರಹಪಡಿಸಬೇಡ. ನನ್ನ ದೇಹಕ್ಕೆ ಇದು ಒಗ್ಗದಿದ್ದರೆ ನಾನೇನು ಹಟ ಹಿಡಿಯುವದಿಲ್ಲ ಆಯಿತಿಲ್ಲೋ ?

" ನಾಳೆ ಕಾಲೇಜಕ್ಕೆ ಹೋಗುವಾಗ ಕಂಬಳಿಯನ್ನೇ ತೆಗೆದುಕೊಂಡು ಹೋಗುವಿಯೇನು ?

" ಕಂಬಳಿಯವರು ಗಂಡಾಂತರಪ್ರಾಣಿಗಳಲ್ಲ ಅಣ್ಣಾ ! ಕಾಲೇಜದಲ್ಲಿ ಅವರಿಗೂ ಪ್ರವೇಶ ದೊರೆಯುವದು.

ರಾಜಣ್ಣಾ ಮುಗುಳುನಗೆ ನಕ್ಕನು.

ಭೀಮರಾಯ ಹೆಚ್ಚಿಗೆ ಮಾತು ಬೆಳೆಸದೆ ' ನಿನಗೆ ಹೇಗೆ ಬೇಕೋ ಹಾಗೆ ಇರು. ಆದರೆ ಸುಮ್ಮನೆ ಸಂನ್ಯಾಸಿ ಜೀವನ ಸಾಗಿಸಬೇಡ. ಈ ಮನೆಯಲ್ಲಿ ಯಾವುದಕ್ಕೂ ಕೊರತೆ ಇಲ್ಲ. ತಿಳಿಯಿತೆ ? '

ಎಂದು ಹೇಳಿ ತಮ್ಮನ ಅನೇಕ ದೊಡ್ಡ "ದೊಡ್ಡ ಪುಸ್ತಕಗಳ ಕಡೆಗೆ ಕಣ್ಣು ಹಾಯಿಸಿ ಅಭಿಮಾನದಿಂದ ನೋಡಿದನು.

ತಮ್ಮನ ವಿದ್ಯೆಯ ಬಗ್ಗೆ ಭೀಮರಾಯನಲ್ಲಿ ಅಪಾರವಾದ ಹೆಮ್ಮೆಯೂ ಗೌರವವೂ ಮೂಡಿದುದನ್ನು ಆ ಕಣ್ಣುಗಳು ಸೂಚಿಸಿದವು.

ರಾಜಣ್ಣಾ ಬಂದ ಬಳಿಕ ಸುಧಾ ಅವನಿಗೆ ಯಾವ ಹೆಚ್ಚಿನ ಖಾದ್ಯಗಳನ್ನೂ ಮಾಡಿ ತಿನ್ನಿಸಿರಲಿಲ್ಲ. ಹಿಂದಕ್ಕೆ ಬೇಡುತ್ತಿದ್ದ ಹಾಗೆ ಈಗ ಅವನು ಬೇಡುತ್ತಲೂ ಇರಲಿಲ್ಲ.

ಈ ದಿನ ಅವಳಿಗೆ ಸ್ಫೂರ್ತಿ ಬಂದಂತಾಗಿ ಆ ಮಧ್ಯಾಹ್ನ ಮೀರಿ ಮೂರು ಗಂಟೆಯಾಗುವ ಹೊತ್ತಿಗೆ ಅಣ್ಣನಿಗಾಗಿ ಮೈಸೂರು ಪಾಕ್‌ವನ್ನೂ, ಬಟಾಟೆಯ ವಡೆಗಳನ್ನೂ ಸಿದ್ಧಪಡಿಸಿಕೊಂಡು ಅಣ್ಣನ ಕೋಣೆಗೆ ತಟ್ಟೆಯಲ್ಲಿಟ್ಟುಕೊಂಡು ನಡೆದಳು.

ತಂಗಿಯನ್ನು ನೋಡುತ್ತಲೇ ರಾಜಣ್ಣಾ ಬೆದರಿದವನಂತೆ ಕಣ್ಣರಳಿಸಿ ಕೇಳಿದ,

" ಇದೆಲ್ಲಾ ಏನು ಸುಧಾ ! ಇಷ್ಟೆಲ್ಲ ಏತಕ್ಕೆ ತಂದೆಯೆ ? ನಾನೇನು ಬಕಾಸುರನ ಅವತಾರವೆಂದು ತಿಳಿದುಕೊಂಡೆಯಾ ?

" ಇತ್ತೀಚೆಗೆ ನೀನು ಏನೋ ಒಂದು ತರಹ ಆಗಿರುವಿ ರಾಜಣ್ಣಾ !

ಚನ್ನಾಗಿ ತಿನ್ನುವದಿಲ್ಲ. ಚನ್ನಾಗಿ ಉಣ್ಣುವದಿಲ್ಲ.

"ತಿನ್ನದೆಯೆ ನಾನು ಬದುಕಿದ್ದೇನೆಯೆ ?

"ಆದರೆ ಬಡ ಊಟವನ್ನು ಉಣ್ಣುವದು ತಿನಿಸೇನು ?

"ಸುಧಾ! ನಮ್ಮೆಲ್ಲರಿಗೆ ಸಿಗುವದು ಇಷ್ಟೇ ಅನ್ನ. ಹೆಚ್ಚು ತಿನ್ನುವದು ಅಪರಾಧವಾಗಿದೆ. ಇನ್ನೊಬ್ಬರ ತುತ್ತನ್ನು ಕಸಿದುಕೊಳ್ಳುವದು ಸಾಧುವೇನು ಹೇಳು? ಒಬ್ಬರಿಗೆ ಇಲ್ಲದ್ದು ನನಗೆ ಸಿಗಬೇಕು ಹೇಳು? ನೀನು ತಟ್ಟೆಯಲ್ಲಿ ತಂದಿರುವ ಮೈಸೂರ ಪಾಕವನ್ನೂ, ವಡೆಗಳನ್ನೂ ಎಷ್ಟೋ ಬಾಂಧವರು ಜನ್ಮದಲ್ಲಿಯೂ ಕಾಣಲಾರರು. ಇಂತಹ ದರಲ್ಲಿ ಇದು ನನ್ನ ಹೊಟ್ಟೆಯಲ್ಲಿ ಹೇಗೆ ಇಳಿದಾವು ಹೇಳು.?

"ಈ ಬಾರ್ಸಗಳ ಮೇಲೆ ನೀನೊಂದು ಚಿಕ್ಕ ಉಪನ್ಯಾಸವನ್ನೂ ಮಾಡಬೇಕೆಂದು ನಾನು ಇವುಗಳನ್ನು ತರಲಿಲ್ಲ ಅಣ್ಣ! ನೀನು ಇವನ್ನು ತಿನ್ನಬೇಕು.

"ಮಧ್ಯಾನ್ನದ ಊಟವೇ ಇನ್ನೂ ಪಚನವಾಗದಿರುವಾಗ ಈ ಆಹಾರವನ್ನು ಹೇಗೆ ನುಂಗಲಿ ತಂಗಿ! ತುಂಬಿದ ಹೊಟ್ಟೆಗೆ ತುರುಕುವದು ಅನಾರೋಗ್ಯಕರವಲ್ಲವೇನು ?

"ಮಧ್ಯಾನ್ನದಲ್ಲಿ ನೀನೇನು ಪಂಚಭಕ್ಷ್ಯ ಪರಮಾನ್ನವನ್ನುಣ್ಣಲಿಲ್ಲ. ಸುಮ್ಮನೇ ತಿನ್ನು ಏಳು ಮಾರಾಯಾ!

"ನಾನು ಕೇವಲ ಎರಡು ಊಟಗಳ ಮೇಲೆಯೇ ಇರಬೇಕೆಂದು ನಿಶ್ಚಯಿಸಿದ್ದೇನೆ. ನೀನು ಆಗ್ರಹಪಡಿಸಬೇಡ.

"ಇದೇನು ವ್ರತವೋ ಸುಡುಗಾಡು. ನೀನೇನು ಮುದುಕನೆ ಇಂಥ ವ್ರತ ಮಾಡಲಿಕ್ಕೆ. ಸುಮ್ಮನೆ ತಿನ್ನು ಏಳು. ಈ ದರಿದ್ರ ಸ್ವಭಾವವನ್ನು ಎಲ್ಲಿ ಕಲಿತೆಯೋ ಏನೊ? ನಿನಗಾಗಿ ಮನೆಯಲ್ಲಿ ಎಲ್ಲರೂ ಮರುಗುತ್ತಾರೆ. ಈ ದರಿದ್ರತನ ಗೌಡರ ಮನೆಯಲ್ಲಿ ಅಸ್ವಾಭಾವಿಕ ರಾಜಣ್ಣ!

"ಮಿತ ಆಹಾರ ದಾರಿದ್ರ್ಯದ ಲಕ್ಷಣವಲ್ಲ ಸುಧಾ! ಅದು ಜೀವನ ದಲ್ಲಿ ಹಿಡಿತವನ್ನು ತಂದುಕೊಡುತ್ತದೆ. ಅದೇ ಆರೋಗ್ಯದ ಲಕ್ಷಣ. ಹೆಚ್ಚು ತಿನ್ನುವದು ಶ್ರೀಮಂತಿಕೆಯ ಲಕ್ಷಣವೆಂದು ನಿನಗಾರು ಹೇಳಿದರು? ಪಚನವಾಗದ ಅನ್ನ ರಕ್ತಗತವಾಗಬಹುದೆ? ಬೇಡವಾದರೂ ರುಚಿಗಾಗಿ ತಿನ್ನುವದೇ ದಾರಿದ್ರ್ಯದ ಲಕ್ಷಣ. ಅನಾರೋಗ್ಯದ ತವರು ಅಲ್ಲದೆ.......,

“ ನೀನು ತಿನ್ನದಿದ್ದರೆ ನಾನು ಈ ದಿನ ಊಟವನ್ನೇ ಮಾಡುವದಿಲ್ಲ.

“ ಅನ್ನ ಸತ್ಯಾಗ್ರಹ ಮಾಡುವಿಯಾ ? ಇಲ್ಲವೆ ಮೈಸೂರುಪಾಕು, ಬಟಾಟೆಯ ವಡೆಗಳಿಗೆ ಆಗ್ರಹ ಮಾಡುವಿಯಾ ? ಈ ಸಲ ನಿನಗೆ ಕೆಡ ಕೆನ್ನಿಸಬಾರದೆಂದು ತಿನ್ನುತ್ತೇನೆ. ಇನ್ನುಮೇಲೆ ಇಂತಹ ಕಾರುಭಾರ ಮಾಡಬೇಡ.

“ ಬರಬರುತ್ತ ನೀನು ವಿಚಿತ್ರವೇ ಆಗತೊಡಗಿರುವಿ. ನನಗೇನು ಇದು ಸರಿಕಾಣದಪ್ಪಾ !

“ ಯಾವುದು ಸರಿಕಾಣುವದಿಲ್ಲ ಸುಧಾ ?

“ ಯಾವುದೆಂದರೆ ನಿನ್ನ ನಡತೆ ?

“ ಅದರಲ್ಲಿ ಯಾವ ತಪ್ಪು ಇದೆ ಹೇಳುವಿಯಾ ?

“ ಗೌಡರ ಮಗನಾಗಿ, ಆಳುವ ಗೌಡನ ತಮ್ಮನಾಗಿ ಹೊಲದಲ್ಲಿ ಕಸ ತೆಗೆಯುವದೂ, ಮನೆಯಲ್ಲಿ ಕಸ ಗುಡಿಸುವದೂ, ಕಂಬಳಿಯ ಮೇಲೆ ಮಲಗುವದು, ಕೇವಲ ಎರಡೇ ಹೊತ್ತು ಸಪ್ಪಗಿನ ಊಟ ಮಾಡುವದು ಸಾಧುವಾದ ನಡತೆಗಳೇನು ಹೇಳು ?

ಗೌಡರ ವಂಶದಲ್ಲಿ ಜನ್ಮ ತಾಳಿದವರು ಮನುಷ್ಯ ಮಾತ್ರವೇ ಅಲ್ಲವೇನು ತಂಗಿ ?

“ ಎಲ್ಲರೂ ಒಂದೇ ಸವನೇ ಇರುತ್ತಾರೇನು ? ಮನುಷ್ಯರೆಲ್ಲರೂ ಒಂದೇ ಹೇಗೆ ಇದ್ದಾರು ? ರೈತರು ರೈತರೇ. ಜಮೀನುದಾರರು ಜಮೀನು ದಾರರೇ ! ಕೂಲಿಯವರು ಕೂಲಿಯವರೆ ; ಯಜಮಾನರು ಯಜಮಾನರೆ. ಹೀಗಿರುವದು ಜಗತ್ತಿನ ನಿಯಮ. ಅದನ್ನು ಬಿಟ್ಟು ಒಬ್ಬರು ಇನ್ನೊಬ್ಬರಂತೆ ಅನ್ನುವದು ಮೂರ್ಖತನವೇ ಆಗಿದೆ. ನೀನು ಓದಿದರೇನಾಯಿತು ? ತಿಳುವಳಿಕೆ ಬೇಡವೆ. ಸುಮ್ಮನೆ ಕತ್ತೆಯ ವಜ್ಜೆ ಪುಸ್ತಕಗಳನ್ನು ಓದಿದರೆ ವ್ಯವಹಾರ ಜ್ಞಾನಬಂದ ಹಾಗಾಯಿತೆ ?

ತಂಗಿಯ ಈ ಮಾತುಗಳನ್ನು ಕೇಳಿ ರಾಜಣ್ಣನಿಗೆ ನಗೆಯೇ ಬಂದಿತು. ಹಳ್ಳಿಯಲ್ಲಿ ಬೆಳೆದ ಇವಳು ಈಪರಿ ಮಾತಾಡುತ್ತಿರುವದನ್ನು ಕೇಳಿ ಅವನಿಗೆ ಅಭಿಮಾನವೂ ಆಯಿತು.

ಅವನು ಸಮಾಧಾನದಿಂದ ಹೇಳಿದನು.

“ ನಮ್ಮನ್ನು ಹುಟ್ಟಿಸಿದ ದೇವರೇ ಅವರನ್ನೂ ಹುಟ್ಟಿಸಿಲ್ಲವೇ ಸುಧಾ ? ನಾವೆಲ್ಲ ಒಬ್ಬ ದೇವರ ಮಕ್ಕಳಲ್ಲವೆ ? ಒಂದು ಕುಟುಂಬದಲ್ಲಿ

ಒಬ್ಬನು ಸಕ್ಕರೆ ತುಪ್ಪದಲ್ಲಿ ಕೈ ತೊಳೆದುಕೊಳ್ಳುವದು, ಇನ್ನೊಬ್ಬನು ಅಂಬಲಿಗೂ ಗತಿಗಾಣದೆ ಕೈ ತುರಿಸಿಕೊಳ್ಳುವದು ಸೃಷ್ಟಿಕರ್ತನಿಗೆ ಬೇಕಾದ ವಿಷಯವೇನು ಹೇಳು? ಯಾವ ತಂದೆ ಈ ವೈಷಮ್ಯವನ್ನು ಮಕ್ಕಳಲ್ಲಿ ನೋಡಿ ಸಹಿಸಬಹುದು ಹೇಳು? ನಾವು ಒಂದೇ ಕುಟುಂಬದವರು. ಎಲ್ಲರೂ ಒಂದೇ ರೀತಿಯಾಗಿ ಇರಬೇಕು.

" ಸಾಕು ಬಿಡು ನಿನ್ನ ಮಾತು ಕೇಳಿದರೆ ಕತ್ತೆಗೆ ಜ್ವರ ಬಂದಾವು? ಈ ವೈಷಮ್ಯದಿಂದಲೇ ಜಗತ್ತಿನಲ್ಲಿ ಒಂದು ಹವ್ಯಾಸ ಮೂಡಿ ಚೈತನ್ಯ ಬಂದಿದೆ. ವೈಷಮ್ಯದ ಅತೃಪ್ತಿಯೇ ಚೈತನ್ಯಕ್ಕೆ ಮೂಲವಾಗಿದೆ. ಹಾಗೆ ಕೇಳಿದರೆ ದೇವದೇವತೆಗಳಲ್ಲಿಯೂ ಈ ವೈಷಮ್ಯ ಮನೆ ಮಾಡಿಕೊಂಡಿದೆ. ಎಲ್ಲ ದೇವತೆಗಳ ರ್‍ಯಾಂಕೂ ಒಂದೇ ಇಲ್ಲ. ಇದು ನಿನಗೆ ಗೊತ್ತಿಲ್ಲವೆ? ಪಡೆದು ಬಂದವನು ಪಾನಕ ಕುಡಿಯುತ್ತಾನೆ, ಪಡೆಯದೆ ಬಂದವನು ನೀರು ಕುಡಿಯುತ್ತಾನೆ. ಇದನ್ನು ಬದಲಿಸಲು ಯಾರಿಗೂ ಶಕ್ಯವಿಲ್ಲ. ಇದು ಕೂಡ ಜಗತ್ತಿನ ಒಂದು ಸೂತ್ರವೇ ಆಗಿದೆ.

" ಈ ಮಾತುಗಳನ್ನೆಲ್ಲ ಎಲ್ಲಿ ಕಲಿತೆಯೇ ಸುಧಾ!

ರಾಜಣ್ಣ ಅತ್ಯಂತ ಅಚ್ಚರಿಯಿಂದ ತಂಗಿಯನ್ನು ನೋಡುತ್ತ ಕೇಳಿದನು.

" ಇವು ಕಲಿಕೆಯ ವಿಷಯಗಳಲ್ಲ ಅಣ್ಣ. ಅರಿಕೆಯ ವಿಷಯಗಳು. ಅಲ್ಲದೆ.

" ಅಲ್ಲವೇ ಏನು?

" ನಾನು ನಿನ್ನ ಕೆಂಪು ಪುಸ್ತಕದಿಂದ ಇವುಗಳನ್ನು ಓದಿದ್ದೇನೆ.

" ಆ ಕೆಂಪು ನೋಟುಬುಕ್ಕುದಿಂದಲೆ?

" ಹೌದು.

" ಮೂರು ದಿನಗಳಾದವು. ನಾನು ಆ ಪುಸ್ತಕವನ್ನೇ ಹುಡುಕುತ್ತಿದ್ದೆ.

" ಅದರಲ್ಲಿ ಬರೆದ ರಮೇಶ ಯಾರು ಅಣ್ಣ! ಎಷ್ಟು ಚಂದವಾಗಿ ಬರೆದಿದ್ದಾರೆ.

" ಓಹೋ! ಅವನೇ! ಅವನೊಬ್ಬ ಶ್ರೀಮಂತ ಹುಚ್ಚ. ಜಗತ್ತಿನೆಲ್ಲ ಶ್ರೀಮಂತರ ಸೊತ್ತೊಂದು ಅವನ ಗ್ರಹಿಕೆಯಾಗಿದೆ.

" ಅವರ ಬರಹ ಕೂಡ ಇದನ್ನೇ ಹೇಳುತ್ತದೆ.

" ಆದರೆ ಅವನ ಮನಸ್ಸು ಬಂಗಾರದ ಮುದ್ದೆಯಾಗಿದೆ ತಂಗಿ! ಅವನು ನನಗೆ ಗುರುಸ್ಥಾನದಲ್ಲಿಯೇ ಇದ್ದಾನೆ.

" ನಿನ್ನನ್ನು ಒಂದು ಬರಹದಲ್ಲಿ ಒಳಿತಾಗಿ ಛೀ ಹಾಕಿದ್ದಾರೆ.

" ಎಲ್ಲರೂ ಸಮಾನರೆಂದು ಅವನು ಒಪ್ಪುವದಿಲ್ಲ. ಅದಕ್ಕಾಗಿ ನನಗೂ ಅವನಿಗೂ ಜಗಳ.

" ಹಾಗೆ ಕೇಳಿದರೆ ಇದೇ ಕಾರಣದ ನಲುವಾಗಿಯೇ ನನಗೂ ನಿನಗೂ ಜಗಳವಾಗುವದಿದೆ.

" ರಮೇಶ ನಿನ್ನ ತಲೆಯನ್ನು ಚೆನ್ನಾಗಿ ಹಿಡಿದಿದ್ದಾನೆ. ಅಲ್ಲವೆ?

ರಾಜಣ್ಣ ನಕ್ಕನು.

ಅವನು ಖಾದ್ಯಗಳನ್ನು ತಿಂದಿದ್ದರಿಂದ ಸುಧೆಯೂ ನಕ್ಕಳು.

ಸುಧೆಯಲ್ಲಿ ಅಡಕವಾದ ವ್ಯಕ್ತಿತ್ವವನ್ನು ರಾಜಣ್ಣ ಕಂಡುಕೊಂಡನು.

ಸುಧೆಗೆ ಮಾತ್ರ ರಾಜಣ್ಣನ ಅವ್ಯವಹಾರವೇ ಖಚಿತವಾಯಿತು.

ವಿಠ್ಠಲನಿಗೂ ರಾಜನಿಗೂ ಈಗ ಒಂದೆಡೆ ಕುಳಿತು ಮಾತಾಡಲು ಆಗುತ್ತಿರಲಿಲ್ಲ. ವಿಠ್ಠಲನು ಆಗಲೇ ಹಳ್ಳಿಯ ವಾತಾವರಣದಲ್ಲಿ ಬೆರೆತು ಬಿಟ್ಟಿದ್ದನು. ರಾಜೂನ ಹುಚ್ಚುತನ ಅವನಿಗೆ ಸರಿಬೀಳುತ್ತಿರಲಿಲ್ಲ. ಆದರೆ ಅವನ ಬಗ್ಗೆ ಅಭಿಮಾನ ಮಾತ್ರ ಕಡಿಮೆಯಾಗಿರಲಿಲ್ಲ.

ಎಸ್. ಎಸ್. ಸಿ. ಪರೀಕ್ಷೆಯ ಪರಿಣಾಮುವನ್ನೂ ಘೋಷಿಸುವ ದಿನ ಸ್ವತಃ ವಿಠ್ಠಲನೇ ಪಟ್ಟಣದ ವರಗೆ ರಾಜಣ್ಣ ಮೊದಲಿನ ಹತ್ತು ಜನರಲ್ಲಿ ನಂಬರು ಪಡೆದ ಅಭಿಮಾನಸ್ಪದವಾದ ಪರಿಣಾಮುವನ್ನು ತಂದನು.

ಆ ದಿನ ಬಳವಂತರಾಯನಿಗೂ, ಭೀಮರಾಯನಿಗೂ ಆದ ಸಂತೋಷಕ್ಕೆ ಪಾರವಿಲ್ಲದಾಯಿತು.

ರಾಜಣ್ಣ ದೇವರಿಗೆ ಅಡ್ಡಬಿದ್ದು ಬಂದು ಬಾಳಣ್ಣನ ಕಾಲು ಹಿಡಿದಾಗ ಅವನ ಅಂತಃಕರಣ ತುಂಬಿಬಂದಿತು. ಇಬ್ಬರಿಗೂ ಆ ಸಮಯದಲ್ಲಿ ತಂದೆಯ ನೆನಪಾಗಿರಬೇಕು.

ಭೀಮಣ್ಣನಂತೂ ಕಂಡಕಂಡವರಿಗೆ ತಮ್ಮನ ಪರೀಕ್ಷೆಯ ಪರಿಣಾಮುಕ್ಕಾಗಿ ಕಲ್ಲುಸಕ್ಕರೆ ಹಂಚಿದನು.

ಗೌಡರ ಮನೆತನದಲ್ಲಿ ಎಸ್. ಎಸ್. ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದ ಗೌರವ ರಾಜಣ್ಣನದಾಗಿತ್ತು.

ಬಳವಂತಗೌಡನು ಊರಿಗೆಲ್ಲ ಭರ್ಜರಿಯಾದ ಔತಣವನ್ನು ಕೊಟ್ಟನು. ರೈತಾಳುಗಳೆಲ್ಲ ಬುಂವೆ, ಸಣ್ಣಕ್ಕಿ ಅನ್ನ, ಸಾರು, ತಿಂದು ತಣಿದರು. ಸತ್ಯನಾರಾಯಣನ ಪೂಜೆಯೂ ಅಷ್ಟೇ ವೈಭವದಿಂದ ಸಾಗಿತು. ಪಕ್ಕದ

ಹಳ್ಳಿಯ ಸ್ನೇಹಿತ ಜಮೀನುದಾರರೆಲ್ಲ ಈ ಸಮಾರಂಭದಲ್ಲಿ ಭಾಗವಹಿಸಿದರು. ಆದರಲ್ಲಿ ಬೇರೆಬೇರೆಯವರು ಬೇರೆ ಬೇರೆ ಉದ್ದೇಶದಿಂದಲೇ ಬಂದವರಾಗಿದ್ದರು.

ವಿಠ್ಠಲನಿಗೆ ಕನ್ನೆ ಕೊಡಬೇಕೆಂದು ಬಂದವರು ಕೆಲವರು, ರಾಜೂ ಮದುವೆಯಾಗಲು ಸಿದ್ಧನಾದರೆ ಅವನಿಗೆ ಬೇಕಾದಷ್ಟು ದುಡ್ಡು ಕೊಟ್ಟು ಪರದೇಶಕ್ಕೆ ಕಳಿಸಲೂ ಸಿದ್ಧರಾಗಿ ಬಂದವರು ಕೆಲವರು. ಮತ್ತೆ ಕೆಲವರು ಸುಧಾಳನ್ನು ನೋಡಿಹೋಗಲು ಬಂದವರಾಗಿದ್ದರು. ಸುಧಾ ಲಗ್ನದ ಪ್ರಸ್ತಾಪವನ್ನು ಭೀಮಣ್ಣನು ಆಗಲೇ ಕೆಲವರ ಮುಂದೆ ಪ್ರಸ್ತಾಪಿಸಿದ್ದುದೇ ಕಾರಣವಾಗಿದ್ದಿತು.

ರಾಜೂವಿಗೆ ಹಳ್ಳಿಯಲ್ಲಿ ಬಹಳ ದಿನಗಳವರೆಗೆ ಇರಲು ಸಮಯವಿರಲಿಲ್ಲ ಒಂದೆರಡು ದಿನಗಳಲ್ಲಿ ಅವನು ಕಾಲೇಜದ ವ್ಯವಸ್ಥೆ ಮಾಡಿಕೊಳ್ಳಲು ಹೋಗಲೇ ಬೇಕಾಗಿದ್ದಿತು. ಅವನಿಗೆ ಬೇಕಾದಾಗ ಹೋಗಲು ಎಲ್ಲರ ಅನುಕೂಲ ಮತವೂ ಇತ್ತು.

ಒಂದು ದಿನ ರಾಜೂ ಭೀಮಣ್ಣನ ಕೋಣೆಗೆ ಹೋಗಿ ಕದ ಮುಂದು ಮಾಡಿಕೊಂಡನು.

ಆಕಸ್ಮಾತ್ತಾಗಿ, ಅನಿರೀಕ್ಷಿತವಾಗಿ ಬಂದು ಕದ ಮುಚ್ಚಿ ಒಳಗೆ ಬಂದ ತಮ್ಮನ ಆಚರಣೆ ಅವನಿಗೆ ಅರ್ಥವಾಗದೆ ಪ್ರಶ್ನಾರ್ಥ ದೃಷ್ಟಿಯಲ್ಲಿ ಅವನನ್ನು ನೋಡಿದನು.

“ ಅಣ್ಣಾ ! ಈ ಮಾತಿನ ಬಗ್ಗೆ ನೀವು ಯೋಚಿಸಬೇಕು. ನನಗೇನೋ ಬಲವಾದ ಸಂದೇಹ ಬಂದಿದೆ. ನನ್ನದು ತಪ್ಪು ಕಲ್ಪನೆಯಾಗಿದ್ದರೆ ಈ ಸುದ್ದಿಯನ್ನು ಬಚ್ಚಿಡಬೇಕು. ದಯವಿಟ್ಟು ನೀಲವ್ವನನ್ನು........

“ ಏನೆಂದಿ ತಮ್ಮಾ !

“....ವಿಠ್ಠಲ ಅಣ್ಣನ ಬಗ್ಗೆ ನನಗೆ ಸಂದೇಹ ಬಂದಿದೆ. ಗೌಡರ ಮನೆತನದಲ್ಲಿ ಇದು ಆಗದಂತೆ ಎಚ್ಚರಪಡಬೇಕಷ್ಟೆ.

ಭೀಮಣ್ಣನ ಹುಬ್ಬುಗಳು ಗಂಟಿಕ್ಕಿದವು.

“ ಇದು ಸಿಟ್ಟಿನ ಆವಿರ್ಭಾವದಿಂದ ನಡೆಯಬಾರದು ಅಣ್ಣಾ ! ಸ್ವಾಭಾವಿಕವಾಗಿ ಅವಳು ನಮ್ಮ ಮನೆಗೆ ಬರದಂತೆ ಮಾಡಿದರಾಯಿತು. ಈ ಬಗ್ಗೆ ನೀವು ಕಾಂತಾ ಅತ್ತಿಗೆಯ ಸಹಾಯ ಪಡೆಯಬಹುದು.

“ ಇದು ಅವಳಿಗೂ ಗೊತ್ತಿದೆಯೆ ?

" ಹೆಂಗಸರ ಬುದ್ಧಿ ಈ ವಿಷಯದಲ್ಲಿ ಗಂಡಸರ ಬುದ್ಧಿಗಿಂತ ಸೂಕ್ಷ್ಮ ವಾಗಿರುತ್ತದೆ. ಅವರಿಗೆ ಇದು ಗೊತ್ತಿರಬಹುದೆಂದೇ ನನ್ನ ಅಭಿಪ್ರಾಯ.

ಭೀಮರಾಯ ಆಗಲೇ ವಿಠ್ಠಲನ ಮದುವೆಯನ್ನು ಮನಸ್ಸಿನಲ್ಲಿ ನಿಶ್ಚಯಿಸಿಬಿಟ್ಟನು.

' ಆಗಲಿ ತಮ್ಮಾ! ಈ ಬಗ್ಗೆ ನಾನೂ ಯೋಗ್ಯವಿಚಾರ ಮಾಡುತ್ತೇನೆ. ಏನೇ ಆಗಲಿ ಈ ಮದುವೆಯ ಮಾಸದಲ್ಲಿ ಅವನ ಲಗ್ನವನ್ನೂ ಮಾಡಿ ಬಿಡುತ್ತೇನೆ.

" ಇದು ಯೋಗ್ಯವಿಚಾರ.

" ಅದೇ ಸಮಯಕ್ಕೆ ಸುಧಾಳ ಮದುವೆಯನ್ನೂ ಮಾಡಿಬಿಡಬೇಕೆಂದು ಮನಸಾ ಸಂಕಲ್ಪಿಸಿದ್ದೇನೆ.

" ವರ ಯಾರು ?

" ಇನ್ನೂ ನಿಶ್ಚಿತವಾಗಿ ಹೇಳಲು ಬರುವದಿಲ್ಲ. ಆದರೂ ನೆರೆ ಹಳ್ಳಿಗಳಲ್ಲಿ ಎರಡು ಹುಡುಗರನ್ನು ನೋಡಿದ್ದೇನೆ.

" ಆದರೆ ಸುಧಾ........

" ಏನು ?

" ಅವಳ ಗಂಡ ಕಲಿತವನಿರಬೇಕೆಂದು ನನ್ನ ಸೂಚನೆ ಅಣ್ಣಾ !

" ನಿನ್ನ ಮಾತನ್ನು ನಾನೂ ಒಪ್ಪುತ್ತೇನೆ. ಆದರೆ....

" ಕೂಡಲೇ ನಿಶ್ಚಯಮಾಡಬೇಡ. ನಾನು ಪಟ್ಟಣಕ್ಕೆ ಹೋದಬಳಿಕ ರಮೇಶನನ್ನು ಕೇಳಿಕೊಂಡು ನಿನಗೆ ತಿಳಿಸುತ್ತೇನೆ.

" ಯಾವ ರಮೇಶ ರಾಜಾ !

" ಸುಬ್ಬರಾಯರ ಮಗ !

" ಅದು ದೊಡ್ಡ ತುತ್ತು.

" ಅದರ ರಮೇಶ ನನ್ನ ಸ್ನೇಹಿತನಾಗಿದ್ದಾನೆ.

" ಇದನ್ನು ಸಾಧಿಸು. ನಾನು ಬೇಕಾದಷ್ಟು ಖರ್ಚುಮಾಡಲು ಸಿದ್ಧನಾಗಿದ್ದೇನೆ. ನಮಗೆ ಇರುವವಳು ಒಬ್ಬಳೇ ತಂಗಿ. ಮದುವೆಯನ್ನು ವೈಭವಪೂರ್ಣವಾಗಿ ಮಾಡೋಣ.

ಪಡಸಾಲೆಯ ನೀಲವ್ವ ನಗುತ್ತಿರುವ ಸಪ್ಪಳ ಕೇಳಿ ಭೀಮರಾಯನು ಕೋಣೆಯ ಬಾಗಿಲ ತೆಗೆದನು. ವಿಠ್ಠಲ ಆಗಲೇ ಅಡಿಗೆಯ ಮನೆಗೆ ಹೋದುದನ್ನು ನೋಡಿದನು.

ಆದರೆ ಆಗ ಭೀಮರಾಯ ಏನೂ ಅನ್ನಲಿಲ್ಲ.

ನೀಲವ್ವ ಭೀಮರಾಯನಿಗೂ ಅಚ್ಚುಮೆಚ್ಚಿನವಳಾಗಿದ್ದಳು.

ರಾಜೂ ಎಲ್ಲರ ಅಪ್ಪಣೆ ಪಡೆದುಕೊಂಡು ಆ ದಿನ ಹೊರಟುನಿಂತಾಗ ವಿಠ್ಠಲನು ಅಲ್ಲಿ ಕಾಣಲಿಲ್ಲ.

ನೀಲವ್ವನೂ ಅಲ್ಲಿ ಇರಲಿಲ್ಲ.

ಭೀಮರಾಯನಿಗೆ ಇದು ಮುಳ್ಳುಚುಚ್ಚಿದಂತಾಯಿತು.

ರಾಜೂವಿಗೆ ವ್ಯಥೆ ಎನ್ನಿಸಿದರೂ ಅವನು ತೋರಗೊಡಲಿಲ್ಲ.

ಸುಧಾ ಅಣ್ಣನ ಕಾಲಿಗೆಬಿದ್ದು ನಗುತ್ತಲೇ,

" ಹೊಟ್ಟೆತುಂಬಾ ಊಟಮಾಡು ರಾಜಣ್ಣ ! ನಿನ್ನ ವಿಚಾರ ಸೂಕ್ತವಾಗಿಲ್ಲ. ಎಲ್ಲರೂ ಸಮಾನರಾಗಿದ್ದರೆ ಎಲ್ಲರೂ ಕಾಲೇಜಕ್ಕೆ ಹೋಗಬೇಕಾಗಿತ್ತು. ಹಾಗೆ ಆಗಲಿಲ್ಲ. ಬುದ್ಧಿಯಲ್ಲಿಯೂ ಹೆಚ್ಚುಕಡಿಮೆ ಇರುತ್ತದೆ. ತಿಳಿಯಿತೇ" ಎಂದಳು.

ತಂಗಿಯ ಮಾತುಗಳನ್ನು ಕೇಳಿ ರಾಜೂ ಮನಃಪೂರ್ವಕವಾಗಿ ನಕ್ಕು ಹೇಳಿದ.

" ನಿನಗೊಬ್ಬನನ್ನು ಗೊತ್ತುಮಾಡುತ್ತೇನೆ ಸುಮ್ಮನಿರು "

ಎಂದು ಚೇಷ್ಟೆ ಮಾಡಿದನು.

ಸುಧಾಳ ಮುಖದಲ್ಲಿ ಬಣ್ಣ ಮಿನುಗಿತು.

ಕಾಶೀಬಾಯಿ,ಕಾಂತಾಬಾಯಿ ಬಂದು ಹೊರಗೆ ನಿಂತರು. ಅವರಲ್ಲಿಯೂ ವಿಠ್ಠಲನು ಈ ಸಮಯದಲ್ಲಿ ಇಲ್ಲದುದಕ್ಕಾಗಿ ಕಳವಳ ಮೂಡಿತ್ತು.

ಕಾಶೀಬಾಯಿ ಪಿಸುಮಾತಿನಲ್ಲಿ ತಂಗಿಗೆ ಹೇಳಿದಳು.

" ಈ ಚಾಂಡಾಳಿ ಏನು ಮಾಟ ಮಾಡಿರುವಳೊ ?

ಭೀಮರಾಯನ ಕಿವಿವರೆಗೆ ಈ ಮಾತುಗಳು ಬಿದ್ದವು. ಅವನೊಮ್ಮೆ ಹೆಂಡತಿಯ ಕಡೆಗೆ ನೋಡಿದನು ಮಾತ್ರ.

ರಾಜೂ ಎಲ್ಲರಿಗೂ ನಮಸ್ಕಾರಮಾಡಿ ಹೊರಟುನಿಂತನು. ಇನ್ನೇನು ಗಾಡಿಯನ್ನು ಏರತಕ್ಕವನು ಅಷ್ಟರಲ್ಲಿ ವಿಠ್ಠಲ ಓಡುತ್ತ ಬರುವದು ಎಲ್ಲರಿಗೂ ಕಂಡಿತು.

" ಭಾವಜಿ ಬಂದರು ಕಾಶೀಬಾಯಿ ಕೂಗಿ ಹೇಳಿದಳು.

ಓಡುತ್ತ ಬಂದ ವಿಠ್ಠಲನ ಮೈ ಬೆವೆತು ಒದ್ದೆಯಾಗಿತ್ತು. ಅವನ ಶರ್ಟು ಬೆವರಿನಿಂದ ತೋಯ್ದು ದೇಹಕ್ಕೆ ಅಂಟಿಕೊಂಡಿತ್ತು.

ಅವನ ಕೈಯಲ್ಲಿ ಒಂದು ತುಂಬಿದ ಕೈಚೀಲವಿತ್ತು.

ಇವನನ್ನು ನೋಡಿದ ಭೀಮರಾಯನು ಹುಬ್ಬುಗಂಟಿಕ್ಕಿ ಹೇಳಿದನು,

"ರಾಜೂ ಈ ಸಮಯಕ್ಕೆ ಹೋಗುತ್ತಿರುವದು ನಿನಗೆ ಗೊತ್ತಿದ್ದರೂ ಎಲ್ಲಿ ಹೋಗಿದ್ದರೂ ಎಲ್ಲಿ ಹೋಗಿದ್ದಿ ಹೇಳು? ಯಾವ ಕೆಲಸವನ್ನು ಯಾವ ಹೊತ್ತಿನಲ್ಲಿ ಮಾಡಬೇಕೆಂಬುವದನ್ನು ತಿಳಿದುಮಾಡಬೇಕು.

ಅಣ್ಣನ ಈ ಮಾತನ್ನು ಕೇಳಿ ವಿಠ್ಠಲನು ಅಪ್ರತಿಭನಾಗಲಿಲ್ಲ. ಅವನು ಒಂದು ಕೈಯಿಂದ ಬೆವರನ್ನು ಒರಸಿಕೊಳ್ಳುತ್ತ ಹೇಳಿದ

"ನಾನು ಇವನ ಸಲುವಾಗಿಯೇ ಹೋಗಿದ್ದೆ ಅಣ್ಣ! ಹುಡುಕಿಕೊಂಡು ಬರಲು ತುಸು ತಡವಾಯಿತು.

"ಏನು ಹೀಗೆಂದರೆ?

"ರಾಜೂ ಎಳೆ ಸವತೆಕಾಯಿಯೆಂದರೆ ಪ್ರಾಣಕೊಡುತ್ತಾನೆ. ತೋಟದಲ್ಲಿ ಎಳೆ ಕಾಯಿಗಳು ಇರಲಿಲ್ಲ. ನೀಲಿಯನ್ನು ರಾನುಭೋಗರ ತೋಟಕ್ಕೆ ಕಳಿಸಿ ಕಾಯಿಗಳನ್ನು ತರಿಸಬೇಕಾಯಿತು. ಪಟ್ಟಣದಲ್ಲಿ ಸಿನೇಮಾದ ಬಾಗಿಲ ಮುಂದೆ ಸುಟ್ಟು ಇಟ್ಟ ಕಪ್ಪ ಸೆಲಗಡಲೆಯನ್ನು ಪ್ರೀತಿಯಿಂದ ರಾಜೂ ತಿನ್ನುತ್ತಿರುವದು ನನಗೆ ಗೊತ್ತು. ತೋಟದಲ್ಲಿ ಹೇಗೂ ಹಸಿಯ ಸೆಲಗಡಲೆಗಳಿದ್ದವು. ನೀಲಿಯಿಂದ ಕಿಚ್ಚುಮಾಡಿಸಿ ಅವುಗಳನ್ನು ಸುಟ್ಟುತರಲು ತಡವಾಯಿತು. ಗೋವಿನ ಜೋಳದ ತೆನೆ ಹಾಲುತುಂಬಿ ನಿಂತದ್ದು ಅರಿವಾಯಿತು. ಪಟ್ಟಣದಲ್ಲಿ ಇವು ಅಪರೂಪ. ಅದಕ್ಕೆಂತಲೇ ನಾಲ್ಕು ಎಳೆಯ ಹಾಲು ತೆನೆಗಳನ್ನು ಕಿಚ್ಚಿನಲ್ಲಿ ಬೇಯಿಸಿ ಬೇಸಿಯನ್ನು ತರಲು ತಡವಾಗದೇ ಏನು ಮಾಡೀತು.

ಭೀಮಣ್ಣ! ಅಂತೂ ಸರಿಯಾದ ಸಮಯಕ್ಕೆ ಬಂದೆ.

ಎನ್ನುತ್ತ ವಿಠ್ಠಲನ ಕೈಯಲ್ಲಿಯ ಕೈಚೀಲವನ್ನು ಗಾಡಿಯೊಳಕ್ಕೆ ಇಟ್ಟನು. ಅವನಲ್ಲಿ ಕೃತಕೃತ್ಯಭಾವ ಮೂಡಿತ್ತು.

ವಿಠ್ಠಲ ಮಾತುಗಳನ್ನು ಕೇಳಿ ಭೀಮಣ್ಣನ ಹೃದಯ ತುಂಬಿಬಂದಿತು. ಈ ಸೋದರಪ್ರೇಮವನ್ನು ಅವನು ಅತ್ಯಂತ ಅಮೂಲ್ಯವಾಗಿ ಕಂಡನು.

ಬಾಳಣ್ಣನಂತೂ ಆಗಲೇ ಕರಗಿ ನೀರಾಗಿದ್ದನು.

ರಾಜೂನ ಕಣ್ಣುಗಳೊಳಗಿಂದ ಪಳಕ್ಕನೇ ನೀರು ಚಿಮ್ಮಿದವು.

ಅವನು ವಿಠ್ಠಲನ ಪಾದಗಳ ಮೇಲೆ ಹಣೆಯಿಟ್ಟು,

"ಹೋಗಿ ಬರುತ್ತೇನೆ ಅಣ್ಣಾ!

ಎಂದನು.

ವಿಠ್ಠಲನು ರಾಜೂನನ್ನು ತೆಕ್ಕೆಯಲ್ಲಿ ಹಿಡಿದುಕೊಂಡು ಸಣ್ಣ ಮಗುವಿನ ಹಾಗೆ ಅತ್ತುಬಿಟ್ಟನು.

ಈ ದೃಶ್ಯ ಅತ್ಯಂತ ಹೃದಯಸ್ಪರ್ಶಿಯಾಗಿತ್ತು.

ಸೋದರಿಕೆ ಅಲ್ಲಿ ನಿರ್ಮಲವಾಗಿ ಹರಿದಿತ್ತು.

ಅದು ಪವಿತ್ರ ಗಂಗಾಜಲವಾಗಿತ್ತು.

೬

ಆ ದಿನ ಹೊತ್ತು ಮುಳುಗುವ ಸಮಯವಾದರೂ ನೀಲಿ ಮನೆಗೆ ಬರಲಿಲ್ಲ. ವಿಠ್ಠಲ ಬೇರೆ ಆಳುಗಳನ್ನು ಈ ಬಗ್ಗೆ ವಿಚಾರಿಸಿದಾಗ ಅವರಿಂದ ಯಾವ ಸುದ್ದಿಯೂ ತಿಳಿಯಲಿಲ್ಲ.

ಇಬ್ಬರೂ ಅತ್ತಿಗೆಯರನ್ನು ಕೇಳಿದ.

" ಅವಳು ಬರದಿದ್ದರೆ ಮನೆಗೆಲಸ ನಿಂತುಹೋಗುತ್ತದೇನು ?

ಕಾಂತಾಬಾಯಿ ಹುಬ್ಬು ಗಂಟುಹಾಕಿ ಕೇಳಿದಳು.

" ಅವಳು ಬರಲಿಲ್ಲವೆಂದು ನೀವೇಕೆ ಹೀಗೆ ಹುಚ್ಚಿದ್ದು ಹರಿಯಬೇಕು?

ಕಾಶೀಬಾಯಿ ಮೈದುನನ್ನು ಪ್ರತಿ ಕೇಳಿದಳು.

" ಆದರೆ ಅವಳು ಒಮ್ಮೆಲೇ ಬಾರದಿದ್ದುದು ಮಾತ್ರ ವಿಚಿತ್ರವಾಗಿದೆ– ಅತ್ತಿಗೆ.

ಚಿಂತಾಕುಲನಾದವನಂತೆ ವಿಠ್ಠಲ ಹೇಳಿದ.

" ಅವಳು ಇಲ್ಲದಿದ್ದರೆ ಮತ್ತೊಬ್ಬಳು. ಗೌಡರ ಮನೆಯಲ್ಲಿ ಕೆಲಸ ಮಾಡಲು ಸಾವಿರ ಹೆಣ್ಣಾಳುಗಳು ಒಂಟಿಗಾಲಿನ ಮೇಲೆ ಸಿದ್ಧವಾಗಿರುತ್ತವೆ.

" ಆದರೆ ಒಮ್ಮೆಲೇ ನೀಲಿಗೆ ಏನಾಯಿತು ?

" ಅವಳಿಗೆ ಯಾವ ಧಾಡಿಯಾದರೂ ಅದರ ಬಗ್ಗೆ ಗೌಡರಾದ ನೀವು ಹೆಚ್ಚು ವಿಚಾರಮಾಡುವ ಅಗತ್ಯವಿಲ್ಲ. ಕೆಲಸ ಬೇಕಾಗಿದ್ದರೆ ಬರುತ್ತಾಳೆ ಇಲ್ಲದಿದ್ದರೆ ಇಲ್ಲ.

" ಅವಳಿಗೆ ಏನಾದರೂ ದೇಹಾಲಸ್ಯವಾಗಿರಬೇಕು.

" ಅವಳಿಗೇನು ಬೇನೆ ತುಂಡಾಗಿದ್ದಾಳೆ.

" ಗುಂಡು ಬೋಲ ಬಗರಿಯಾಗಿದ್ದಾಳೆ. ಗಯ್ಯಾಳಿ !

ಕಾಂತಾಬಾಯಿ ತನ್ನ ಸಿಡುಕನ್ನು ತೋರಿದಳು.

" ನಾನು ಅವಳ ಮನೆಯ ವರೆಗಾದರೂ ಹೋಗಿ ನೋಡಿಬರಲೇನು ಅತ್ತಿಗೆ! ನನಗೇಕೋ ಸಮಾಧಾನವೇ ಆಗಲೊಲ್ಲದು.

ಅತ್ತ ಇತ್ತ ಎಡೆಯಾಡುವ ವಿಠ್ಠಲನು ಗಕ್ಕನೆ ನಿಂತು ಕೇಳಿದನು.

ನೀಲಿ ಬರಲಿಲ್ಲವೇಕೆಂಬ ಕೊರಗಿನಲ್ಲಿ ಅವನ ಮುಖ ಬಾಡಿ ಬಕ್ಕ ಲಾಗಿತ್ತು.

“ಬಹಳ ಒಳ್ಳೆಯದನ್ನು ಮಾಡುವಿರಿ ಭಾವಜಿ! ಯಾರಾದರೂ ಕೇಳಿದರೆ ನಕ್ಕುಗಿಕ್ಯಾರು. ಗೌಡರ ಮಕ್ಕಳಾದ ನೀವು ತೊತ್ತಿನ ಮನೆಯ ತನಕ ಹೋಗಬೇಕೆ? ಇಂಥದೂ ಉಂಟೆ? ಆ ಒಯ್ಯಾರಿ ನಿಮ್ಮ ಕತೆಯ ಮೇಲೆಯೇ ಏರಿಕುಳಿತಂತೆ ಕಾಣುತ್ತದೆ. ಇದು ಮರ್ಯಾದೆಯಲ್ಲ. ನಮ್ಮ ಮನೆತನಕ್ಕೆ ಇದು ಅವಲಕ್ಷಣವಾಗಿವೆ ಮುಂಜಾವಿನಿಂದ ನೋಡುತ್ತೇನೆ. ನೀವು ಒಂದೇ ಸಮನೆ ಅವಳ ನಾಮಸ್ಮರಣೆಯನ್ನೇ ಮಾಡುತ್ತಿರುವಿರಿ. ನಾಳೆ ಗೌಡರು ಮನೆಗೆ ಬರುವ ಬೀಗರ ಮುಂದೆ ಹರಟೆಯಾದರೆ ಏನು ಗತಿ? ಅವಳ ವಿಚಾರವನ್ನು ಬಿಟ್ಟುಬಿಡಿರಿ. ಕಾಲೊಳಗಿನ ಚಪ್ಪಲಿ ಎಲ್ಲಿ ಇರಬೇಕೋ ಅಲ್ಲಿಯೇ ಇರಬೇಕು. ಚಪ್ಪಲಿ ಸುಂದರವಾಗಿದ್ದರೇನಾಯಿತು? ಅದನ್ನು ತಲೆಯ ಮೇಲೆ ಇಟ್ಟುಕೊಳ್ಳಬಹುದೆ?

ಕಾಶೀಬಾಯಿ ತನ್ನ ಹಿರಿಯತನದ ದರ್ಪದಲ್ಲಿ ಒಮ್ಮೆ ಬಡಬಡ ನುಡಿದುಬಿಟ್ಟಳು.

“ನಿಮ್ಮ ಮಾತು ನನಗೆ ಅರ್ಥವೇ ಆಗುತ್ತಿಲ್ಲ ಅತ್ತಿಗೆ! ನೀಲಿ ತೊತ್ತಾದರೇನು? ನಮಗೆ ಸಂಬಂಧಪಟ್ಟವಳೇ ಅಲ್ಲವೇನು? ನಾನು ತಲೆಯ ಮೇಲೆ ಏರಿಸಿಕೊಂಡಿರುವೆನೆಂದರೆ ಏನು? ಹಾಗೆ ಕೇಳಿದರೆ ಭೀಮಣ್ಣ ಅವಳನ್ನು ಹೆಚ್ಚು ಪ್ರೀತಿಸುತ್ತಾನೆ. ನಾಲ್ಕು ದಿನಗಳ ಹಿಂದೆ ಅಣ್ಣನೇ ಅವಳಿಗೆ ಇಂಚಲಕರಂಜಿ ಗುಲಾಬಿಬಣ್ಣದ ಪತ್ತಲಗಳನ್ನು ತಂದುಕೊಡಲಿಲ್ಲ ವೇನು? ತೊತ್ತಿನ ಬಗ್ಗೆ ನಾನು ವಿಚಾರಿಸುತ್ತಿರುವದು ಅಪರಾಧವೇ?

“ತೊತ್ತಾಗಿ ಬಂದವಳು ಯಜಮಾನಿತಿಯಾಗಬಾರದಲ್ಲ!

ಕಾಂತಾಬಾಯಿ ಕಟ್ಟಿಗೆ ಮುರಿದಂತೆ ಮಾತಾಡಿ ಕಿಸಕ್ಕನೆ ನಕ್ಕಳು.

“ಏನು ನಿಮ್ಮ ಮಾತಿದು ಅತ್ತಿಗೆ!

“ಇದು ನನ್ನ ಮಾತಲ್ಲ ಮಾರಾಯರೆ! ಇದು ಎಲ್ಲರ ಮಾತು!

ನೀಲಿಯ ಬಗ್ಗೆ, ಅವಳ ಶೀಲದ ಬಗ್ಗೆ ನಿಮಗೆ ಸಂದೇಹ ಬಂದಿದೆಯೆ?

“ಅವಳೇನು ಗರತಿ ಗಂಗವ್ವಳೇನು?

“ಎಂತಹ ತಪ್ಪುವಿಚಾರ ಮಾಡತೊಡಗಿದ್ದೀರಿ ನೀವು? ತೊತ್ತಾದ ವಳು ಒಳ್ಳೆಯ ಬಾಳನ್ನು ಬಾಳುವದು ಸಾಧ್ಯವಿಲ್ಲವೆಂದು ದೊಡ್ಡಮನೆಯ ಹೆಂಗಸಾರದ ನೀವು ಅನುಮಾನ ತಾಳಬಹುದೆ? ಇದು ಸಂಕುಚಿತವಾದ ಮನೋಭಾವ ಇದರಲ್ಲಿ ವ್ಯರ್ಥವಾದ ಭೀತಿ ಇದೆ. ನೀವು ನನ್ನನ್ನು ಗುರಿ ಮಾಡಿದ್ದೀರಿ. ಈ ಆಪಾದನೆಯಿಂದ ನಾನು ಪಾರಾಗಲು ಅವಳನ್ನು ಕರೆದು

ಕೊಂಡು ಬಂದೇ ತೋರಿಸುತ್ತೇನೆ. ಪಾತಿವ್ರತ್ಯ ಕೇವಲ ಮನೆತನಸ್ಥರಿಗೆ ಮಾತ್ರ. ಮೀಸಲಿಲ್ಲ. ಅದನ್ನು ಬಾಳುವ ಸಾಮಾನ್ಯರೂ ಇದ್ದಾರೆ. ಹಾಗೆ ಕೇಳಿದರೆ ಸಾಮಾನ್ಯರಲ್ಲಿಯೇ ಈ ಸ್ವಭಾವಗುಣ ಯಾವಾಗಲೂ ಎದ್ದು ಕಾಣುತ್ತಿರುತ್ತದೆ. ಮನೆತನದ ಹಿರಿಯರಾಗಿ ನೀವು ಹೀಗೆ ಮಾತಾಡುವದು ಕುಲಗೌರವವಲ್ಲ ಬಿಡಿರಿ"

ಎನ್ನುತ್ತ ವಿಠ್ಠಲ ನೀಲವ್ವನನ್ನು ಕರೆದುಕೊಂಡುಬರಲು ಹೊರಟುಬಿಟ್ಟ.

ಪಡಸಾಲೆಯ ಕೋಣೆಯಲ್ಲಿ ಕುಳಿತ ಭೀಮರಾಯ ತಮ್ಮನ ಈ ಎಲ್ಲ ಮಾತುಗಳನ್ನು ಕೇಳಿದ್ದ. ಅವನ ತಲೆ ಆಗಲೇ ಬಿಸಿಯಾಗಿಬಿಟ್ಟಿತು. ಅವನು ಕೂಡಲೇ ಕುಳಿತಲ್ಲಿಂದ ಕೂಗಿದ,

" ವಿಠ್ಠಲ!

ವಿಠ್ಠಲ ತಡೆದುನಿಂತು ಕೇಳಿದ.

" ಕೂಗಿದೆಯ ಅಣ್ಣಾ!

" ಒಳಗೆ ಬಾ!

ವಿಠ್ಠಲ ಆಜ್ಞೆ ಪಾಲಿಸಿದ. ಅವನು ಒಳಗೆಹೋಗಿ ನಿಂತಕೂಡಲೇ ಭೀಮರಾಯ ದನಿ ಏರಿಸಿ ಕೇಳಿದ.

" ಎಲ್ಲಿ ಹೊರಿಟಿದ್ದಿ ?

" ನಾನು....ನಾ....ಎಲ್ಲಿಗೂ ಹೊರಟಿರಲಿಲ್ಲ.

" ಅಡಿಗೆಯ ಮನೆಯಲ್ಲಿ ಆಡಿದ ಮಾತುಗಳನ್ನೆಲ್ಲ ನಾನು ಕೇಳಿದ್ದೇನೆ. ನೀನು ಈಗ ಎಲ್ಲಿ ಹೊರಟಿರುವಿ ಎಂಬುದೂ ನನಗೆ ಗೊತ್ತಿದೆ. ಹೀಗೆ ಮಾಡಲು ನಿನಗೆ ನಾಚಿಕೆ ಬರಬೇಕಾಗಿತ್ತು.

ವಿಠ್ಠಲ ಮುಖವೆತ್ತಿ ಅಣ್ಣನನ್ನೊಮ್ಮೆ ನೋಡಿ ನಿರ್ಧಾರದ ದನಿಯಲ್ಲಿ ಕೇಳಿದ.

" ಮನೆಯ ತೊತ್ತಿನ ಯೋಗಕ್ಷೇಮ ವಿಚಾರಿಸುವದು ನಾಚಿಕೆ ಪಡುವ ಮಾತೆಂದು ನಾನೇನು ತಿಳಿದಿಲ್ಲ ಅಣ್ಣಾ! ಅದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

" ನನಗೆಲ್ಲಾ ತಿಳಿದಿದೆ. ಹೆಚ್ಚು ಮಾತಾಡಬೇಡ. ಸುಮ್ಮನೆ ಒಳಗೆ ಹೋಗಿ ಕುಳಿತುಕೋ ...

ಭೀಮರಾಯ ಗದ್ದರಿಸಿ ಹೇಳಿದನು.

" ಆದರೆ ನೀಲಿ....

“ ನೀಲಿಯೋ ಕಾಳಿಯೋ ಅವಳನ್ನು ತೆಗೆದುಕೊಂಡು ನಿನಗೇನು ಮಾಡುವದಿದೆ? ಯಾಕೆ ಅವಳ ಹೆಸರನ್ನು ಬಗುಳುತ್ತೀ. ಹಿರಿಯರಾದ ಅಣ್ಣಂದಿರು ಇಬ್ಬರಿದ್ದಾರೆ. ಅವರು ಎಲ್ಲವನ್ನೂ ನೋಡಿಕೊಳ್ಳುತ್ತಿರುತ್ತಾರೆ. ನಿನಗೆ ಮನೆಯ ಮೇಲ್ವಿಚಾರಣೆ ಮಾಡಲು ಹೇಳಿದರೆ.... ತೊತ್ತಿನ ಕೂಡ....

“ ತೊತ್ತಿನ ಕೂಡ........ಏನು ?

“ ಸುಮ್ಮನೆ ಹೋಗು.

“ ಅದನ್ನು ಹೇಳದೇ ನಾನು ಹೋಗುವಂತಿಲ್ಲ.

“ ಈ ಉದ್ಧಟತನ ನನ್ನ ಮುಂದೆ ನಡೆಯಲಾರದು ತಿಳಿಯಿತೇನು ?

“ ಇದರಲ್ಲಿ ನನ್ನ ಗೌರವದ ಪ್ರಶ್ನೆಯೇ ಇದೆ. ಗೌರವದ ಮಾತು ಉದ್ಧಟತನದ ಮಾತು ಹೇಗಾದೀತು ? ನೀನು ರೈತಾಳುಗಳನ್ನೂ, ವಾಲೀಕಾರರನ್ನೂ, ಸನದೀ ಸಿಪಾಯಿಗಳನ್ನೂ ಬೆದರಿಸಿದಂತೆ ನನ್ನನ್ನೂ ಬೆದರಿಸುತ್ತೀ. ಇದು........ಯೋಗ್ಯವೇನು ಹೇಳು ?

“ ಅಯೋಗ್ಯ ವ್ಯವಹಾರ ಮಾಡಿದ ನೀನು ಇದನ್ನು ಕೇಳಬಾರದು ?

“ ಆ ಅಯೋಗ್ಯ ವರ್ತನೆಯಾದರೂ ಯಾವುದು ಅಣ್ಣ ?

“ ಅಡಿಗೆಯ ಮನೆಯಲ್ಲಿ ಅತ್ತಿಗೆ ಹೇಳಿದ್ದು........

“ ಅದು ಬುಡಮುಟ್ಟ ಸುಳ್ಳು.

“ ಸುಳ್ಳು ಸುಳ್ಳೇ ಸುಳ್ಳು ಹುಟ್ಟುವದಿಲ್ಲ.

“ ಅಂದರೆ ನಿಮಗೆ ನನ್ನ ಮೇಲೆ ವಿಶ್ವಾಸವಿಲ್ಲ....

“ ನಾನು ಹಾಗೆ ಹೇಳಲಿಲ್ಲ.

“ ಮತ್ತೆ ?

“ ನನ್ನಿಂದ ವಿವರಗಳನ್ನು ಪಡೆಯುತ್ತೀಯೇನು ? ನಾನು ನಿನಗೆ ಸ್ಪಷ್ಟವಾಗಿ ಹೇಳುತ್ತೇನೆ ಕೇಳು. ನಿನ್ನ ನಡತೆ ನನಗೆ ಸರಿಬರುವದಿಲ್ಲ. ನಿನ್ನಲ್ಲಿ ಕೆಲಸಮಾಡುವ ಹವ್ಯಾಸವೇ ಇಲ್ಲದಾಗಿದೆ. ಈ ವಯಸ್ಸಿನಲ್ಲಿ ನೀನು ವ್ಯರ್ಥವಾಗಿ ಕಾಲಹರಣಮಾಡುವದು ಏನನ್ನು ಸೂಚಿಸುತ್ತದೆ ? ಇಲ್ಲದ ಕಾರುಭಾರವನ್ನು ಮಾಡುವದು ಕೆಲಸವಲ್ಲ ತಿಳಿಯಿತೆ ? ಆ ತೊತ್ತಿನ ಮಗಳನ್ನು ಕೆಲಸದಿಂದ ತೆಗೆದುಹಾಕಿದ್ದೇನೆ. ಅವಳು ಈ ಮನೆಗೆ ಇನ್ನು ಮುಂದೆ ಬರಲಾರಳು.

“ ಇದೇನು ಅಣ್ಣ ? ನೀಲಿ ಮಾಡಿದ ಅಪರಾಧವಾದರೂ ಏನು ?

" ಅದನ್ನು ಕೇಳುವ ಅಧಿಕಾರ ನಿನ್ನದಲ್ಲ.

" ಸುಮ್ಮಸುಮ್ಮನೆ ಒಬ್ಬ ಹೆಣ್ಣುಮಗಳ ಹೊಟ್ಟೆಯಮೇಲೆ ಕಾಲು ಕೊಡಬೇಕೆ ?

" ಈ ವಿಚಾರವೂ ನನಗೆ ಸೇರಿದ್ದು.

" ಆದರೆ ನೀಲಿಯನ್ನು....................

" ಹೆಚ್ಚು ಮಾತಾಡಬೇಡ.

" ಅಣ್ಣಾ !

ಅದೇವೇಳೆಯಲ್ಲಿ ಮನೆಯಮುಂದೆ ಸವಾರಿಯ ಬಂಡಿಯೊಂದು ನಿಂತ ಸಪ್ಪಳವಾಯಿತು.

" ಓಹೋ. ಅವರು ಬಂದರೆಂಬಂತೆ ಕಾಣುತ್ತದೆ. ಹೋಗು ವಿಠ್ಠಲ! ಬಾಳಣ್ಣನಿಗೆ ಕೇದಿಗೆಯೂರ ಕೇಶವರಾಯರು ಬಂದರೆಂದು ಹೇಳು.

ಎನ್ನುತ್ತ ಭೀಮರಾಯನು ಬಾಗಿಲಕಡೆಗೆ ನಡೆದನು.

ವಿಠ್ಠಲನಿಗೆ ಈಗ ಯಾವ ಅವಕಾಶವೂ ಸಿಕ್ಕಲಿಲ್ಲ. ಭೀಮಣ್ಣನು ಹೇಳಿದಂತೆ ಕೇಳಲು ಒಳಗೆ ಮಾತ್ರ ನಡೆದನು.

ಆ ದಿನ ಕೇಶವರಾಯರಿಗೆ ಎಲ್ಲಿಲ್ಲದ ಆತಿಥ್ಯ ನೆರವೇರಿತು. ಬಳವಂತ ಗೌಡರು ಅವರಿಗೆ ರಾಜೋಪಚಾರ ನಡೆಯಿಸಿದರು.

ಅತಿಥಿಗಳು ಸಂಜೆಯ ಮುಂದೆ ಹೊರಡುವಾಗ ಭಾನುವಾರ ದಿನ ಕರೆದುಕೊಂಡು ಬರುವದಾಗಿ ಹೇಳಿದುದನ್ನು ವಿಠ್ಠಲನು ಕೇಳಿದನು.

ಅವನಿಗೆ ಯಾವ ಅರ್ಥವೂ ಆಗಲಿಲ್ಲ.

ಅವನ ಮನಸ್ಸನ್ನು ನೀಲಿ ಆವರಿಸಿದ್ದಳು. ಮನೆಯಲ್ಲಿ ತನಗೆ ಅವಮಾನವಾಯಿತೆಂಬ ಭಾವ ಅವನ ಎದೆಯನ್ನು ಸುಡುತ್ತಿತ್ತು.

ಸಂಜೆಯಾಗುತ್ತಲೇ ಅವನು ತೋಟದ ಕಡೆಗೆ ಅಡ್ಡಾಡಲು ಹೊರಟನು.

ಅವನ ಹಿಂದೆಯೇ ಸೋಮಪ್ಪನೂ ಸಾವಕಾಶವಾಗಿ ನಡೆಯ ತೊಡಗಿದನು.

ಅರಳೀಕಟ್ಟೆಯಮೇಲೆ ಕುಳಿತ ವಿಠ್ಠಲನು ವಿಚಾರಮಗ್ನನಾದವನಂತೆ ಕುಳಿತುಬಿಟ್ಟನು.

" ಇದೇನು ವಿಠ್ಠಲಗೌಡರು ವಿಚಾರದಲ್ಲಿ ಕುಳಿತುಬಿಟ್ಟಿದ್ದಾರಲ್ಲ !

ಕೃತಕನಗೆಯನ್ನು ಬೀರುತ್ತ ಸೋಮಪ್ಪ ಅಲ್ಲಿಗೇ ಬಂದನು.

" ಬಾ ! ಸೋಮಪ್ಪ ! ವಿಚಾರವೆಂದರೇನು ? ಏನೋ ಬೇಸರಿಕೆ ಯಾಯಿತು. ಇಲ್ಲಿ ಬಂದುಬಿಟ್ಟೆ.

" ಮುಂಜಾನೆ ನಡೆದುದನ್ನು ನಾನೂ ಕೇಳಿದೆ ವಿಠ್ಠಲಗೌಡ ! ಭೀಮ ರಾಯರ ಸ್ವಭಾವವೇ ಹಾಗೆ. ಒಮ್ಮೆಲೇ ಯಾವ ವಿಚಾರವನ್ನೂ ಮಾಡದೆ ದುಡುಕಿಬಿಡುವರು. ನೀನೇನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವ ಕಾರಣವಿಲ್ಲ. ಆದರೂ ಮನಸ್ಸು ಎಲ್ಲಿ ಕೇಳುತ್ತದೆ. ಪಾಪ ! ನಿನ್ನ ಮನಸ್ಸಿನ ವ್ಯಥೆಯನ್ನು ನಾನು ಊಹಿಸಬಲ್ಲೆ.

ವಿಠ್ಠಲನೊಮ್ಮೆ ರುಕ್ಷನಾಗಿ ಸೋಮಪ್ಪನನ್ನು ನೋಡಿದ. ಆ ಕಣ್ಣು ಗಳಲ್ಲಿ ಯಾವ ಭಾವವೂ ಮೂಡಿರಲಿಲ್ಲ.

ವಿಠ್ಠಲನ ಮೌನದಲ್ಲಿ ಸೋಮಪ್ಪನು ಬೇರೆ ಭಾವವನ್ನು ಕಲ್ಪಿಸಿ ಅಲ್ಲಿ ವಿಷಬೀಜವನ್ನು ಬಿತ್ತಲು ಯೋಗ್ಯಕಾಲ ಬಂದಿದೆಯಾಗಿ ಭಾವಿಸಿ ಉತ್ತೇಜಿತ ನಾದನು.

" ನೀನೇನು ಅಪ್ರಬುದ್ಧನಾದ ಮನುಷ್ಯನೇ. ನಿನ್ನ ಜವಾಬುದಾರಿ ನಿನಗೆ ತಿಳಿಯದೇ ? ಮಾತು ಹೀಗಿರಲು ಭೀಮರಾಯನು ನಿನ್ನ ಮೇಲೆ ಇಲ್ಲದ ಹಿರಿಯತನವನ್ನು ಚಲಾಯಿಸುವದು ನಗೆಗೇಡಾಗಿದೆ. ನೀನು ಸಂಭಾವಿತನೆಂದು ಸುಮ್ಮನಿದ್ದಿ....ನಾನೇ ನೀನಾಗಿದ್ದರೆ........

" ಇರಲಿ ಬಿಡು ಸೋಮಪ್ಪ. ಇದು ನನಗೆ ಸಂಬಂಧಿಸಿದ ಮಾತು.

" ಅಂತೆಯೇ ನಾನು ನಿನಗೆ ಹೇಳಬೇಕಾಗಿದೆ.

" ಹೇಳಿ ಆಯಿತಲ್ಲ !

" ಭೀಮರಾಯರು ಸರಿಪಾಲುದಾರನಾದ ನಿನ್ನನ್ನು ಈ ರೀತಿ ಅವಹೇಳನೆ ಮಾಡಿ ಏನು ಸುರಿದುಕೊಳ್ಳುತ್ತಾರೊ ?

" ಅಣ್ಣನು ನನ್ನ ಅವಹೇಳನೆ ಮಾಡಲಿಲ್ಲ ಸೋಮಪ್ಪ !

" ಹೀಗೆ ಸುಮ್ಮನೆ ಒಪ್ಪು ಇಟ್ಟುಕೊಳ್ಳಬೇಡ ಬಿಡು. ಪಾಪ ! ನನಗಂತೂ ಮುಂಜಾವಿನಿಂದ ವಿಷಾದವೇ ಆಗಿದೆ.

" ನಿನಗೇಕೆ ವಿಷಾದವಾಗಬೇಕು ಸೋಮಪ್ಪ ?

" ನಾನೇನು ನಿನಗೆ ಹೊರಗಿನವನೇ ವಿಠ್ಠಲ ?

" ನೀನು ಒಳಗಿನವನಾಗಿ ಇಂತಹ ಮಾತುಗಳನ್ನು ಹೇಳಬೇಕಾಗಿತ್ತೇ? ಈ ಕ್ಷುದ್ರತನವು ನನ್ನಮುಂದೆ ತಡೆಯಲಾರದು ನೋಡು. ಮುಂಜಾವಿನ ವಿಷಯ ನನಗೂ ಭೀಮಣ್ಣನಿಗೂ ಸಂಬಂಧಿಸಿದ್ದು. ಇದರಲ್ಲಿ ನೀನೇಕೆ

ತಲೆ ಹಾಕಿ ಇಲ್ಲದ ಹೊಗೆಯನ್ನು ಎಬ್ಬಿಸತೊಡಗಿದ್ದೀ ಹೇಳು. ಇನ್ನೊಮ್ಮೆ ಅಣ್ಣ-ತಮ್ಮಂದಿರ ಬಗ್ಗೆ ನೀನು ಏನಾದರೂ ಹೇಳಲು ಪ್ರಯತ್ನಿಸಿದರೆ ನಿನ್ನ ತಲೆಬುರುಡೆಯನ್ನೇ ಹಾರಿಸೇನು ? ನಿನಗೆ ಬಿಟ್ಟಿಯ ಕೂಳುತಿಂದ ಅನ್ನ ಪಚನವಾಗುವಂತೆ ಕಾಣುವದಿಲ್ಲ. ಸುಮ್ಮನೆ ನಾಯಿಯ ಹಾಗೆ ಕೂಳು ತಿಂದು ಬೀಳುತ್ತಿದ್ದರೆ ಇರು. ಇಲ್ಲದಿದ್ದರೆ ನಿನ್ನ ಡೇರೆಯನ್ನು ಈ ದಿನವೇ ಕಿತ್ತುಕೊಂಡು ಹೋಗು. ಇಲ್ಲದ ಕಾರುಭಾರ ಮಾಡಬೇಡ. ಈ ದಿನವೇ ನಿನ್ನ ಪಾದಪೂಜೆ ಮಾಡುತ್ತಿದ್ದೆ. ಆದರೆ ಅತ್ತಿಗೆಯ ಮುಖ ನೋಡಿ ಸುಮ್ಮನೇ ಬಿಟ್ಟಿದ್ದೇನೆ. ಗೌಡರ ಮನೆಯಲ್ಲಿ ಬಿರುಕುಬಿಡಿಸುವ ನಿನ್ನ ಮೂಳೆಗಳನ್ನೇ ಪುಡಿಮಾಡಬೇಕು. ಸುಮ್ಮನೆ ಇಲ್ಲಿಂದ ಎದ್ದುಹೋಗು. ಹೂಂ! ಏಳು! ಇಲ್ಲದಿದ್ದರೆ ಇಲ್ಲಿಯೇ ನಿನ್ನನ್ನು ಬೀದಿಯ ನಾಯಿಯ ಹಾಗೆ ಬಡಿದು ಕೊಂದೇನು!"

ವಿಠ್ಠಲ ಅಬ್ಬರಿಸಿದನು.

ಸೋದರಿಕೆಯ ಸದ್ಭಾವ ಸಿಡಿಲಾಗಿತ್ತು. ಆ ಸಿಡಿಲು ತನ್ನ ಮೇಲೆ ಎರಗಿ ಸುಟ್ಟು ಭಸ್ಮಮಾಡಬಹುದೆಂಬ ಅರಿವಿನಲ್ಲಿ ಸೋಮಪ್ಪನ ಪರಿಸ್ಥಿತಿ ಸುಣ್ಣತಿಂದ ಮಂಗನಂತಾಯಿತು.

ಅವನು ಬೆದರಿ ಚಟ್ಟನೆ ಎದ್ದು ಹೇಳಿದನು.

" ಏನೋ ಒಂದು ಮಾತು ಹೇಳಬೇಕೆಂದು ಹೇಳಿದೆ. ನಿನ್ನ ಮನಸ್ಸಿಗೆ ಬಾರದಿದ್ದರೆ ಬಿಡು ಮಾರಾಯಾ! ಸುಮ್ಮನೇ ನನ್ನಮೇಲೆ ಸಿಟ್ಟಾಗಬೇಡ. ಇನ್ನುಮೇಲೆ ನಿನ್ನ ಉಸಾಬರಿಯನ್ನೇ ಮಾಡುವದಿಲ್ಲ ಆಯಿತಿಲ್ಲೊ ?

ತನ್ನ ಅಸ್ತಿತ್ವವನ್ನು ಆ ಮನೆಯಲ್ಲಿ ಇನ್ನೂ ಕಾಯ್ದುಕೊಳ್ಳಬೇಕೆಂಬ ಆಸೆಯಲ್ಲಿ ಸೋಮಪ್ಪ ಗತಿಗೇಡಿಯಂತೆ ನುಡಿದು ನಡೆದುಬಿಟ್ಟ.

ವಿಠ್ಠಲನು ಯಾವ ಮಾತನ್ನೂ ಆಡಲಿಲ್ಲ.

ಅವನ ಮನಸ್ಸು ಉದ್ವಿಗ್ನವಾಗಿತ್ತು. ಆದರೆ ಅದರಲ್ಲಿ ಅಣ್ಣನ ಬಗ್ಗೆ ಕೋಪವಿರಲಿಲ್ಲ. ನೀಲಿಯ ಬಗ್ಗೆ ಕನಿಕರವಿತ್ತು.

ತನ್ನನ್ನು ಮನೆಯಲ್ಲಿ ತಪ್ಪಾಗಿ ಭಾವಿಸಿದ್ದು ದುರ್ದೈವವೆಂದೇ ಅವನು ಭಾವಿಸಿದನು.

ನಾನು ನೀಲಿಯನ್ನು ಪ್ರೀತಿಯಿಂದ ಕಾಣುವದು ಅಗೌರವವೇ?

ಇದಕ್ಕಾಗಿ ಅವಳನ್ನು ಮನೆಯಿಂದ ಓಡಿಸಿದ್ದು ಸಾಧುವಾದುದೆ ?

ವಿಠ್ಠಲ ಬಹಳ ಹೊತ್ತಿನ ವರೆಗೆ ಆ ಕಟ್ಟೆಯನ್ನು ಬಿಟ್ಟು ಏಳಲಿಲ್ಲ.

ವಿಠ್ಠಲ ಮನೆಗೆ ಬಂದಾಗ ಪಡಸಾಲೆಯ ಕೋಣೆಯಲ್ಲಿ ದೀಪ ಧೌಳವಾಗಿ ಉರಿಯುತ್ತಿತ್ತು. ಇಬ್ಬರೂ ಅಣ್ಣಂದಿರು ಅದಾವುದೋ ಯೋಚನೆಯಲ್ಲಿ ಮಗ್ನವಾಗಿರುವಂತೆ ತೋರಿತು.

ಅವರ ಮಾತುಗಳು ತನ್ನ ಸುತ್ತಲೇ ಬಳಸಿರಬಹುದೆಂಬ ಸಂದೇಹವೂ ಅವನನ್ನು ಆವರಿಸಿತು. ಅವನು ಕೇಳಿದ ಒಂದೆರಡು ತುಂಡುಮಾತುಗಳೇ ಈ ಭಾವಕ್ಕೆ ಕಾರಣವಾಗಿರಬೇಕು.

"ನಿನ್ನ ಮಾತು ಸರಿಯಾಗಿದೆ ತಮ್ಮ! ಈ ಮದುವೆಯ ಮಾಸದಲ್ಲಿ ವಿಠ್ಠಲನ ಮದುವೆಯನ್ನು ಮಾಡಿಬಿಡೋಣ. ಹೇಗೂ ಕೇಶವರಾಯರು ಮಗಳನ್ನು ಕೊಡಲು ಮುಂದೆ ಬಂದಿದ್ದಾರೆ." ಬಳವಂತಗೌಡನ ಮಾತುಗಳು ಇವು.

"ಮದುವೆಯ ವಯಸ್ಸು ಬಂದ ಗಂಡಿಗೊಂದು ಮುಗುದಾಣವನ್ನು ಹಾಕಲೇಬೇಕು. ಈ ಭಾನುವಾರ ನಿಶ್ಚಯವನ್ನು ಮಾಡಿಯೇಬಿಡೋಣ.

"ನಿನ್ನ ಸಮ್ಮತಿಯೇ ನನ್ನ ಸಮ್ಮತಿ.

"ವಿಠ್ಠಲನು ಒಪ್ಪಬಹುದೆ ?

"ಗೌಡರ ಮನೆತನದಲ್ಲಿ ಗಂಡನ್ನು ಕೇಳಿ ಈವರೆಗೂ ಮದುವೆಯ ನಿಶ್ಚಯವಾಗಿಲ್ಲ ತಮ್ಮ. ವಿಠ್ಠಲನೇನು ನಮ್ಮನ್ನು ಮೀರಿನಡೆಯುವ ಹುಡುಗನಲ್ಲ.

ವಿಠ್ಠಲನಿಗೆ ಈಗ ಕೇಶವರಾಯರು ಬಂದುಹೋದದ್ದರ ಕಾರಣ ತಿಳಿಯಿತು.

ಮುಖದಲ್ಲಿ ಮಂದಹಾಸವೊಂದು ಮಿನುಗಿತು.

ಆ ಭಾನುವಾರ ಗೌಡರ ಮನೆಯಲ್ಲಿ ಅಸಾಧ್ಯವಾದ ಗಡಬಿಡಿ. ಕನ್ಯಾಪರೀಕ್ಷೆಯ ದಿನವದು. ಅಲ್ಲದೆ ಆ ದಿನ ತಾವು ಹೆಣ್ಣಿನ ಬೀಗರಿಗಿಂತ ಎಲ್ಲ ರೀತಿಯಿಂದಲೂ ಶ್ರೀಮಂತರೆಂದು ತೋರಿಸುವ ಹವ್ಯಾಸ ಬೇರೆ.

ಭೀಮರಾಯನ ಮೇಲ್ವಿಚಾರಣೆಯಲ್ಲಿ ಸಂದರ್ಶನದ ಕಾರ್ಯಕ್ರಮವು ಅತ್ಯಂತ ಯಶಸ್ವಿಯಾಗಿಯೇ ಜರಗಿತೆಂದು ಹೇಳಬೇಕು. ಊರ ಮುಂದಾಳುಗಳೆಲ್ಲ ಬಂದ ಬೀಗರೊಡನೆ ಸುಗ್ರಾಸಭೋಜನವನ್ನುಂಡರು. ರೈತಾಳುಗಳಿಗೊಂದು ಆ ದಿನ ಚಿಕ್ಕ ಮದುವೆಯ ಸಮಾರಂಭವೇ ಆದಂತಾಯಿತು.

ಕೇಶವರಾಯರ ಮಗಳಲ್ಲಿ ಯಾವ ಕುಂದನ್ನೂ ತೆಗೆಯುವಂತಿರಲಿಲ್ಲ. ನೋಡಲು ರೂಪವತಿಯಾಗಿದ್ದಳು. ಬಣ್ಣ ಬೆಡಗುಗಳಲ್ಲಿ ಅವಳಲ್ಲಿ ಆಧುನಿಕತೆ

ಇದ್ದರೂ ಜಮೀನುದಾರಿ ಸಂಪ್ರದಾಯವನ್ನು ಅದು ಪೂರ್ಣವಾಗಿ ಬಿಟ್ಟಿರಲಿಲ್ಲ. ಸ್ವಲ್ಪ ದರ್ಪದ, ಹಟಸಾಧಿಸುವ ಪ್ರಭಾವದಂತಿರುವ ಮುಖ ಹೊರಗಣ್ಣುಗಳಿಗೆ ಆಕರ್ಷಣೀಯವಾಗಿತ್ತು. ಕೇಶವರಾಯರ ಮಾತಿನಲ್ಲಿ ಅವಳು ಉತ್ತಮಗೃಹಿಣಿಯಾಗುವ ಎಲ್ಲ ಗುಣಗಳನ್ನು ಪಡೆದಿದ್ದಳು. ಹೆಸರು ಸರಳಾ.

ಸರಳಾ ಸುಂದರಿಯಾಗಿದ್ದಳು. ಅವಳು ವಿಠ್ಠಲನ ಮನಸ್ಸನ್ನೂ, ಹೃದಯವನ್ನೂ ತುಂಬಿದಳು.

ಇದನ್ನು ತಿಳಿದು ಭೀಮರಾಯನಿಗೂ ಸಂತೋಷವಾಯಿತು.

ಬಹಳ ಅರೆದಾಟ, ಚರ್ಚೆಗಳ ಪರಿಣಾಮವಾಗಿ ಕೇಶವರಾಯರು ವರದಕ್ಷಿಣೆಯೆಂದು ಏಳು ಸಾವಿರ ರೂಪಾಯಿಗಳನ್ನೂ ವರೋಪಚಾರವೆಂದು ಮೂರು ಸಾವಿರ ರೂಪಾಯಿಗಳನ್ನೂ ಕೊಟ್ಟು ವಿಜೃಂಭಣೆಯಿಂದ ಎರಡೂ ಕಡೆಯ ಖರ್ಚನ್ನು ತಾವೇ ಮಾಡಿ ಮಂಗಲಾಕ್ಷತೆಯನ್ನು ಹಾಕಿಕೊಡಬೇಕೆಂಬ ನಿರ್ಣಯವಾಯಿತು. ಮದುವೆಯ ಸಮಾರಂಭಕ್ಕೆ ಎರಡು ನೂರು ರೈತರೂ, ಆಪ್ತವರ್ಗದವರು ನೂರೂ ನೂರಾ ಐವತ್ತು ಜನ ಬರಬಹುದೆಂದೂ ಅಂದಾಜು ಮಾಡಲಾಯಿತು.

ಕೇಶವರಾಯರು ಒಪ್ಪಿಕೊಂಡರು. ಅದರ ಕಾರಣ ಬೇರೆ ಇತ್ತು. ಕೇವರಾಯರಿಗೆ ಜಮೀನುಗಳೇ ಆಧಾರವಾಗಿದ್ದವು. ಆದರೆ ಇತ್ತೀಚಿಗಿನ ಕಾಯಿದೆ ಯನ್ವಯ ಯಾವ ಹೊತ್ತಿನಲ್ಲಿ ಅವು ಕೈಬಿಡುವವೊ ಎಂಬ ಸಂದೇಹ ಅವರಲ್ಲಿ ಬಲವಾಗಿ ಬೇರೂರಿತ್ತು. ಅದಕ್ಕಾಗಿ ಅವರು ಏನಾದರೂ ನೆವಮಾಡಿ ಈಗ ಕೆಲವು ದಿನಗಳಿಂದ ಒಂದೊಂದೇ ಜಮೀನನ್ನು ಮಾರಿ ರೈತನಿಗೆ ಸಮರ್ಪಣೆ ಮಾಡತೊಡಗಿದ್ದರು. ಹೇಗೂ ಜಮೀನುಗಳು ಕೈಬಿಡುವಾಗ ಅವುಗಳ ಲಾಭವನ್ನಾದರೂ ಪಡೆದುಕೊಳ್ಳಬೇಕೆಂಬ ಆಶೆ ಅವರದು. ಅದಕ್ಕಾಗಿ ಅವರು ಮಗಳ ಮದುವೆಗಾಗಿ ಕೊಡತೆಗೆದುಕೊಳ್ಳುವ ವ್ಯವಹಾರದಲ್ಲಿ ಅರೆದಾಟದ ನೆವಮಾಡಿ ಎಲ್ಲ ಖರ್ಚಿನ ಬಾಬುಗಳನ್ನೂ ಒಪ್ಪಿಕೊಂಡರು. ಮಗಳ ಕಲ್ಯಾಣಕಾರ್ಯಕ್ಕಾಗಿ ಅವರು ನದಿ ಮುಳುಗುವ ಮೂರು ಜಮೀನುಗಳನ್ನು ಮೀಸಲಿಟ್ಟಿದ್ದರು.

ಈ ಪರಿಸ್ಥಿತಿ ಕೇಶವರಾಯರೊಬ್ಬರದೇ ಆಗಿರಲಿಲ್ಲ. ಇದು ಜಮೀನುದಾರರಿಗಂಟಿದ ಸಾರ್ವತ್ರಿಕ ರೋಗವಾಗಿತ್ತು. ಭೂಮಿತಾಯಿ ಇವರಿಗೆ ಈಗ ತುಚ್ಛವಾಗಿಬಿಟ್ಟಿದ್ದಳು. ಇದಕ್ಕೆ ಪರಿಸ್ಥಿತಿಯ ಪ್ರಭಾವವೂ ಕಾರಣವಾಗಿತ್ತು. ಉಳುವವನದೇ ಭೂಮಿಯೆಂಬ ತತ್ವವು ಸರ್ವಮಾನ್ಯ

ವಾಗುವ ಧೋರಣೆ ಎಲ್ಲರದೂ ಆಗಿದ್ದರಿಂದ ತಮಗೆ ಉಳಿಗಾಲವಿಲ್ಲವೆಂದು ಅವರು ಧಡವಡಿಸ ಹತ್ತಿದರು.

ಕೆಲವು ಚಾಣಾಕ್ಷ ಮುಂಧೋರಣದ ಜಮೀನುದಾರರು ತಮ್ಮ ಹೊಲಗಳನ್ನೆಲ್ಲ ಒಂದೊಂದಾಗಿ ಮಾರಿ ಹಣಸೇಖರಿಸಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಚಾಳುಗಳನ್ನು ಕಟ್ಟಿಸಿ ಬಾಡಿಗೆಯ ಉತ್ಪನ್ನವನ್ನು ಮಾಡಿಕೊಂಡುಬಿಟ್ಟರು. ಕೆಲವರು ಬೇರೆ ಬೇರೆ ಕಾರಖಾನೆಗಳಲ್ಲಿ 'ಸೇರು'ಗಳನ್ನು ಕೊಂಡರು. ಕೆಲವರು ಕಿರಾಣಿ, ಜವಳಿ ಅಂಗಡಿಗಳನ್ನು ತೆರೆದು ಜಮೀನುದಾರೀ ವ್ಯಾಪಾರಸ್ಥರಾದರು. ಸಾಮಾನ್ಯವಾಗಿ ಒಬ್ಬೊಬ್ಬ ಜಮೀನುದಾರನು ಬೇರೆ ಬೇರೆ ಊರುಗಳಲ್ಲಿ ನಾಲ್ಕು ನಾಲ್ಕು ಮನೆಗಳನ್ನಾದರೂ ಕಟ್ಟಿಸಿದನು. 'ಉಳುವವನದೇ ಭೂಮಿ' ಎಂಬ ತತ್ವದ ಬೆನ್ನಹಿಂದೆ 'ವಾಸಿಸುವವನದೇ ಮನೆ' ಎಂಬ ತತ್ವಪ್ರಣಾಲಿ ಬರುವ ದಾರಿಯನ್ನು ವಾಸಿಸುವವರು ನೋಡುವಂತಾಗುವಷ್ಟು ಅವರ ಮನೆಗಳು ಕಣ್ಣು ಕೋರೈಸತೊಡಗಿದವು. ಜಮೀನುದಾರೀ ವರ್ಗವು ನಷ್ಟವಾಗುವ ಲಕ್ಷಣಗಳು ಕಂಡುಬಂದರೂ ಅದರ ಬದಲಾಗಿ ಇನ್ನೊಂದು ಅಷ್ಟೇ ಪ್ರಬಲವಾದ ವರ್ಗವು ತಲೆ ಏಳತೊಡಗಿತು. ಅದೇ ಶ್ರೀಮಂತ ಚಾಳಿನೊಡೆಯರ ವರ್ಗ. ಈ ಚಾಳಿನ ಒಡೆಯರು ಬೇರೆ ಯಾರೂ ಆಗಿರದೆ ಜಮೀನುದಾರರ ಅವತಾರಿಗಳೇ ಆಗಿದ್ದರೆಂದು ಹೇಳುವದೇ ಬೇಡ.

ಕೇಶವರಾಯರು ಕೂಡ ಈ ವರ್ಗಕ್ಕೆ ಸೇರಿದವರಾಗಿ ಕೈಗೆ ಬಂದಂತೆ ಜಮೀನುಗಳನ್ನು 'ರೈತರ ದಿನ' ಬರುವ ಮೊದಲೇ ಧೋರಣೆಯಿಂದ ಮಾರಿಬಿಟ್ಟಿದ್ದರು. ಅವರು ತಮ್ಮ ಪ್ರೀತಿಯ ಮಗಳಿಗಾಗಿ ದುಂದು ವೆಚ್ಚ ಮಾಡಲು ಸಿದ್ಧರಾದರು.

ಮದುವೆ ನಿಶ್ಚಯವಾಯಿತು.

ವಿಠ್ಠಲನ ಕಣ್ಣಮುಂದೆ ಸರಳಾ ತೇಲತೊಡಗಿದಳು.

ನೀಲವ್ವ ಮಾಯವಾದಳು.

ಈ ನೀಲವ್ವ ಎಲ್ಲಿ ಹೋದಳೆಂದು ವಿಠ್ಠಲ ಅಲ್ಲಿ ಇಲ್ಲಿ ವಿಚಾರಿಸಿದಾಗ ಭೀಮರಾಯರು ಅವಳನ್ನು ಅವಳ ತಾಯಿಯೊಂದಿಗೆ ಯಾವುದೋ ಹಳ್ಳಿಗೆ ಸಾಗಿಸಿದರೆಂಬ ವಾರ್ತೆ ತಿಳಿಯಿತು.

ವಿಠ್ಠಲನಿಗೆ ಅಣ್ಣ ಮಾಡಿದ್ದು ಈಗ ಸರಿ ಎನ್ನಿಸತೊಡಗಿತು. ಚಂಚಲತೆಯಲ್ಲಿ ಹೇಳಿ ಮಾಡಿಸಿದವನಾದ ವಿಠ್ಠಲನಿಗೆ ಈಗ ಸರಳಾ ಸರ್ವಸ್ವವಾಗಿ

ದ್ದಳು. ಇದಕ್ಕಾಗಿ ಭೀಮಣ್ಣನು ನಿಷ್ಠುರನಾದನೆಂದು ತಿಳಿದ ಅವನಿಗೆ ಭೀಮರಾಯನು ದಯಾಪರನಾಗಿಯೇ ಕಂಡನು.

ಆದರೆ ಅವನ ಅಂತರಂಗದಲ್ಲಿ ನೀಲಿ ಒಮ್ಮೊಮ್ಮೆ ಅಳುಕುತ್ತಿದ್ದಳು. ಅಲ್ಲಿ ಬೇರೆ ಯಾವ ಭಾವವೂ ಇರದೆ ಅವಳು ವ್ಯರ್ಥವಾಗಿ ಅಪವಾದ ಹೊರು ವಂತೆ ಆಯಿತಲ್ಲ ಎನ್ನುವದೇ ಅವನ ಕೊರಗಾಗಿತ್ತು. ಇದನ್ನು ಮನೆಯವ ರಿಗೆಲ್ಲ ಹೇಗೆ ಹೇಳಬೇಕು ? ಇದು ಅವನ ಸಮಸ್ಯೆಯಾಗಿತ್ತು.

ಆದರೆ ಈ ಸಮಸ್ಯೆ ಅವನನ್ನು ಬಹಳ ದಿನ ಕಾಡಲಿಲ್ಲ. ಮುಂಬರುವ ಓಲಗ-ನೌಬತ್ತುಗಳ ಸಮಾರಂಭದ ಸವಿಗನಸಿನಲ್ಲಿ ವಿಠ್ಠಲನು ಗಾಳಿಗೋಪುರ ವನ್ನು ಕಟ್ಟತೊಡಗಿದನು.

ಸರಳಾನ ನೆನಪಾದಾಗ ಅವನ ಮೈಯಲ್ಲಿ ಒಂದು ಹೊಸಗಾಳಿಯ ಸಂಚಾರವೇ ಆಗುತ್ತಿತ್ತು.

ಅವನ ರಸಿಕಬುದ್ಧಿ ಈಗ ಪಕ್ಕ ಪಡೆಯಲು ಆರಂಭಮಾಡಿತು.

ಆಗಾಗ ಅವನಿಗೆ ತಾನು ಸರಳಾನ ಮುಂದೆ ಅಂತಃಪಟದ ಆಚೆ ನಿಂತ ಅನುಭವವಾಗತೊಡಗಿತು. ಹಗಲಿರುಳು ವಿಠ್ಠಲನಿಗೆ ಮದುವೆಯ ಕನಸೇ ಕನಸು.

ಬಳವಂತಗೌಡರ ಮನಸ್ಸಿನಲ್ಲಿ ಇದೇ ವರುಷ ಸುಧಾಳ ಮದುವೆಯ ನ್ನೊಂದು ಮುಗಿಸಿಯೇ ಬಿಡಬೇಕೆಂಬ ಹಂಬಲ ಹೆಚ್ಚಾದಂತೆ ಅದರ ಕಾವು ಭೀಮರಾಯನಿಗೂ ತಗುಲತೊಡಗಿತು. ರಾಜೂನ ಪತ್ರದ ದಾರಿಯನ್ನೇ ಅವನು ಕಾಯುತ್ತಿದ್ದನು. ಸುಬ್ಬರಾಯರ ಮಗ ರಮೇಶನು ದೊರೆ ಕೊಳ್ಳುವದಾದಾರೆ ಏನೇ ಆಗಲಿ ಆ ನೆಂಟಸ್ತನವನ್ನು ಹೊಂದಿಸಿಯೇ ಬಿಡ ಬೇಕೆಂದು ಅವನು ಮನಸ್ಸಿನಲ್ಲಿ ನಿಶ್ಚಯಿಸಿದ್ದನು.

ಆ ದಿನ ರಾಜಣ್ಣನಿಂದ ಬಂದ ಪತ್ರವನ್ನು ನೋಡಿ ಎಲ್ಲರಲ್ಲಿಯೂ ಸಂತೋಷಮೂಡಿತು. ರಮೇಶನೊಡನೆ ರಾಜಣ್ಣ ಬರುವದಾಗಿಯೂ, ಸುಧಾಳನ್ನು ಅವನೊಮ್ಮೆ ನೋಡಿದ ಬಳಿಕ ಮುಂದಿನ ಕೆಲಸ ಸರಾಗವಾಗಿ ಸಾಗಬಹುದೆಂದೂ, ಸಾವಿರ ಪಾಲಿಗೆ ರಮೇಶ ಸುಧಾಳನ್ನು ಒಪ್ಪಬಹುದಾ ಗಿಯೂ ತಿಳಿಸಿದ್ದನು.

ಈ ಸುದ್ದಿಯನ್ನು ತಿಳಿದ ಸುಧಾಳ ಮುಖದಲ್ಲಿ ಕೆಂಪುಮೂಡಿತು. ರಾಜೂನೊಡನೆ ಚರ್ಚೆ ಮಾಡುತ್ತಿರುವ ರಮೇಶನೇ ತನ್ನ ಹೃದಯದೇವತೆ ಯಾಗಿ ಬರುವ ವಿಷಯ ಅವಳಲ್ಲಿ ನವಿರುಗಳನ್ನೇ ಎಬ್ಬಿಸತೊಡಗಿತು.

ರಮೇಶ ಆಡಂಬರದ ವ್ಯಕ್ತಿಯಾಗಿದ್ದನು. ಸಂಪೂರ್ಣ ಆಂಗ್ಲ ಪದ್ಧತಿಯ ವಸ್ತ್ರವನ್ನೆ ಅವನು ಧರಿಸುತ್ತಿದ್ದನು. ಆದರೂ ಅವನ ಕಿವಿಯಲ್ಲಿ ಬಹುಬೆಲೆಯುಳ್ಳ 'ಬಾವಲಿ'ಯು ಜೋತಾಡುತ್ತಿತ್ತು. ಮಾತು ಮಾತಿಗೆ ಅವನು ತನ್ನ ಶ್ರೀಮಂತಿಕೆಯನ್ನು ಕೊಚ್ಚುತ್ತಿದ್ದನು.

ಇದು ಅವನ ಅಂತಸ್ತಿನ ವರ್ಗದವರಿಗೆ ಸ್ವಾಭಾವಿಕವೆಂದು ಭೀಮರಾಯನು ತಿಳಿದನು.

ಕನ್ಯಾಪರೀಕ್ಷೆ ನಡೆಯಿತು. ರಮೇಶನು ಸುಧಾಳನ್ನು ಮೆಚ್ಚಿದನು.

ಅದರೆ ಹೊರಡುವಮುಂದೆ ಮಾತ್ರ ಅವನು 'ಮದುವೆಯ ವಿಷಯದಲ್ಲಿ ತಂದೆಯದೇ ಕೊನೆಯ ನಿರ್ಣಯ' ಎಂದು ಹೇಳಿಬಿಟ್ಟನು.

" ನೀವು ನಿಮ್ಮ ಹಿರಿಯರಿಗೆ ನಿಮ್ಮ ಅಭಿಪ್ರಾಯವನ್ನು ತಿಳಿಸಿದರೆ ನಮಗೆ ಅನಕೂಲವಾಗುವದು. ನಾವು ಹೋಗಿ ಮದುವೆಯ ನಿಷ್ಕರ್ಷೆ ಮಾಡುವೆವು.

ಭೀಮರಾಯ ನಮ್ರನಾಗಿ ಹೇಳಿದನು.

" ತಂದೆಯನ್ನು ನೀವು ಸುಲಭವಾಗಿ ಒಲಿಸಬಹುದು. ಈಗಾಗಲೇ ನನ್ನ ಧಾರಣೆ ಹದಿನೈದು ಸಾವಿರಗಳಿಗೆ ಏರಿದೆ. ಗಿರಾಕಿಗಳ ಒತ್ತಡವಾದಂತೆ ಪದಾರ್ಥದ ಧಾರಣೆ ಏರತೊಡಗುವದೆಂಬ ಆರ್ಥಿಕ ಶಾಸ್ತ್ರವೇ ಇಲ್ಲಿಯೂ ಕೆಲಸಮಾಡುತ್ತದೆ. ಬೇಡಿಕೆ ಹೆಚ್ಚಾದಾಗ ಬೆಲೆಯೂ ಹೆಚ್ಚು' ಈ ವ್ಯವಹಾರವನ್ನು ನೀವು ಹೇಗೆಬೇಕೋ ಹಾಗೆ ಮಾಡಿಕೊಳ್ಳಿರಿ. ಒಂದೆರಡು ಸಾವಿರ ನೀವು ಹೆಚ್ಚುಮಾಡಿರಿ........

" ಒಂದು ವೇಳೆ ನಿಮ್ಮ ತಂದೆ ನಿಮ್ಮನ್ನು....

" ಬಹಳ ಬೆಲೆಗೆ ಮಾರುಗಟ್ಟೆಯಲ್ಲಿಟ್ಟರೆ ಹೇಗೆ ಎಂಬುದು ನಿಮ್ಮ ಅಭಿಪ್ರಾಯವೊ ?

" ಹಾಗಲ್ಲ ರಮೇಶರಾಯರೆ ? ನಿಮ್ಮ ತಂದೆ ನಿಮ್ಮನ್ನು ಕೇಳಬಹುದು ಎಂದು ಕೇಳಿದೆ.

" ನಮ್ಮ ತಂದೆ ಇಷ್ಟು ವ್ಯವಹಾರಶೂನ್ಯನಲ್ಲ, ಬಿಡಿರಿ. ಯಾವ ವಿಷಯವನ್ನು ಯಾರಮುಂದೆ ಹೇಳಬೇಕೋ ಅವರ ಮುಂದೆ ಹೇಳಿ ವ್ಯಾಪಾರ ಕುದುರಿಸುವದರಲ್ಲಿ ನನ್ನ ತಂದೆ ನಿಸ್ಸೀಮನಾಗಿದ್ದಾನೆ. ಒಮ್ಮೊಮ್ಮೆ ಅವನು ಒಂದೇ ವಿಷಯವನ್ನು ನನ್ನ ಮುಂದೆ ಒಂದು ರೀತಿ, ನನ್ನ ತಾಯಿಯ ಮುಂದೆ ಇನ್ನೊಂದು ರೀತಿ ಹೇಳುತ್ತಾನೆ.

ರಮೇಶನ ಮಾತುಗಾರಿಕೆಯನ್ನು ಕೇಳಿ ಎಲ್ಲರೂ ನಕ್ಕರು.

ರಾಜೂ ಭೀಮಣ್ಣನನ್ನು ಪಕ್ಕಕ್ಕೆ ಕರೆದು ಹೇಳಿದ,

“ ಈ ದಿನ ಮುಂಜಾನೆಯೇ ನಮ್ಮ ಕೆಲಸ ಆದಂತಾಗಿದೆ. ತಂದೆಗೆ ರಮೇಶ ತನ್ನ ಒಪ್ಪಿಗೆಯನ್ನು ತಿಳಿಸಿದ್ದಾನೆ. ನೀವು ಸ್ವಲ್ಪ ಧಾರಾಳವಾಗಿ ಮಾತಾಡಿದರೆ ಸುಬ್ಬರಾಯರು ಒಪ್ಪಬಹುದಾಗಿದೆ. ಅಲ್ಲದೆ ನಮಗಾದರೂ ಸುಧೆಯೊಬ್ಬಳೇ ಹೆಣ್ಣು ಕರುಳು. ಅಣ್ಣನ ವರದಕ್ಷಿಣೆಯ ಹಣದೊಡನೆ ನಾವು ಸಂಕಲ್ಪಿಸಿದ ಹಣವನ್ನು ಸೇರಿಸಿದರೆ ನಾಕು. ಈ ಬೀಗತನ ಕೂಡುವದು’ ಎಂದು ಹೇಳಿದನು.

ಭೀಮರಾಯನ ಮುಖ ಅರಳಿತು.

ಆದರೆ ಈಗ ಅರಳಿದ ಮುಖ ಸುಬ್ಬರಾಯರ ಮುಂದೆ ಬಾಡತೊಡಗಿತು. ಭೀಮರಾಯನು ಯಾವ ತಿಪ್ಪರಲಾಗ ಹಾಕಿದರೂ ಅವರು ಹದಿನೇಳು ಸಾವಿರ ರೂಪಾಯಿಗಳಿಗೆ ಒಂದು ಕವಡೆಯನ್ನು ಕೂಡ ಕಡಿಮೆ ತೆಗೆದುಕೊಳ್ಳುವದಿಲ್ಲವೆಂದು ಪಟ್ಟುಹಿಡಿದು ಕುಳಿತುಕೊಂಡದ್ದೇ ಭೀಮರಾಯನ ಮುಖ ಬಾಡಿದುದಕ್ಕೆ ಕಾರಣವಾಗಿತ್ತು.

“ ನೀವು ಶ್ರೀಮಂತರು ಸುಬ್ಬರಾಯರೆ! ನಿಮ್ಮ ಯೋಗ್ಯತೆ ದೊಡ್ಡದು. ನಿಮ್ಮ ಶ್ರೀಮಂತಿಕೆಯನ್ನು ವರದಕ್ಷಿಣೆಯ ಮಾನದಂಡದಿಂದ ಅಳೆಯುವಂತೆ ನೀವು ಇಚ್ಛಿಸುವದು ಸರಿಯಾಗಿದೆ. ಆದರೆ ತಾವು ತುಸು ಧಾರಾಳವಾದ ಮನಸ್ಸುಮಾಡಿರಿ. ನಿಮ್ಮ ಮಗ ನನ್ನ ತಂಗಿಯನ್ನು ಒಪ್ಪಿದ್ದಾನೆ....

“ ಕನ್ಯೆ ಮನಸ್ಸಿಗೆ ಬಂದರೆ ಮದುವೆ ನಿಲ್ಲುವದೆಂದು ಹೇಳುವಿರೇನು? ಈ ಮೊದಲು ಅವನು ಹತ್ತು ಕನ್ಯೆಗಳನ್ನು ಪಾಸುಮಾಡಿದ್ದನು. ಆದರೆ ಆ ಮದುವೆಗಳು ನಡೆಯಲೇ ಇಲ್ಲ. ಈಗ ನಾನೂ ನಿಮಗೆ ಒಂದುಮಾತು ಕೇಳುತ್ತೇನೆ ಹೇಳಿರಿ.

“ ಅವಶ್ಯವಾಗಿ ಕೇಳಿರಿ ಸುಬ್ಬರಾಯರೆ!

“ ನಿಮ್ಮ ತಮ್ಮನಿಗೆ ನೀವು ತೆಗೆದುಕೊಂಡದ್ದೆಷ್ಟು ?

“ ಒಟ್ಟು ಹತ್ತು ಸಾವಿರ ರೂಪಾಯಿಗಳು.

“ ಅವನು ಕಲಿತದ್ದೆಷ್ಟು ?

“ ಆ ವಿಷಯ ನಿಮಗೆ ಗೊತ್ತೇ ಇದೆ.

“ ಅಂದಬಳಿಕ ಕೇವಲ ಎಸ್.ಎಸ್.ಸಿ. ನಾಪಾಸು ಆದವನಿಗೆ ನೀವು ಹತ್ತು ಸಾವಿರ ತೆಗೆದುಕೊಂಡಿರಿ. ನನ್ನ ಮಗ ಬಿ.ಎ. ಪಾಸಾದ

ಪದವೀಧರನಾಗಿದ್ದಾನೆ. ಅಲ್ಲದೆ ನಮ್ಮ ಶ್ರೀಮಂತಿಕೆ ನಿಮಗೆ ಅರಿತ ವಿಷಯವಾಗಿದೆ. ಮನೆಯಲ್ಲಿ ಜೋಡುಕುದುರೆಗಳ ಟಾಂಗಾ ಇದೆ ಎಂಬುದು ನಿಮಗೆ ಗೊತ್ತಿದೆಯಲ್ಲವೆ? ಇದು ಕೊನೆಯ ಮಾತು ಭೀಮರಾಯರೆ! ನನ್ನ ಮಗನ ಧಾರಣಿಯನ್ನು ಹೆಚ್ಚಾಗಿ ಚೌಕಸಿ ಮಾಡಬೇಡರಿ. ನಿಮಗೆ ಈ ಮಾಲು ಬೇಕಾಗಿದ್ದರೆ ನಾನು ಹೇಳಿದಷ್ಟು ಹಣ ಸುರುವಿರಿ ಬೇಡವಾದರೆ ಬಿಡಿರಿ. ನನಗೇನು ಗಿರಾಕಿಗಳಿಗೆ ಕಡಿಮೆ ಇಲ್ಲ.

ಅಲ್ಲಿಯೇ ಕುಳಿತ ಬಳವಂತಗೌಡನು ಭೀಮರಾಯನಿಗೆ ಕಣ್ಣುಸನ್ನೆ ಮಾಡಿ ಒಪ್ಪಿಗೆಯ ಅಭಿಪ್ರಾಯವನ್ನು ಸೂಚಿಸಿದ್ದರಿಂದ ಭೀಮರಾಯನು ಬೆಳ್ಳಿಯ ತಾಟದಲ್ಲಿದ್ದ ಎಲೆ ಅಡಿಕೆಯನ್ನು ತೆಗೆದುಕೊಂಡು ಬಳವಂತಗೌಡನ ಕೈಯಲ್ಲಿ ಕೊಟ್ಟನು.

ಅದೇ ದಿನ ಜೀರಿಗೆ ಬೆಲ್ಲವನ್ನು ಹಂಚಲಾಯಿತು.

ವಿಠ್ಠಲನ ಮದುವೆಯಾದ ಎಂಟು ದಿನಗಳಲ್ಲಿಯೇ ಈ ಮದುವೆಯ ಮುಹೂರ್ತವನ್ನು ನಿಶ್ಚಯಿಸಲಾಯಿತು.

ಸುಪ್ರಸಿದ್ಧ ಜಮೀನುದಾರರೂ ಗೌಡರೂ ಆದ ಭಾವೂರಾಯರ ಏಕ ಮಾತ್ರ ಮಗಳು ಅಷ್ಟೇ ಪ್ರಸಿದ್ಧರಾದ ಸುಬ್ಬರಾಯರ ಮನೆ ತುಂಬುವಳೆಂಬ ವಾರ್ತೆ ಸುತ್ತಲೂ ಪಸರಿಸಿತು.

೭

ಜಮೀನುದಾರರ ಮನೆಯಲ್ಲಿ ಮದುವೆ ಎಂದಬಳಿಕ ಕೇಳಬೇಕೆ ? ಹಳ್ಳಿಗರಿಗೆ ಇದೊಂದು ಮಹಾಸಮಾರಂಭ. ಅಪೂರ್ವವಾದ ಸನ್ನಿವೇಶ. ಪಟ್ಟಣದ 'ಬ್ಯಾಂಡ'ನ್ನು ಅವರು ಕೇಳುವದು ಇಂಥ ದಿನಗಳಲ್ಲಿಯೇ. ನಾಲ್ಕಾರು ದಿನವಾದರೂ ಹೋಳಿಗೆಯನ್ನು ತುಪ್ಪದಲ್ಲಿ ಅದ್ದುವದು ಇಂಥ-ದಿನಗಳಲ್ಲಿಯೇ.

ಗಂಡಿನ ಮದುವೆಯಲ್ಲಿ ಅಬ್ಬರ ಬಹಳ. ಸಾಮಾನ್ಯವಾಗಿ ಹೆಣ್ಣಿನ ತಂದೆ ತನ್ನ ಮನೆಯ ಮುಂದೆಯೇ ಹಂದರ ಹಾಕಿ ಮಗಳನ್ನು ಧಾರೆಯೆರೆದು ಕೊಡುವದು ವಾಡಿಕೆ.

ಈ ಸಂಪ್ರದಾಯಕ್ಕೆ ಅನುಸಾರವಾಗಿ ಗೌಡರ ನಿಬ್ಬಣ ಹೊರಟಿತು.

ಎಷ್ಟು ಜನ ಹೊರಡುವದೆಂದು ಯಾರೂ ನಿಷ್ಕರ್ಷೆ ಮಾಡಿರಲಿಲ್ಲ. ಯಾರು ಬಂದರೂ ಬೇಡವೆನ್ನುವದು ಗೌಡರ ಮನೆತನದ ಗೌರವಕ್ಕೆ ಒಗ್ಗದ ವಿಷಯ. ಆದುದರಿಂದ ಆ ಹಳ್ಳಿಯಲ್ಲಿಯ ಸಾಕಷ್ಟು ಜನ ವಿಠ್ಠಲಗೌಡರ ಮದುವೆಗೆ ಹೊರಟುಬಿಟ್ಟಿತು.

ಹೆಣ್ಣುಮಕ್ಕಳನ್ನು ತುಂಬಿಕೊಂಡ ಸವಾರಿ ಬಂಡಿಗಳೇ ಇಪ್ಪತ್ತು ಇದ್ದವು. ಗಂಡುಮಕ್ಕಳನ್ನು ಹೊತ್ತವು ಇದಕ್ಕೂ ಹೆಚ್ಚು. ಅಲ್ಲದೆ ಬಂಡಿಗಳ ಎರಡೂ ಮಗ್ಗಲಿಗೆ ನಡೆಯುತ್ತ ಲೆಕ್ಕವಿಲ್ಲದಷ್ಟು ಜನರು ಸಾಗಿದ್ದರು.

ಅದೊಂದು ಅವ್ಯವಸ್ಥೆಯ ಜನಜಂಗುಳಿಯಾಗಿತ್ತು.

ಈ ಅಪಾರವಾದ ತಲೆಗಳ ಸಮುದ್ರವನ್ನು ನೋಡಿ ಕೇಶವರಾಯರಿಗೆ ದಿಕ್ಕೇ ತೋಚದಾಯಿತು. ಬಂದ ಜನಕ್ಕೆಲ್ಲ ಆಸರಕೊಟ್ಟು ಊರಹೊರಗಿನ ಧರ್ಮಸಾಲೆಯಲ್ಲಿ ಕುಳ್ಳಿರುಸುವ ಸಮಯಕ್ಕೆ ಮದುವೆಗಾಗಿ ಮಾಡಿದ ತಿನ್ನುವ ಜಿನಸುಗಳು ಮುಗಿದುಹೋದವೆಂಬ ಸೂಚನೆಯೇ ಬಂದಿತು.

ಬಂದ ಜನರಲ್ಲಿ ತಿಂದವರು ಹತ್ತು ಹತ್ತು ಉಂಡಿಗಳನ್ನು ತಿಂದರು. ಸಿಗದವರು ಏನೂ ಸಿಗದೇ ಕಣ್ಣು ಪಿಳಕಿಸಹತ್ತಿದರು.

ಇದರಿಂದ ಬಂದ ಬೀಗರಲ್ಲಿ ಅತೃಪ್ತತೆ ಕಾವೇರತೊಡಗಿತು.

"ಗಂಡಿನ ಕಡೆಯ ಬೀಗರೆಂದರೆ ಏನೆಂದು ತಿಳಿದಿದ್ದಾರೆ ಕೇಶವ ರಾಯರು ? ಯಾರು ತಿಂದರು ಯಾರು ಬಿಟ್ಟರು ಎಂಬುವದನ್ನು ನೋಡ

ಬೇಕೋ ಬೇಡವೋ. ಕೇಳಿದ ಕೂಡಲೆ ಒಂದೊಂದೇ ಉಂಡಿಯನ್ನು ಕೈಯಲ್ಲಿ ತಂದುಕೊಡಲು ನಾವೇನು ಭೀಕ್ಷೆಯುವರೆಂದು ತಿಳಿದಿದ್ದಾರೇನು? ಭೀಮರಾಯಗೌಡರ ಮದುವೆಯಲ್ಲಿ ಉಂಡಿಗಳ ಗೋಡೆಯನ್ನೇ ನಿಲ್ಲಿಸಿದ್ದರು. ಹುರಿದ ಅವಲಕ್ಕಿ ಕೊಡಲು ನಾವೇನು ಸಾಕಿದ ಪಾರಿವಾಳವೆಂದು ತಿಳಿದಿದ್ದಾರೇನು ? "

ಯಾವನೋ ಒಬ್ಬ ಆಗುಂತಕನಾಗಿ ಬಂದವನು ಗಂಟಲು ಬಿರಿಯುವಂತೆ ಕೂಗಿಕೊಂಡನು.

ಈ ಮಾತನ್ನು ಕೇಳಿ ಭೀಮರಾಯನು ಓಡುತ್ತ ಬಂದು

" ಏನಾಯಿತು ? " ಎಂದು ಕೇಳುವಂತಾಯಿತು.

" ನಾವು ಕೂಳುಕಾಣದೆ ಬಂದವರೆಂದು ತಿಳಿದಿರುವರೇನು?

" ಅವರು ಕೊಡುವದು ಸಾಲದಿದ್ದರೆ ನಮ್ಮ ಉಗ್ರಾಣದಿಂದ ಪಡೆದುಕೊಳ್ಳಿರಿ.

ಭೀಮರಾಯ ಶಾಂತನಾಗಿ ನುಡಿದ.

" ಗಂಡಿನ ಬೀಗರಾಗಿ ನಾವು ನಮ್ಮ ಆಹಾರವನ್ನೇ ತಿನ್ನುವದು ಗೌರವವೇನು ಗೌಡರೆ? ನಮ್ಮಲ್ಲಿ ತಿನ್ನಲು ಇಲ್ಲವೆಂದು ನಾವು ಈ ಮಾತು ಹೇಳುತ್ತಿಲ್ಲ. ಕೇಶವರಾಯರ ಬಡಿವಾರದ ಮಾತುಗಳಿಗಾಗಿ ನಮಗೆ ಹೇಳಬೇಕಾಗಿದೆ.

ಆ ಹೊತ್ತಿಗೆ ಬೆವರು ಸುರಿಸುತ್ತ ಕೇಶವರಾಯರೇ ಊರೊಳಗಿನ ಎಲ್ಲ ಚಹಾದ ಅಂಗಡಿಗಳಲ್ಲಿ ಅದೇ ದಿನ ಮಾಡಿದ ಬುಂದೇ ಲಾಡುಗಳನ್ನು ಖರೀದಿ ಮಾಡಿಕೊಂಡು ಬಂದರು.

" ಇದೆಲ್ಲಾ ಏನು ವ್ಯವಸ್ಥೆ ಕೇಶವರಾವ್ ! ನೀವು ಮೊದಲೇ ಹೇಳಿದ್ದರೆ ನಮ್ಮ ವ್ಯವಸ್ಥೆಯನ್ನು ನಾವು ಮಾಡಿಕೊಳ್ಳುತ್ತಿರಲಿಲ್ಲವೆ ?

" ಕ್ಷಮಿಸಬೇಕು ಭೀಮಣ್ಣ ! ನಿರೀಕ್ಷೆಗಿಂತ ಜನ ಹೆಚ್ಚಿಗೆ ಬಂದದ್ದರಿಂದ ಈಗ ಹೀಗಾಯಿತು. ಮುಂದೆ ಎಲ್ಲವೂ ಸರಿಯಾಗಿಯೇ ಸಾಗುತ್ತದೆ. ಯಾವುದಕ್ಕೂ ಕಡಿಮೆಯಾಗುವದಿಲ್ಲ.

" ನೀವು ನಿಮ್ಮ ಮಗಳನ್ನು ಜೋಯಿಸರ ಮನೆಗೆ ಕೊಟ್ಟಿರುವಿರೆಂದು ತಿಳಿದಿರುವಿರೇನು ? ಭೀಮರಾಯಗೌಡರ ಮದುವೆಯಲ್ಲಿ ಇದರ ·ನಾಲ್ಕು ಪಟ್ಟು ಜನ ಹೋಗಿತ್ತು.

ಕೇಶವರಾಯರು ಪಿಟ್ಟೆನ್ನಲಿಲ್ಲ. ಎಲ್ಲರನ್ನೂ ಸಮಾಧಾನ ಮಾಡಬೇಕಾದರೆ ಅವರಿಗೆ ಸಾಕುಸಾಕಾಗಿ ಹೋಯಿತು.

ರಾಜಣ್ಣನು ಗದ್ದರಿಸದಿದ್ದರೆ ಆಗಲೇ ಬೀಗಬೀಗರಲ್ಲಿ ಒಂದು ಚಿಕ್ಕ ಪ್ರಮಾಣದ ಸಲಾಮೀ ಕಾಳಗವೇ ನಡೆಯುಬಹುದಾಗಿತ್ತು.

ಹೆಣ್ಣುಮಕ್ಕಳ ಗುಂಪಿನಲ್ಲಿಯೂ ಸಾಕಷ್ಟು ಅಸಮಾಧಾನ ಆಗಲೇ ತುಂಬಿಕೊಂಡಿತ್ತು. ಇದರ ಕಾರಣ ಮಾತ್ರ ಅವರಿಗೇ ತಿಳಿದಿರಲಿಲ್ಲ. ಗಂಡಿನ ಬೀಗರು ಯಾವಾಗಲೂ ಅಸಮಾಧಾನದಿಂದ ಇದ್ದುಕೊಂಡು ಅತೃಪ್ತಿಯನ್ನು ಸೂಸುವದೇ ಸಾಂಪ್ರದಾಯುವೆಂದು ತಿಳಿದಿದ್ದುದೇ ಇದಕ್ಕೆ ಮೂಲಕಾರಣವಾಗಿತ್ತು.

" ಅಯ್ಯ! ಗುಡಾರ ಎಂಥಾದು ಹಾಸ್ಸಾರ ನೋಡಿರೆ! ನಮ್ಮ ಊರಾಗ ಇಂಥಾ ಗುಡಾರವನ್ನ ನಾಯೀ ಬುಡಕ ಹಾಸತೀವಿ. ಇವರೆಂಥಾ ಬೀಗರ ನಮ್ಮವ್ವಾ! ಛಾದ ಅಂಗಡೀ ಫರಾಳಾ ತಂದಾವ.

ಹೆಣ್ಣಿನ ಬೀಗಿತ್ತಿಯರಿಗೆ ಈ ಮಾತುಗಳೆಲ್ಲ ಕೇಳಿಸುತ್ತಿದ್ದವು. ಆದರೆ ಅವರು ಬಾಯಲ್ಲಿ ನೀರು ತುಂಬಿಕೊಂಡು ತೆಪ್ಪಗೆ ಇರುತ್ತಿದ್ದರು.

ಬಂದ ಜನರಿಗೆ ಭೋಜನವಾಗಬೇಕಾದರೆ ಮಧ್ಯರಾತ್ರಿ ಮೀರಿ ಹೋಯಿತು. ಯಾರು ಊಟಮಾಡಿದರೆಂದು ಯಾರಿಗೂ ತಿಳಿಯುತ್ತಿರಲಿಲ್ಲ. ಎಲ್ಲರನ್ನ ಎಬ್ಬಿಸಿ ಊಟಕ್ಕೆ ಕೂಡಿಸಿದಾಗ ಯಾರೂ ತಾಟು ಮುಸುರೆ ಮಾಡದೆ ಎದ್ದು ಅಷ್ಟು ಅನ್ನವನ್ನು ಎಂಜಲುಮಾಡಿ ಹಾಳುಮಾಡಿಬಿಟ್ಟರು.

ಜಮೀನುದಾರರ ಮದುವೆಯಲ್ಲಿ ಅನ್ನಬ್ರಹ್ಮ ಲಾಗಹಾಕಿತ್ತು. ಕಾಲುಕಸವಾಗಿ ಅನ್ನದೇವಿ ಒದ್ದಾಡುತ್ತಿದ್ದಳು. ಸಾವಿರಜನರು ತಿಂದು ತೇಗಬಹುದಾದ ಅನ್ನವನ್ನು ನೂರುಜನರು ಹಾಳುಮಾಡಿ ಹತ್ತೀಬಿತ್ತಿದರು.

ಇದು ಮದುವೆಯ ಸಂಭ್ರಮವಾಗಿತ್ತು. ಅನ್ನಬ್ರಹ್ಮನ ಕಣ್ಣು ಕೆಂಪಗಾಗಿ 'ನನ್ನನ್ನು ಕಾಲುಕಸ ಮಾಡಿ ತುಳಿದ ಈ ಜನವನ್ನು ಒಂದು ಕೈ ನೋಡುತ್ತೇನೆ' ಎಂದು ಆಗಲೇ ಪ್ರತಿಜ್ಞೆ ಮಾಡಿದನೇನೊ ?

" ನನಗೆ ಅಡಿಕೆಪುಡಿ ಸಿಗಲಿಲ್ಲ !

" ಎಲಾ ಇವರು ! ಬೀಗರ ಮನ್ಯಾಗ ಸುಣ್ಣಹಚ್ಚಿಕೊಳ್ಳದ ವೀಳ್ಯ ತಿನ್ನುತ್ತಾರೇನೋ ? ಬರಿಯ ಎಲೆಗಳ ಪೆಂಡಿಯನ್ನು ಇಡಲು ನಾವೇನು ಹುಸೇನ ಸಾಹೇಬರ ಮೂಕಕುರಿ, ಕುಯ್ಯಾಡುಗಳೆಂದು ತಿಳಿದಿದ್ದಾರೇನು ?

" ಇದು ತುಪ್ಪವೋ ಗಾಣದ ಎಣ್ಣೆಯೊ ?

" ಸಾರಿನಲ್ಲಿ ಒಂದು ರುಚಿಯೇ ಇರಲಿಲ್ಲ.
" ಎಂತಲೇ ಒಂದು ಡಬರಿ ತಿಂದೆಯೇನೊ ?
" ಇವರೆಂಥ ಬೀಗರೋ 'ಗ್ಯಾಸು' ಆರಹತ್ತಿತು.
" ನೀಡುವ ಜನರನ್ನು ನೋಡಿರೋ. ಕುಸ್ತೀ ಪೈಲವಾನರಾಗಿದ್ದಾರೆ.
" ಹೆಣ್ಣಾಳುಗಳು ಮಾತ್ರ........
" ಎಣ್ಣೆ ಎಣ್ಣೆ ಬಸಿಯುತ್ತವೆ ಬಿಡು.
" ಮಜ್ಜಿಗೆಯಲ್ಲಿ ಮೊಸರಿನ ಭಾಗವೇ ಇರಲಿಲ್ಲ.
" ಹುಳಿಯಲ್ಲಿ ಮುಳುಗಿ ಮುಳುಗಿ ಎದ್ದರೂ ಒಂದು ಬೇಳೆಯಕಾಳು ಸಿಗಲಿಲ್ಲ.

" ಕೇಶವರಾಯರು ಮದುವೆ ಮಾಡತಾರೋ ಇಲ್ಲ ಹನುಮಂತ ದೇವರ ಕಾರ್ತಿಕ ಸಮಾರಾಧನೆ ಮಾಡ್ತಾರೋ ?

" ನಮ್ಮ ಝಪಾಟಿಗೆ ಪಾಪ ! ಅವರು ಹೇಗೆ ಹತ್ತಬಹುದು.
" ಈ ಪರಿಯಿಂದ ಹೆಣ್ಣು ಯಾಕೆ ಕೊಡಬೇಕು.
" ಸುಮ್ಮನೇ ಮಲಗಿರೋ !

ಇಂಥ ಮಾತುಗಳನ್ನು ಕೇಳಿಯೂ ಕೇಳದಂತೆ ಕೇಶವರಾಯರ ಕಡೆಯವರು ಇರಲೇಬೇಕಾಯಿತು.

ಮದುವೆ ಅತ್ಯಂತ ವೈಭವದಿಂದಲೇ ನೆರವೇರಿತೆನ್ನಲು ಯಾವ ಸಂದೇಹವೂ ಇರಲಿಲ್ಲ. ಆಗಾಗ ಬೀಜಬಿಜ್ಜರಲ್ಲಿ ಸಣ್ಣಪುಟ್ಟ ಮಾತುಗಳಿಗಾಗಿ ಮನಸ್ತಾಪಗಳಾದರೂ ಅವು ಮದುವೆಯಲ್ಲಿ ನೆಡೆಯಬೇಕಾದ ಪ್ರಸಂಗಗಳೇ ಆಗಿದ್ದವು.

ಈ ವಾಗ್ಯುದ್ಧವು ಒಂದು ಪ್ರಸಂಗದಲ್ಲಿ ಮಾತ್ರ ವಿಕೋಪಕ್ಕೆ ಹೋಗುವದಿತ್ತು. ಆದರೆ ಹೋಗಲಿಲ್ಲ.

ಇದು 'ಭೂಮ' ಸಮಾರಂಭದ ರಸವತ್ತಾದ ಸನ್ನಿವೇಶವಾಗಿತ್ತು. ಈ ಸಮಾರಂಭದಲ್ಲಿ ಕಾರ್ಯದೇವಿ ಅತ್ಯಂತ ಸ್ಫೂರ್ತಿದೇವಿಯಾಗಿ ಪರಿಣಮಿಸುತ್ತಾಳೆ. ಶೀಘ್ರ ಕವಿಯತ್ರಿಯರಿಗೆ ಇಲ್ಲಿ ಕಾವ್ಯದ ಸ್ಫೂರ್ತಿ ಆಗಲೇಬೇಕು.

ಮದುವೆಯ ದಿನದ ಊಟವೇ ಅಕ್ಷತೆ ಬಿದ್ದಬಳಿಕ ಸಾಯಂಕಾಲ ಎಲ್ಲರಿಗೂ ಹೆಣ್ಣಿನ ಕಡೆಯವರು ಸುಗ್ರಾಸ ಭೋಜನ ಮಾಡಿಸುವದು ಸಂಪ್ರದಾಯ.

ಈ ಸಮಾರಂಭದ ವಿಶೇಷ ಆಕರ್ಷಣೆಯೆಂದರೆ ಈ 'ಭೂಮ'ದ ಊಟ.

ಇದು ಹೆಂಗಳೆಯರಿಗೆ ಮೀಸಲಾದ ಮೇಜವಾನಿ.

ಆದರೆ ಗಂಡಸರು ಇಲ್ಲಿ ಇರಕೂಡದೆಂಬ ಕಡ್ಡಾಯವೇನಿಲ್ಲ.

ಆ ಪಂಕ್ತಿಯಲ್ಲಿ ಮಾತ್ರ ಅಳಿಯದೇವರನ್ನು ಹಾಗೂ ಅವನ ಅತ್ಯಂತ ಪ್ರೀತಿಯ ಸ್ನೇಹಿತರನ್ನು ಬಿಟ್ಟರೆ ಇನ್ನೊಬ್ಬರಿಗೆ ಅಲ್ಲಿ ಪ್ರವೇಶವಿಲ್ಲ. ಉಳಿದ ವರು ಬೇರೆ ಕಡೆಗೆ ಕುಳಿತು ಊಟಮಾಡಿ ಈ ಸಮಾರಂಭವನ್ನು ನೋಡಲು ಬರಬಹುದು.

ಈ ಸಮಾರಂಭವೆಂದರೆ ಪೀತಾಂಬರ ಪ್ರದರ್ಶನವೆಂದೇ ಹೇಳ ಬಹುದು. ಗಂಡಿನ ಕಡೆಯ ಮುಖ್ಯ ಮುಖ್ಯ ಬೀಗಿತ್ತಿಯರು ಬೇರೆ ಬೇರೆ ಬಣ್ಣದ ಪೀತಾಂಬರಗಳನ್ನು ಉಟ್ಟುಕೊಂಡು ಇದ್ದುಬಿದ್ದ ಎಲ್ಲ ಚಿನ್ನದ ಆಭರಣಗಳನ್ನು ಮೈಮೇಲೆ ಹೇರಿಕೊಂಡು ತಮ್ಮ ಸಂಪತ್ತನ್ನು ಪ್ರದರ್ಶಿಸಲು ಅಲ್ಲಿ ಬರಬೇಕೆಂಬುದು ಪರಂಪರಾಗತವಾಗಿ ಬಿಟ್ಟಂತೆ ಅನ್ನಿಸುತ್ತದೆ. ಸಾಮಾನ್ಯವಾಗಿ ಯಾರೂ ಸಾದಾ ಸೀರೆಯನ್ನು ಉಟ್ಟುಕೊಂಡು ಈ ಪಂಕ್ತಿ ಯಲ್ಲಿ ಪ್ರವೇಶಿಸುವದಿಲ್ಲ.

ಈ 'ಭೂಮ'ದ ಊಟದಲ್ಲಿ ಪ್ರತ್ಯೇಕ ಎಡೆಗಳ ಏರ್ಪಾಟು ಇರುವ ದಿಲ್ಲ. ದೊಡ್ಡ ದೊಡ್ಡ ಬಾಳೆಯ ಎಲೆಗಳನ್ನು ಒಂದರಬುಡಕ್ಕೆ ಒಂದು ಸೇರಿಸಿ ಜೋಡಿಸುತ್ತಾರೆ. ಅಳಿಯದೇವರಿಗೆ ಮಾತ್ರ ಮಧ್ಯದಲ್ಲಿ ಒಂದು ಬೆಳ್ಳಿಯ ತಾಟನ್ನು ಇಡುತ್ತಾರೆ.

ಐದು ತರಹದ ಪಾಯಸಗಳು, ಕೊಪ್ಪರಿಗೆಯಂಥ ಮಂಡಿಗೆ ಈ ಊಟಕ್ಕೆ ಬೇಕೇಬೇಕು. ಯಾರೂ ಹೆಚ್ಚಾಗಿ ತಿನ್ನದಿದ್ದರೂ ಎಲ್ಲವನ್ನೂ ಹಾಕಿಸಿಕೊಂಡು ಮುಸುರೆಮಾಡಿ ಅನ್ನವನ್ನೆಲ್ಲ ಹಾಳುಮಾಡಿಬಿಡುವದೇ ಇದರ ವೈಶಿಷ್ಟ್ಯ.

ಬೀಗಿತ್ತಿಯರೆಲ್ಲ ಒಂದೇ ಸಾಲಿನಲ್ಲಿ ಕುಳಿತುಕೊಳ್ಳುತ್ತಾರೆ. ಅಳಿಯನ ಒಂದು ಪಕ್ಕದಲ್ಲಿ ನವವಧುವೂ ಇನ್ನೊಂದು ಪಕ್ಕದಲ್ಲಿ 'ಕಳಸಗಿತ್ತಿ' (ಅಳಿಯನ ಅಕ್ಕ ಇಲ್ಲವೇ ತಂಗಿಗೆ ಈ ಬಿರಿದು) ಯೂ ಮಂಡಿಸುತ್ತಾರೆ. ಎದುರು ಅನ್ನದರಾಸಿ ಬೇರೆ ಬೇರೆ ಹೊಸಭಾಂಡಿಗಳಲ್ಲಿ ತುಂಬಿರುತ್ತದೆ. ಈ ಹೊಸಭಾಂಡಿಗಳನ್ನು ಗಂಡಿನ ಕಡೆಯವರು ತೆಗೆದುಕೊಂಡು ಹೋಗು ವದು ಸಂಪ್ರದಾಯ.

ಮೂರು ದೊಡ್ಡ ದೊಡ್ಡ ಸಮೆಗಳಲ್ಲಿ ದೀಪ ಉರಿಯುತ್ತಿರುತ್ತದೆ. ಆ ಸಮೆಗಳ ಕೊರಳಿಗೆ ಹೋಳಿಗೆಗಳನ್ನು ಅಲಂಕಾರಮಾಡಿಡಲಾಗಿರುತ್ತದೆ.

ಅಳಿಯದೇವರು ಶ್ರೀ ಮದ್ಗಾಂಭೀರ್ಯದಿಂದ ಪೀತಾಂಬರಧಾರಿಗಳಾಗಿ ಕೊರಳಲ್ಲಿ ಚಿನ್ನದ ಸರವನ್ನು ಹಾಕಿಕೊಂಡು ಮೀಸಲಾದ ಸ್ಥಳದ ಮೇಲೆ ಮಂಡಿಸಿದ ಕೂಡಲೇ ಹೆಣ್ಣಿನ ತಾಯಿ ಆರತಿಯನ್ನು ತೆಗೆದುಕೊಂಡು ಬಂದು ಅಳಿಯನ ಅಂಗೈಯಲ್ಲಿ ಸಕ್ಕರೆ ಹಾಲನ್ನು ಹಾಕುತ್ತಾಳೆ. ಈ ಪ್ರಸಂಗಕ್ಕಾಗಿಯೇ ಕಟ್ಟಿದ ಹಾಡನ್ನು ಕೋಕಿಲವಾಣಿಯೊಬ್ಬಳು ಯಾರಿಗೂ ತಿಳಿಯದ ಕೇಳಿಸದ ದನಿಯಲ್ಲಿ ಹಾಡುತ್ತಾಳೆ.

ಆಮೇಲೆ ಊಟದ ಶಾಸ್ತ್ರ ಪ್ರಾರಂಭವಾಗುತ್ತದೆ.

ಗಂಡಿನ ಕಡೆಯ ಬೀಗಿತ್ತಿಯರ ಕಿರುಕುಳ ಪ್ರಾರಂಭವಾಗುತ್ತದೆ. ಸಾರಿಗೆ ಉಪ್ಪು ಇಲ್ಲ, ತುಪ್ಪನಾರುತ್ತದೆ. ಹೋಳಿಗೆ ಕರಕಾಗಿರುತ್ತದೆ. ಬಿಸೀ ಹೋಳಿಗೆ ತೆಗೆದುಕೊಂಡು ಬನ್ನಿರಿ, ಹಾಲು ಇಲ್ಲವೇನು ? ಮಂಡಿಗೆಯನ್ನು ಇಷ್ಟು ಬಿಗಿಯಾಗಿ ಏಕೆ ಬಡಿಸುತ್ತೀರಿ ? ನೀರಿಗೆ ಪಚ್ಚಕರ್ಪೂರವನ್ನೇಕೆ ಹಾಕಿಲ್ಲ. ಮೊದಲಾದ ಮಾತುಗಳು ಪ್ರಾರಂಭವಾಗುವ ಹೊತ್ತಿಗೆ ವಾತಾವರಣ ಕಾಯ್ದು ಪ್ರಕ್ಷುಬ್ಧವಾಗುತ್ತದೆ.

ಹೆಣ್ಣಿನ ಬೀಗರ ಸಹನೆ ಕೊನೆಯಂಚನ್ನು ದಾಟಿದರೂ ಅವರು ಎಲ್ಲವನ್ನೂ ತೆಪ್ಪಗಾಗಿ ಕೇಳಬೇಕು.

ಈ ಹೊತ್ತಿಗೆ ಕಾವ್ಯಸತ್ಕಥಾಲಾಪ ಪ್ರಾರಂಭವಾಗುತ್ತದೆ. ಸತಮಾನದಿಂದ ನಡೆದುಬಂದ ಹಾಡುಗಳು ವೈಯಕ್ತಿಕ ಟೀಕೆಗಳಿಂದ ತುಂಬಿರುತ್ತವೆ. ಚರಣದ ಕೊನೆಯಲ್ಲಿ ಯಾರನ್ನು ಟೀಕಿಸುವದಿದೆಯೋ ಅವರ ಹೆಸರನ್ನು ಹಾಕಿಬಿಟ್ಟರಾಯಿತು. ಕವನ ಪೂರ್ಣವಾಗುತ್ತದೆ.

ಈ ಹಾಡಿನ ಸ್ಪರ್ಧೆ ಇಬ್ಬಣಗಳಲ್ಲಿಯೂ ನಡೆಯುತ್ತದೆ. ಅತ್ಯುಗ್ರವಾದ ಟೀಕೆಗಳು ಕಾವ್ಯಮಯವಾಗಿ ನಡೆಯುತ್ತವೆ.

ಇದು ಗಂಡಾಂತರದ ಪ್ರಸಂಗವೇ ಆಗಿರುತ್ತದೆ.

ಈ ಪ್ರಸಂಗವು ಈಗ ಇಲ್ಲಿಯೂ ಬಂದಿತು. ಹೆಣ್ಣಿನ ಕಡೆಯ ಮಧುರವಾಣಿಯೊಬ್ಬಳು ತನ್ನ ಗೊಗ್ಗರದನಿಯಲ್ಲಿ ಹಾಡನ್ನು ಹೇಳತೊಡಗಿದಳು.

'ಮೋಸ ಹೋದೆವವ್ವಾ ! ಮಗಳನು ಧಾರೆಯೆರೆದುಕೊಟ್ಟು ! ನಾವು ಮೋಸ ಹೋದೆವವ್ವಾ' 'ಇದು ಕವನದ ಪಲ್ಲವಿಯಾಗಿತ್ತು. ಈ ಹಾಡಿನಲ್ಲಿ' ನಮ್ಮ ಕನ್ನೆ ಸಕ್ಕರೆಯ ಗೊಂಬೆಯಾಗಿದ್ದಾಳೆ. ಗಂಡು ಕಬ್ಬಿಣದ ಗಂಡು ಗೊಂಬೆಯಾಗಿದ್ದಾನೆ. ಹುಡುಗನು ಕಾಮಣ್ಣನೆಂದು ಹೇಳಿದ್ದರಿಂದ ನಾವು

ಮಗಳನ್ನು ಕೊಟ್ಟೆವು. ಆದರೆ ಈ ಕಾಮಣ್ಣ ಭೀಮಣ್ಣನಾಗಿದ್ದಾನೆ. ನಮ್ಮ ಹುಡಿಗೆಯ ಬಣ್ಣ ಕೆಂಪುಗುಲಾಬಿ. ಗಂಡಿನ ಬಣ್ಣ ಗುಂಗೀ ಹುಳದ ಬಣ್ಣ. ಹೀಗೆ ಮೋಸಮಾಡಿದ........ಭೀಮರಾಯ....ರು.....“ ......ಕೇಶವರಾಯರಿಗೆ........ಮೋಸಮಾಡಿದರು.” ಮೊದಲಾದ ಮಾತುಗಳು ಓತಪ್ರೋತವಾಗಿ ಹರಿಯತೊಡಗಿದವು.

ಈ ಸವಾಲನ್ನು ಸ್ವೀಕರಿಸಿ ಗಂಡಿನ ಕಡೆಯ ಇನ್ನೊಬ್ಬ ಮಂಜುಳವಾಣಿ ಚೀರತೊಡಗಿದಳು.

“ ಬುದ್ಧಿ ಹೋಯಿತವ್ವಾ ನಮ್ಮದು ! ಬುದ್ಧಿ ಹೋಯಿತವ್ವಾ ! ದರಿದ್ರ ಹೆಣ್ಣಸು ಮನೆತುಂಬಿಸಿಕೊಂಡು ||ಪಲ್ಲವಿ|| ಇದು ಕೈಲಾಗದ ಕಣಕದ ಮುದ್ದಿಯಾಗಿದೆ ಈ ಹೆಣ್ಣು. ನಮ್ಮ ಹುಡುಗನು ಎಮ್.ಎ., ಬಿ.ಎ. ಪಾಸಾಗಿದ್ದಾನೆ. ಎಸ್.ಎಸ್.ಎಲ್.ಸೀಯನ್ನೂ ಪಾಸಾಗಿದ್ದಾನೆ. ಕನ್ನಡ ಅಂಕಲಿಪಿಯನ್ನೂ ಓದಿದ್ದಾನೆ. ಆದರೇನು ಈ ಹೆಣ್ಣು ಕೋಣನ ತಂಗಿ ” ಎಂಬ ಮತಿತಾರ್ಥದ ಭಯಂಕರ ಹಾಡನ್ನು ಚೀರಿ ಚೀರಿ ಹಾಡಿದಳು.

ಕೂಡಲೇ ಹೆಣ್ಣಿನ ಕಡೆಯವಳು ದನಿ ತೆಗೆದಳು.

“ ಎಮ್ಮೀಕಾಯೂದು ಗೊತ್ತಿದ್ದವರು ಎಮ್.ಎ. ಆಗಿದ್ದಾರೆ. ಇದು ಎಂತಹ ಅಚ್ಚರಿ. ನಮ್ಮ ಕನ್ನೆಯಂತೂ ಕೋಣನ ತಂಗಿಯಲ್ಲ. ವರನು ಮಾತ್ರ ಕೋಣನ ತಮ್ಮನಾಗಿರಬೇಕು.

ಎಲ್ಲರೂ ಗಹಗಹಿಸಿ ನಕ್ಕರು. ವಿಠ್ಠಲನ ಕಣ್ಣು ಕೆಂಪಗಾದವು. ಆದರೂ ಆ ಸನ್ನಿವೇಶಕ್ಕೆ ತಕ್ಕ ಗಾಂಭೀರ್ಯವನ್ನು ಪ್ರದರ್ಶಿಸುತ್ತ ಅವನು ಸುಮ್ಮನೆ ಕುಳಿತುಬಿಟ್ಟನು.

ಆಮೇಲೆ ಬೀಗಿತ್ತಿಯರ ಭರ್ತ್ಸನೆ ನಡೆಯಿತು. ಕಾಶೀಬಾಯಿ ಇಂಥವಳು, ' ಕಾಂತಾಬಾಯಿ ಅಂಥವಳು. ನಮ್ಮ ಮಗಳು ಮಾತ್ರ ಗುಣವಂತಿ.

ಮೊದಲಾದ ಮುಕ್ತಾಫಲಗಳು ಹೊರಡತೊಡಗಿದವು.

“ಹರಕು ಹೋಳಿಗೆ ಹಾಕಲು ಗತಿ ಇಲ್ಲದವರು ಗೌಡರ ಮನೆಯ ಬೀಗತನ ಮಾಡಬಾರದಾಗಿತ್ತು. ಗೌಡರ ಓಲೇಕಾರನ ಯೋಗ್ಯತೆಯೂ ಇವರಿಗಿಲ್ಲ. ಹೆಣ್ಣು ಬೀಗಿತ್ತಿಯ ಬಾಯಿ ಅಗಲವಾಗಿದೆ. ಮುಖ ಸೊಟ್ಟವಾಗಿದೆ.” ಮೊದಲಾದ ಮಾತುಗಳು ಹಾಡಿನಲ್ಲಿ ಹೊಳೆಯಂತೆ ನುಗ್ಗತೊಡಗಿದವು.

ತಮ್ಮ ಸಾರ್ವಜನಿಕವಾದ ಭರ್ತ್ಸನೆಯನ್ನು ಕೇಳಲಾಗದೆ ಹೆಣ್ಣಿನ ಕಡೆಯವಳು ಹಾಡಿನಲ್ಲಿ ಮತ್ತೆ ಉತ್ತರಕೊಟ್ಟಳು.

"ಹರಕು ಹೋಳಿಗೆಯೆಂದು ಅನ್ನುವವಳ ಧೈರ್ಯ ನೋಡಿರೆ! ಅವಳ ಹೊಟ್ಟೆಯ ಕಡೆಗಿಷ್ಟು ನೋಡಿರೆ! ಇಪ್ಪತ್ತು ಹೋಳಿಗೆಗಳನ್ನು ಗಪ್ಪನೆ ನುಂಗಿಬಿಟ್ಟಿದ್ದಾಳೆ. ಕೀರು ಪಾಯಸದ ಬೋಗೋಣಿಯನ್ನು ಬರಿದು ಮಾಡಿ ತಳವನ್ನು ನೆಕ್ಕುತ್ತಿದ್ದಾಳೆ. ಇಂತಹ ಹೊಟ್ಟೆಬಾಕರನ್ನು ನಾವು ಎಲ್ಲಿಯೂ ನೋಡಿಲ್ಲ.

ಹಾಡು ಪ್ರಾಸಬದ್ಧವಾಗಿತ್ತು. ಆದುದರಿಂದ ಅದರ ಪರಿಣಾಮ ನೇರವಾಗಿ ಹೃದಯವನ್ನು ಮುಟ್ಟಿತು. ವಿಠ್ಠಲನು ಒಮ್ಮೆಲೇ ಎದ್ದು ನಿಂತು 'ಈ ಗೊಲ್ಲರ ಹೆಂಗಸರ ಹಾಡನ್ನು ಕೇಳಲು ನನ್ನಿಂದ ಸಾಧ್ಯವಿಲ್ಲ. ಇವು ಹೆಂಗಳಲ್ಲ; ಮಂಗಗಳು' ಎನ್ನುತ್ತ ಬಿರಬಿರನೆ ನಡೆದುಬಿಟ್ಟನು.

ಕಾಶೀಬಾಯಿ ಸರ್‍ರನೇ ಎದ್ದು ಅಳಿಯದೇವರಿಗೆ ಹೇಳಿದಳು "ಆಪೋಷಣ ತೆಗೆದುಕೊಳ್ಳದೇ ಎದ್ದು ಹೋಗಬಾರದು ಬನ್ನಿರಿ ಭಾವಜಿಯವರೆ!"

ವಿಠ್ಠಲ ತಡೆದುನಿಂತು ಹೇಳಿದನು,

"ಈ ಕಾಡುಪ್ರಾಣಿಗಳ ಮಧ್ಯದಲ್ಲಿ ನಾನು ಕುಳಿತುಕೊಳ್ಳಲಾರೆ ಅತ್ತಿಗೆ!

"ಬನ್ನಿರಿ! ಬನ್ನಿರಿ! ಆರತಿ ಮಾಡಿಸಿಕೊಂಡೇ ಹೋಗಬೇಕು"

ಎಂದು ಕಾಶೀಬಾಯಿಯ ಮಾತಿಗೆ ಮನ್ನಣೆಕೊಟ್ಟು ಅಳಿಯದೇವರು ಮತ್ತೆ ಬಂದು ಆಶೀನರಾದರು.

ಆರತಿಯ ಹಾಡು ಗಂಭೀರವಾಗಿತ್ತು. ಆ ಹಾಡಿನಲ್ಲಿ ವಿಠ್ಠಲನು ರಾಧಾರಮಣನಾಗಿದ್ದನು. ಸುಂದರ ಪುರುಷನಾಗಿದ್ದನು. ಲಕ್ಷ್ಮೀಪತಿಯಾಗಿದ್ದನು. ಭಾಗ್ಯದೇವತೆಯಾಗಿದ್ದನು. ವೆಂಕಟರಮಣನಾಗಿದ್ದನು.

ಈ ಹಾಡನ್ನು ಕೇಳಿ ಅವನಿಗೆ ಬಹಳ ತೃಪ್ತಿಯಾಯಿತು.

ವಿಕೋಪಕ್ಕೆ ಹೋಗಬಹುದಾದ ಪ್ರಸಂಗವು ಸಮಾಂತವಾಗಿ ಪರಿಣಮಿಸಿದರೂ ಇನ್ನೊಂದು ಸಂದರ್ಭ ಮತ್ತೆ ಹೊಗೆ ಎಬ್ಬಿಸಿತು.

ಬೀಗಿತ್ತಿಯರ ವೀಳ್ಯಗಳಲ್ಲಿ ಉಪ್ಪು ಬೆರೆತದ್ದೇ ಈ ಹೊಗೆಯ ಕಾರಣವಾಗಿತ್ತು.

ಇದನ್ನು ತಿಳಿದ ಹೆಣ್ಣಿನ ಬೀಗಿತ್ತಿ ಓಡುತ್ತಬಂದು

" ಇದು ಛಂದದ ಕೆಲಸ, ದಯಮಾಡಿ ಸಿಟ್ಟಿಗೇಳಬೇಡಿರಿ. ಈಗ ಕರ್ಪೂರ ವೀಳ್ಯೆಯನ್ನು ತಂದಿದ್ದೇನೆ.

" ವೀಳ್ಯೆಯಲ್ಲಿ ಉಪ್ಪುಜೆರೆಸುವದು ಎಂಥ ಛಂದದ ಕೆಲಸವೇ !

" ನಿಮಗೇನು ಮದುವೆಯ ಸಂಪ್ರದಾಯ ಗೊತ್ತಿಲ್ಲವೇನು ? ನಾಳೆ ಬೆಳಗಾದರೆ ನಿಮ್ಮಲ್ಲಿಯೂ ಇದು ನಡೆಯುವದದೆ. ಅಲ್ಲಿ ನಾನೇ ಇರುತ್ತೇನಲ್ಲ. ಏನು ಮಾಡುತ್ತೀರಿ ನೋಡಲಿಕ್ಕೆ" ಎಂದು ಬೀಗಿತ್ತಿ ಆತ್ಮೀಯವಾಗಿ ಮಾತಾಡಿದ್ದರಿಂದ ಎಲ್ಲರ ಶಿಟ್ಟೂ ಇಳಿದುಹೋಯಿತು.

ಬೀಗರು ಹೊರಡುವ ಸಮಯಕ್ಕೆ ಇನ್ನೊಂದು ಗಂಭೀರಪ್ರಸಂಗ ತಲೆದೋರಿತು.

ಗಾಡಿಗಳೆಲ್ಲ ಸಿದ್ಧವಾದವು. ಅವುಗಳಲ್ಲಿ ಸಾಮಾನುಗಳನ್ನೆಲ್ಲ ಹೇರಿ ಆಯಿತು. ಸ್ವತಃ ಭೀಮರಾಯರು ಇದರ ಮೇಲ್ವಿಚಾರಣೆ ಮಾಡುತ್ತಿದ್ದರು. ಅಷ್ಟರಲ್ಲಿ ಬೀಗರಕಡೆಯ ಪ್ರತಿಷ್ಠಿತನೊಬ್ಬನು ಬಂದು ತನಗೆ ಗಾಡಿಯಲ್ಲಿ ಹೇರಿದ ಸಾಮಾನುಗಳನ್ನೆಲ್ಲ ಪರೀಕ್ಷಿಸಬೇಕಾಗಿದೆ ಎಂದು ಹೇಳಿದನು.

ಇದನ್ನು ಕೇಳಿದ ಭೀಮರಾಯರ ಸಿಟ್ಟು ನೆತ್ತಿಗೇರಿತು.

" ನಮ್ಮ ಸಾಮಾನುಗಳನ್ನು ನೀವೇಕೆ ನೋಡುವಿರಿ ?

ಉತ್ತರದ ದನಿಯಲ್ಲಿ ಭೀಮಣ್ಣಾ ಕೇಳಿದನು.

" ನಮ್ಮ ಸಾಮಾನುಗಳು ಕಳವಾಗಿವೆ. ಅವು ಇಲ್ಲಿಯೇ ಇವೆಯೆಂದು ನಮಗೆ ಅನ್ನಿಸದಿದ್ದರೂ....... ........

" ನಾವು ತುಡುಗುಮಾಡಲು ಇಲ್ಲಿ ಬಂದಿರುವೆವೆಂದು ನಿಮ್ಮ ಅಭಿಪ್ರಾಯವೆ ?

" ಈ ಸಾಮಾನುಗಳು ಇಲ್ಲಿ ಇಲ್ಲವೆಂದು ನಿಮಗೆ ಅನ್ನಿಸುತ್ತಿದ್ದರೆ ನಾವು ನೋಡುವದನ್ನೇಕೆ ಬೇಡವೆನ್ನುವಿರಿ ?

" ನಾನು ಖಂಡಿತವಾಗಿ ನೋಡಗೊಡುವದಿಲ್ಲ.

" ಇದರ ಮೇಲಿಂದ ನೋಡಿದರೆ........

" ಏನು ?....ಏನೆನ್ನುವಿಯೋ ಬದಮಾಷ್ !

ಎಂದ ಭೀಮರಾಯರು ಎದುರುನಿಂತ ಪ್ರತಿಷ್ಠಿತನ ಕೆನ್ನೆಗೊಂದು ಬಲವಾದ ಏಟುಕೊಟ್ಟು ಹೇಳಿದನು.

" ಗಾಡಿಯನ್ನು ಮುಂದೆ ಸಾಗಿಸಿರಿ. ಇವನೇನಾದರೂ ಅಡ್ಡ ಬಂದರೆ ಅವನ ಮೇಲೆಯೇ ಗಾಡಿ ಹಾಯಿಸಿ ಹೊಡೆದುಕೊಂಡು ಹೋಗಿರಿ.

ಭೀಮರಾಯರ ಪಕ್ಕದಲ್ಲಿದ್ದ ಅವರ ಸಾರಥಿ ಕೈಯೊಳಗಿನ ಕೋಲಿನಿಂದ ಆ ಸದ್ಗ್ರಹಸ್ಥನಿಗೆ ಮತ್ತೊಂದುಕೊಟ್ಟು 'ದಣಿಯರ ನಿಬ್ಬಣವೆಂದರೆ ಏನು ತಿಳಿದೀಯೋ ಕಳ್ಳ ನನ್ನ ಮಗನೆ!' ಎಂದು ದಬ್ಬಿಬಿಟ್ಟನು.

ಸದ್ಗ್ರಹಸ್ಥನು ಧಡಾರೆಂದು ಕಲ್ಲಮೇಲು ಬಿದ್ದದ್ದರಿಂದ ಅವನ ಹಣೆಗೆ ಬುಗುಟಿ ಎದ್ದಿತು.

ಆ ಹೊತ್ತಿಗೆ ಕೇಶವರಾಯರು ಧಾವಿಸಿ ಬರದಿದ್ದರೆ ಅಲ್ಲಿ 'ಮಾರಾಮಾರಿ' ಆಗುವ ಸಂಭವವೇ ಹೆಚ್ಚಾಗಿತ್ತು.

" ಭೀಮಣ್ಣ! ಭೀಮಣ್ಣ! ತಪ್ಪಾಯಿತು.

ಕೇಶವರಾಯರು ಕರಜೋಡಿಸಿ ಹೇಳಿದರು.

" ನಿಮ್ಮೊಡನೆ ಬೀಗತನ ಮಾಡಿದ್ದು ನಮ್ಮದೇ ತಪ್ಪಾಗಿದೆ.

" ತಿಳಿಯದೇ ಮಾತಾಡಿದ್ದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ ಭೀಮಣ್ಣ ಇಗಾ! ಇಲ್ಲಿನೋಡು!"

ಎನ್ನುತ್ತ ಕೇಶವರಾಯರು ನೆಲದಮೇಲೆ ದೀರ್ಘವಾಗಿ ಬಿದ್ದು ಸಾಷ್ಟಾಂಗನಮುಸ್ಕಾರ ಮಾಡಿದರು.

ಭೀಮರಾಯ ಆ ಕಡೆಗೆ ನೋಡದೆ

" ಇರಲಿ ಬಿಡಿರಿ. ಈ ಬುಟ್ಟಿಣಚಾರ ನನ್ನ ಮುಂದೆ ನಡೆಯುವದಿಲ್ಲ ಗೌಡರ ಕೈ ನಿಮಗೆ ಗೊತ್ತಿದ್ದಂತೆ ಕಾಣುವದಿಲ್ಲ.

" ತಪ್ಪಾಯಿತೆಂದು ಹೇಳಿದೆನಲ್ಲ ಭೀಮಣ್ಣ!

ಆ ವೇಳೆಗೆ ನವವಧುವನ್ನು ಕರೆದುಕೊಂಡು ಕಾಶೀಬಾಯಿ ಅಲ್ಲಿಗೇ ಬಂದಳು.

ಈ ಮಾತು ಇಲ್ಲಿಗೇ ನಿಂತಿತು.

ಸರಳಾನನ್ನು ಕಳಿಸಲು ಆ ಹಳ್ಳಿಯ ಜನವೆಲ್ಲ ಬಂದಂತಿತ್ತು. ಎಲ್ಲರ ಕಣ್ಣುಗಳಲ್ಲಿ ನೀರು ತುಳುಕಾಡುತ್ತಿದ್ದವು. ಅವಳ ತಾಯಿಯಂತೂ ಆಗಾಗ ಧಾರೆಯಾಗಿ ಬರುತ್ತಿರುವ ಕಣ್ಣೀರಿನ ಹೊಳೆಯನ್ನು ನೇವರಿಸಿಕೊಳ್ಳುತ್ತಿದ್ದಳು.

ಮಗಳನ್ನು ನೋಡಿ ಕೇಶವರಾಯರ ಕಂಠ ತುಂಬಿಬಂದಿತು. ಕಣ್ಣೀರು ಚಲ್ಲವರಿಯಿತು.

" ಹೋಗಿ ಬರುತ್ತೀಯಾ?........

" ಅಪ್ಪಾ!

" ಹೋಗಿ ಬಾ! ತಾಯಿ! ಇಲ್ಲಿ ನೋಡು ಸರಳಾ! ಈ ತಾಯಿ

ನಿನ್ನ ಯಜಮಾನರ ಅತ್ತಿಗೆ ನಿನ್ನನ್ನು ಸಕ್ಕರೆಯ ಹಾಗೆ ನೋಡಿಕೊಳ್ಳುತ್ತಾರೆ. ಅವರು ನಡೆಸಿದ ದಾರಿಯಲ್ಲಿ ನಡಿಯುತ್ತಿರು. ತಾಯಿ! ಇನ್ನುಮೇಲೆ ಇವಳು ನಿನ್ನ ಮಗಳು. ನಾವು ಹೆತ್ತು ಸಾಕಿ ಸಲುಹಿ ಇವಳನ್ನು ನಿನ್ನ ಮಡಿಯಲ್ಲಿ ಹಾಕಿದ್ದೇವೆ. ಇವಳನ್ನು ನೋಡಿಕೊಳ್ಳುವ ಭಾರ ನಿಮ್ಮದು."

ಎನ್ನುತ್ತ ಕೇಶವರಾಯರು ಕಣ್ಣುಗಳಿಗೆ ಧೋತರಚುಂಗನ್ನು ಒತ್ತಿಕೊಂಡರು.

ಕಾಶೀಬಾಯಿ ಈ ಮಾತನ್ನು ಕೇಳಿ ಕರಗಿಹೋದಳು. ಇಷ್ಟು ಜನರಲ್ಲಿ ತನಗೆ ಕೊಟ್ಟ ಈ ಗೌರವದಿಂದ ಅವಳಲ್ಲಿ ತಾಯಿತನವೇ ತುಂಬಿತು.

ಅವಳ ಕಣ್ಣಲ್ಲಿಯೂ ನೀರು ಬಂದಿತು.

" ನಿಮ್ಮ ಮಗಳನ್ನು ನಾನು ಹೇಗೆ ನೋಡಿಕೊಳ್ಳುತ್ತೇನೆಂಬುದನ್ನು ಆಮೇಲೆ ಅವಳನ್ನೇ ಕೇಳಿರಿ. ನೀವು ಕಾಳಜಿ ಮಾಡಬೇಡಿರಿ"

ಎಂದಳು.

" ಕಾಂತಕ್ಕ!

" ಅಕ್ಕನು ಹೇಳಿದುದನ್ನು ನಾನೂ ಹೇಳಬೇಕೆ?

ಕೇಶವರಾಯರಿಗೆ ಅತ್ಯಂತ ತೃಪ್ತಿಯಾಯಿತು.

ಸಂತೋಷದಿಂದ ಬೀಗರನ್ನು ಬೀಳ್ಕೊಟ್ಟರು.

ಒಂದು ಮದುವೆಯನ್ನು ಮುಗಿಸಿಕೊಂಡು ಬಂದ ದಣುವು ಆರುವ ಪೂರ್ವದಲ್ಲಿಯೇ ಇನ್ನೊಂದು ಮದುವೆಯ ಸಿದ್ಧತೆಯನ್ನು ಮಾಡಬೇಕಾದ ಸಂದರ್ಭ ಬಂದದ್ದರಿಂದ ಮನೆಯಲ್ಲಿ ಯಾರಿಗೂ ವಿಶ್ರಾಂತಿಯ ಅರಿವಿಲ್ಲದಾಯಿತು.

ಇದು ಮನೆಯ ಮುಂದೆ ಹಂದರಹಾಕಿ ಮಗಳ ಧಾರೆಯನ್ನು ಮಾಡಿಕೊಡಬೇಕಾದ ಸಂದರ್ಭವಾಗಿದ್ದರಿಂದ ಹೊಣೆಗಾರಿಕೆ ಹೆಚ್ಚಾಗಿತ್ತು. ಭಾವೂರಾಯರು ಇದ್ದಾಗ ಆ ಹಳ್ಳಿಯಲ್ಲಿ ಆದ ಈ ಮನೆತನದ ಮದುವೆಗಳನ್ನು ಸಮಸ್ತ ಹಳ್ಳಿಯೇ ಕಂಡುಂಡಿತ್ತು. ಆ ತೂಕಕ್ಕೆ ತಕ್ಕಹಾಗೆ ಈ ಮದುವೆಯೂ ನಡೆಯಬೇಕೆಂದು ಅಣ್ಣತಮ್ಮಂದಿರೆಲ್ಲ ಶ್ರಮಿಸಹತ್ತಿದರು.

ಸುಬ್ಬರಾಯರ ಅಂತಸ್ತಿಗೆ ತಕ್ಕಹಾಗೆ ಈ ಸಮಾರಂಭ ಜರಗಬೇಕು. ಪಟ್ಟಣದ ಮೋಟಾರುಕಾರು ಮೆರವಣಿಗೆಗೆ ಬೇಕು. ಮಿಲಿಟರಿ ಬ್ಯಾಂಡು ಬೇಕು. ನೂರಾರು ಗ್ಯಾಸಬತ್ತಿಗಳು ಬೇಕು. ಕುಣಿಯಲು ಒಬ್ಬಿಬ್ಬರು 'ಸಾನಿ'ಯರು ಬೇಕು.

ಭೀಮರಾಯ ಈ ಎಲ್ಲ ಸಂಗತಿಗಳನ್ನು ನೆನಪಿಟ್ಟುಕೊಂಡು ಬೇರೆ ಬೇರೆ ಜನರಿಗೆ ಆ ಆ ಕಾರ್ಯಗಳನ್ನು ಒಪ್ಪಿಸತೊಡಗಿದನು.

ಬಳವಂತಗೌಡರು ಹಿರಿಯರಾಗಿದ್ದರಿಂದ ಅವರು ಕೇವಲ ಮೇಲ್ವಿಚಾರಕರಾಗಿದ್ದರು. ಅಲ್ಲದೆ ಅವರಿಗೆ ಈ ಕೆಲಸಗಳ ಪರಿಚಯವಾಗಲಿ, ರೀತಿಯಾಗಲಿ ಇರಲಿಲ್ಲ.

ಭೀಮರಾಯನೇ ಮುಖ್ಯ ಸಂಚಾಲಕ.

ವಿಠ್ಠಲನ ಮದುವೆಯಲ್ಲಿ ಬೀಗನಾಗಿ ಮೆರೆದಾಡಿದ ರಾಜಣ್ಣ ತಂಗಿಯ ಮದುವೆಯಲ್ಲಿ ಟೊಂಕಕಟ್ಟಿಕೊಂಡು ನಿಂತನು. ರಮೇಶನ ಜನಕ್ಕೆ ಯಾವ ತರದ ತೊಂದರೆಯಾಗದೆ ಅವರು ರಾಜೋಪಚಾರವನ್ನು ಭೋಗಿಸಿ ಹೋಗ ಬೇಕೆಂದು ಅವನು ಹೊಳಪು ಹಾಕತೊಡಗಿದನು. ಇಲ್ಲಿ ನಡೆಯುವ ಅನೇಕ ಸಂಗತಿಗಳು ಅವನ ಮನಸ್ಸಿಗೆ ಬರದಿದ್ದರೂ ಯಾವುದಕ್ಕೂ ಅಡ್ಡಿ ಮಾಡದೆ ಎಲ್ಲರಲ್ಲಿ ತಾನೂ ಒಬ್ಬನಾಗಿ ಕೆಲಸಮಾಡತೊಡಗಿದನು.

ಸುಧಾ ಸಹೋದರಿಯ ಪ್ರೀತಿ ಇದರಲ್ಲಿ ಕೆಲಸಮಾಡುತ್ತಿತ್ತು.

ಧಾರಾಳವಾಗಿ ಹಣ ವೆಚ್ಚಮಾಡಲು ಎಲ್ಲರೂ ಒಪ್ಪಿದರು. ಇಂಥ ಮದುವೆ ಇನ್ನೆಲ್ಲಿಯೂ ಆಗಲಿಲ್ಲವೆಂಬಂತೆ ಯೋಗ್ಯ ವ್ಯವಸ್ಥೆಯನ್ನಿಡಲು ಬೇಕಾದ ವ್ಯವಸ್ಥೆಯನ್ನು ಮಾಡಲು ಮೇಲ್ವಿಚಾರಕರನ್ನು ನಿಯಮಿಸ ಲಾಯಿತು. ಅನೇಕ ಮಾನ್ಯರು, ಅಧಿಕಾರಿಗಳು, ದೇಸಾಯರು, ದೇಶ ಪಾಂಡೆಯರು, ಜಾಗೀರುದಾರರು ಈ ಮದುವೆಗೆ ಬರುವದು ನಿಶ್ಚಿತವಾಗಿದ್ದ ರಿಂದ ಅವರ ಅಂತಸ್ತಿಗೆ ತಕ್ಕಹಾಗೆ ಏರ್ಪಾಟು ನಡೆಯಬೇಕೆಂದು ಭೀಮ ರಾಯನ ಕಟ್ಟಪ್ಪಣೆಯಾಗಿತ್ತು.

ಈ ಸರಬರಾಯಿಯ ಕಾರ್ಯವನ್ನು ವಿಠ್ಠಲನಿಗೆ ಒಪ್ಪಿಸಿಕೊಡ ಲಾಯಿತು.

ಪಟ್ಟಣದ ಸಮಗ್ರ ಪರಿಚಯವಿದ್ದ ವಿಠ್ಠಲನೇ ಈ ಕೆಲಸಕ್ಕೆ ಯೋಗ್ಯ ನೆಂದು ಭೀಮರಾಯನಿಗೆ ಅನ್ನಿಸಿತ್ತು. ಈ ಕೆಲಸವನ್ನು ಅವನು ಜೋಕ್ಯಾಗಿ ಸಮರ್ಥರೀತಿಯಿಂದ ಮಾಡುವನೆಂಬ ಭರವಸೆಯೂ ಇತ್ತು.

ವಿಠ್ಠಲನು ಈ ಹೊಣೆಯನ್ನು ಸಂತೋಷದಿಂದ ಹೊತ್ತುಕೊಂಡನು.

ಕಾಲೇಜದಲ್ಲಿ, ಹಾಯಸ್ಕೂಲದಲ್ಲಿ, ವಾರ್ಷಿಕ ದಿನಾಚರಣೆ ಮಾಡುವ ದನ್ನು ಅವನು ನೋಡಿದ್ದ. ಅಲ್ಲಿಯ ವ್ಯವಸ್ಥೆಯ ರೀತಿ ಅವನ ಮನಸ್ಸು

ತುಂಬಿತ್ತು. ಈ ಮದುವೆಯಲ್ಲಿಯೂ ಆ ವ್ಯವಸ್ಥೆಯನ್ನೇ ಅಮಲಿನಲ್ಲಿ ತರಲು ವಿಠ್ಠಲನು ನಿಶ್ಚಯಿಸಿದ.

ಮದುವೆಯ ಮುನ್ನಾದಿನವೇ 'ಮನೋಹರ ಕೆಫೆ'ಯೊಂದು ಹಳ್ಳಿಯಲ್ಲಿ ನಿರ್ಮಾಣವಾಯಿತು. ಪಟ್ಟಣದ 'ಮನೋಹರ ಕೆಫೆ'ಯ ಯಜಮಾನನೆ ಇದನ್ನು ಮೂರು ದಿನಗಳ ಗುತ್ತಿಗೆ ಹಿಡಿಯುವಂತೆ ವಿಠ್ಠಲನು ಅವನ ಮನವೊಲಿಸಿದ. ಬೀಗರು, ಬಿಜ್ಜರು ಯಾರು ಬೇಕಾದವರು ಈ ಮೂರು ದಿನಗಳಲ್ಲಿ ಏನು ಬೇಡಿದರೂ ಕೊಡಲು ಅವನಿಗೆ ಅಪ್ಪಣೆ ಕೊಡಲಾಯಿತು. ಖಾಸ ಬೀಗರಿಗಾಗಿ ಅಲ್ಲಿಯೇ ಬೇರೆ ವ್ಯವಸ್ಥೆ ಮಾಡಿ ಅವರಿಗೆ 'ಸ್ಟೇನ್‌ಲೆಸ್ ಸ್ಟೀಲಿ'ನ ಪ್ಲೇಟಿನಲ್ಲಿ ಸಾಮಾನುಗಳನ್ನು ಕೊಡುವಂತೆಯೂ ಸ್ಪೆನ್ಸರ್ ಕಪ್ಪುಗಳಲ್ಲಿ ಪೇಯಗಳನ್ನು ಕೊಡುವಂತೆಯೂ ಹೇಳಲಾಯಿತು. ಈ ಅಂಗಡಿಯ ಬಾಜುವಿಗೆ ಪಾನಪಟ್ಟಿ, ಸಿಗರೇಟು, ತಂಬಾಕು, ಬೀಡಿ ಮೊದಲಾದವುಗಳನ್ನು ಇಡಲಾಯಿತು. ಅಲ್ಲಿ ರಾಧಾಸಾನಿಯ ತಂಗಿ ಹನುಮಿಯೇ ಕುಳಿತುಕೊಂಡು ಬೇಡಿದವರಿಗೆ ಅವರವರ ಸಾಮಾನುಗಳನ್ನು ಕೊಡಬೇಕೆಂದು ವಿಧಿಸಲಾಯಿತು. ಅವಳಿಗೆ ಭರ್ಜರಿಯಾದ ಬೆಲೆಯುಳ್ಳ ರೇಶಿಮೆಯ ಸೀರೆಯನ್ನು ಉಡಲು ಕೊಡಲಾಯಿತು.

ಉಡುಪಿಯವರೆಂದು ಹೇಳಿಕೊಳ್ಳುವ ನಾಲ್ಕು ಜನ ದಕ್ಷ ಅಡಿಗೆಯವರನ್ನು ತಂದು ಪ್ರತಿದಿನ ಪಂಚಭಕ್ಷ್ಯಗಳನ್ನು ಮಾಡಲು ಆಜ್ಞೆ ಕೊಡಲಾಯಿತು.

ಆಗಲೇ ಪಟ್ಟಣದಿಂದ ಬ್ಯಾಂಡ್, ಗ್ಯಾಸು, ಹೂವುಗಳ ಮಾಲೆಗಳು, ಸಾನಿಯರು, ಒಂದು ಸಾರೋಟು, ಎರಡು ಕಾರುಗಳು ಹಳ್ಳಿಗೆ ಬಂದುಬಿಟ್ಟವು.

ಈ ವ್ಯವಸ್ಥೆಯನ್ನು ನೋಡಿ ಭೀಮರಾಯನಿಗೆ ಅತ್ಯಂತ ತೃಪ್ತಿಯಾಯಿತು.

ಕಲಾವಿಧರಾದ ಸೇದಾರರು ಊರಿಗೇ ಹಂದರ ಹಾಕಿದಂತೆ ಮಾಡಿದರು. ಗೌಡರ ಮನೆಯ ಮುಂದಿನ ಚಪ್ಪರವಂತೂ ಕಲಾಮಯವಾಗಿ ಕಂಗೊಳಿಸಿತು.

ಈ ಹಂದರವನ್ನು ನೋಡಲೆಂದೇ ಬೇರೆ ಬೇರೆ ಹಳ್ಳಿಯಿಂದ ಜನ ಬರತೊಡಗಿತು. ಈ ಆಕರ್ಷಣೆಯ ಜತೆಗೆ ಅವರಿಗೆ ಸಾರೋಟು, ಕಾರು, ಸಾನಿಯರು ಈ ಆಕರ್ಷಣೆಗಳೂ ಇದ್ದವು. ಮುಖ್ಯವಾಗಿ ಹಳ್ಳಿಯಿಂದ ಬರುವ ಎಲ್ಲರಿಗೂ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ರೈತರ ನಾಲ್ಕು ಜನರು ಈ ಜವಾಬುದಾರಿಯನ್ನು ಹೊತ್ತುಕೊಂಡಿದ್ದರು.

ಲಗ್ನದ ಮುನ್ನಾದಿನ ಈ ಹಳ್ಳಿಯಲ್ಲಿ ಒಂದು ಜಾತ್ರೆಯೇ ನೆರೆಯಿತು.

ಪಟ್ಟಣದ ಬೇರೆ ಬೇರೆ ಚಿಲ್ಲರೆ ವ್ಯಾಪಾರಿಗಳು ಖಣ, ಕುಪ್ಪುಸ, ಮಿಠಾಯಿಗಳ ಅಂಗಡಿಗಳನ್ನೇ ತೆರೆದರು.

ಸುಧಾ ಇದೆಲ್ಲವನ್ನೂ ಬೆಕ್ಕಸಬೆರಗಾಗಿ ನೋಡುತ್ತಿದ್ದಳು. ತಾನು ತುಂಬುವ ಮನೆಯ ಶ್ರೀಮಂತಿಕೆಯನ್ನು ಮನಸ್ಸಿನಲ್ಲಿಯೇ ತೂಗಿ ಅನೇಕ ಕನಸಿನ ಗೋಪುರಗಳನ್ನು ಕಟ್ಟುತ್ತಿದ್ದಳು. ಗೌಡರ ಮಗಳು ಬಿನ್ನಾಣತೆಯಾಗಿ ಗಂಭೀರಭಾವದಿಂದ ತನ್ನ ಮದುವೆಗಾಗಿ ನಡೆದ ಸಿದ್ಧತೆಗಳನ್ನು ನೋಡುತ್ತಿದ್ದಳು.

ಈ ಮದುವೆಯ ಕೆಲಸದಲ್ಲಿ ಬಳವಂತಗೌಡನಿಗೆ ಯಾವ ಸ್ಥಾನವೂ ಇರಲಿಲ್ಲ. ಎಲ್ಲವನ್ನೂ ತಮ್ಮಂದಿರಿಗೆ ಒಪ್ಪಿಸಿ ಅವನು ನಿಶ್ಚಿಂತನಾಗಿ ಬಿಟ್ಟಿದ್ದನು.

ನಿಜವಾದ ಹಿರಿಯತನ ಭೀಮರಾಯನ ಪಾಲಿಗೆ ಬಂದಂತಾಗಿತ್ತು.

ಸ್ವಾಭಾವಿಕವಾಗಿ ಕಾಂತಾಬಾಯಿಗೆ ಹೆಣ್ಣುಮಕ್ಕಳ ಸಾಮ್ರಾಜ್ಯದಲ್ಲಿ ಪಟ್ಟ ಸಿಕ್ಕಿತು.

ಕಾಶೀಬಾಯಿಯನ್ನು ಯಾರೂ ಏನೂ ಕೇಳುತ್ತಿರಲಿಲ್ಲ. ಎಲ್ಲವೂ ಕಾಂತಾಬಾಯಿಯ ಸೂತ್ರದಲ್ಲಿಯೇ ನಡೆಯುತ್ತಿತ್ತು.

ಇದು ಕಾಶೀಬಾಯಿಯ ಹಿರಿಯತನಕ್ಕೆ ಬರೆ ಕೊಟ್ಟಂತಾಯಿತು. ಅವಳು ಒಳಗೊಳಗೆ ಕುದಿಯತೊಡಗಿದಳು. ಮನೆಯಲ್ಲಿ ಸಾವಿರ ಜನರು ಕೂಡಿದಾಗ ಇವಳ ಕುದಿಯನ್ನು ಯಾರು ಕೇಳಬೇಕು ?

ಆದರೆ ಜ್ವಾಲಾಮುಖಿ ಹೊತ್ತುತ್ತಲೆ ಇತ್ತು.

ಈ ಮದುವೆಯ ಮನೆಯಿಂದ ಎಲ್ಲಿಯಾದರೂ ದೂರ ಹೋಗಿಬಿಡಬೇಕೆಂದು ಅವಳು ವಿಚಾರಿಸತೊಡಗಿದಳು. ಇಲ್ಲಿ ತನ್ನ ಮನೆಯಲ್ಲಿ, ತಾನು ಹಿರಿಯ ಗೌಡಿತಿಯಾಗಿರುವಾಗ ತನ್ನನ್ನು ಕೇಳದೆ ಎಲ್ಲ ಕೆಲಸಗಳು ಆಗುತ್ತಿರುವ ಅವಮಾನವನ್ನು ಸಹಿಸುವದಕ್ಕಿಂತ ದೂರವಿರುವದೇ ಮೇಲೆಂದು ಅವಳು ಭಾವಿಸತೊಡಗಿದಳು.

ಮದುವೆಯ ಕಾರ್ಯ ಮುಗಿದಬಳಿಕ ಇದಕ್ಕೆ ಯೋಗ್ಯಶಾಸನ ಮಾಡಬೇಕೆಂದು ಅವಳು ಆಗಲೇ ನಿರ್ಧಾರಮಾಡಿಕೊಂಡಳು.

ಅವಳಲ್ಲಿ ಮತ್ಸರ ತುಂಬಿತು.

ಇದನ್ನೆಲ್ಲ ನೋಡಿಯೂ ನೋಡದಂತೆ ಸಾಂಬಶಿವನಾಗಿ ಕುಳಿತು

ಕೊಂಡಿರುವ ಗಂಡಿನ ಬಗ್ಗೆ ಅವಳಲ್ಲಿ ಆ ಮಟ್ಟಿಗೆ ತಿರಸ್ಕಾರವೇ ಮೂಡಿತು.

ಅಪಾರವಾದ ಜನಸಾಗರ ಹಳ್ಳಿಯನ್ನು ತುಂಬಿತು. ಬೀಗರು ಊರಹೊರಗೆ ಬಂದಿಳಿದಿರುವ ಸುದ್ದಿ ಬಂದಿತು. ಹತ್ತು ಕಾರುಗಳೂ, ಐದು ಟ್ರಕ್ಕುಗಳೂ, ಅನೇಕ ಎತ್ತಿನ ಬಂಡಿಗಳೂ ಬಂದಿರುವದಾಗಿ ವರ್ತಮಾನ ಬಂದಿತು.

ಅವರನ್ನು ಎದುರುಗೊಳ್ಳಲು ತಕ್ಕ ಏರ್ಪಾಡನ್ನು ಮಾಡಲಾಗಿತ್ತು. ಸ್ವಾಮಿಗಳ ಆನೆಯನ್ನು ಅಂಬಾರಿ ಸಹಿತ ಅಲ್ಲಿ ನಿಲ್ಲಿಸಲಾಗಿತು. ಒಂದೆರಡು ಒಂಟೆಗಳು ಅಲ್ಲಿದ್ದವು. ಮೆರವಣಿಗೆ ಭರ್ಜರಿಯಾಗಿ ಕಾಣಬೇಕೆಂದು ಈ ಸಿದ್ಧತೆಯಾಗಿತ್ತು. ಇದಕ್ಕೆ ವಿಠ್ಠಲನ ಉತ್ಸಾಹವೇ ಕಾರಣವಾಗಿತ್ತು.

ಬೀಗರನ್ನು ಕರೆತಂದು ಬೀಡಾರದಲ್ಲಿ ನಿಲ್ಲಿಸುವ 'ಎದುರುಗೊಳ್ಳು'ವ ಸಮಾರಂಭಕ್ಕಾಗಿ ಮಂಗಲವಾದ್ಯಗಳು ಘೋಷಿಸತೊಡಗಿದವು. ಬ್ಯಾಂಡು, ಬಜಂತ್ರಿ, ಕರಡಿಮಜಲು, ಮೊದಲಾದ ವಾದ್ಯವಿಶೇಷಗಳು ಮೊಳಗ ತೊಡಗಿದವು. ಏಳು ಹಳ್ಳಿಗಳ ಕೊಂಬಿನ ಸೇವಕರು ತಮ್ಮ ಕಾಳಿಗಳನ್ನು ಕ್ರಮವಾಗಿ ಭೋ.... ಭೋ.... ಬೋ.... ಎಂದು ಊದತೊಡಗಿದರು.

ವ್ಯವಸ್ಥೆಯೆಲ್ಲ ತೃಪ್ತಿಕರವಾದ ಕೂಡಲೇ ಭೀಮರಾಯನು ಬಾಳಣ್ಣ ಕೋಣೆಯಲ್ಲಿ ಬಂದನು. ಅವನು ಆಗಲೇ ತನ್ನ ಹಳೆಯ ಪದ್ಧತಿಯ ಜರದ ರುಮಾಲವನ್ನು ಸುತ್ತಿಕೊಂಡು ರೇಸಿಮೆಯ ನಿಲುವಂಗಿಯನ್ನು ತೊಟ್ಟು ಕೊಂಡು ಗೇಣಂಚಿನ ಹೊಸ ಧೋತರವನ್ನು ಉಟ್ಟುಕೊಂಡು ಸಿದ್ಧನಾಗಿದ್ದನು.

" ಇನ್ನು ಹೊರಡೋಣವಲ್ಲವೇ ಬಾಳಣ್ಣಾ !

" ನಾನಂತೂ ಸಿದ್ಧವಾಗಿಯೇ ನಿಂತಿದ್ದೇನೆ !

" ಅಣ್ಣಾ !

ಭೀಮರಾಯನ ಕಣ್ಣುಗಳಲ್ಲಿ ನೀರಿರುವುದನ್ನು ಬಳವಂತರಾಯನು ನೋಡಿ,

" ತಮ್ಮ ! ನಿನ್ನ ಕಣ್ಣೀರು ನನಗೆ ಅರ್ಥವಾಯಿತು. ತಂದೆಯನ್ನು ಮುಂದಿಟ್ಟುಕೊಂಡು ಈ ವೈಭವದ ಮದುವೆಯನ್ನು ಮಾಡುವದು ನಮ್ಮ ಹಣೆಯ ಬರಹದಲ್ಲಿ ಬರೆದಿರಲಿಲ್ಲ.

ಭೀಮರಾಯನು ವಸ್ತ್ರದಿಂದ ಕಣ್ಣನ್ನೊರಿಸಿಕೊಂಡು ಅಣ್ಣನನ್ನು ಆಲಿಂಗಿಸಿದನು.

ಬಾಳಣ್ಣನು ತಮ್ಮನ ಬೆನ್ನಮೇಲೆ ಕೈಯಾಡಿಸುತ್ತ ಹೇಳಿದನು 'ನಿನ್ನ ಈ ವ್ಯವಸ್ಥೆಯನ್ನು ತಂದೆ ಸ್ವರ್ಗದಲ್ಲಿಂದಲೇ ನೋಡಿ ಸಂತೋಷ ಪಡುತ್ತಾರೆ ಭೀಮಣ್ಣಾ !'

" ನಿನಗೆ ತೃಪ್ತಿಯಾಯಿತೇ ಅಣ್ಣಾ !

" ಆಗದೇನು ?

" ಅಂದಬಳಿಕ ತಂದೆಗೂ ತೃಪ್ತಿಯಾದಂತಾಯಿತು. ಹಿರಿಯಣ್ಣನಾದ ನೀನೇ ನಮ್ಮ ತಂದೆ.

ಬಾಳಣ್ಣನ ಕಣ್ಣುಗಳು ತೇವವಾದವು.

ಹೆಂಗಸರೆಲ್ಲ ಪೀತಾಂಬರಗಳನ್ನುಟ್ಟುಕೊಂಡು ಸಿದ್ಧರಾದರು. ಕಾಂತಾಬಾಯಿ ಮೂಗಿನಲ್ಲಿ ನತ್ತನ್ನು ಇಟ್ಟುಕೊಂಡು ಕೈಯಲ್ಲಿ ಬಂಗಾರದ ಕುಂಕುಮ ಕರಡಿಗೆಯನ್ನು ಹಿಡಿದು ನಿಂತಿದ್ದಳು.

ಭೀಮರಾಯನು ಅಲ್ಲಿ ಬಂದಾಗ ಕಾಶೀಬಾಯಿ ಇನ್ನೂ ಬಂದಿರಲಿಲ್ಲ.

" ಅತ್ತಿಗೆ ಎಲ್ಲಿ ?

ಹೆಂಡತಿಯನ್ನು ಉದ್ದೇಶಿಸಿ ಕೇಳಿದ ಮಾತು ಇದು.

" ಈಗ ಬಂದಾರು ?

" ಹೊತ್ತಾಗುತ್ತದೆ. ಬೇಗನೇ ಕರೆಯಲು ಕಳಿಸು.

ಕಾಂತಾಬಾಯಿ ಹುಬ್ಬನ್ನು ಏರಿಸಿ ಇಳಿಸಿದಳು. ತನ್ನ ಹಿರಿಯತನದ ಈ ಪಟ್ಟೆ ಪ್ರದರ್ಶನವನ್ನು ಕಳೆದುಕೊಳ್ಳಲು ಅವಳಿಗೆ ಇಚ್ಛೆ ಇರಲಿಲ್ಲ. ಆದರೂ ಅವಳು ಈ ಬಗ್ಗೆ ಹಟ ಹಿಡಿಯುವದು ಹೇಗೆ ಸಾಧ್ಯವಾದೀತು ? ಹಿರಿಯತನದ ಗೌರವ ಹಿರಿಯರಿಗೆ ಮಾತ್ರ ಸಲ್ಲಬೇಕಲ್ಲವೆ ? ಕಾಂತಾಬಾಯಿ ಭೀಮರಾಯನ ಹೆಂಡತಿಯಾದರೇನಾಯಿತು ? ಬಳವಂತಗೌಡನ ತಮ್ಮನ ಹೆಂಡತಿಯಲ್ಲವೆ ?

ಕಾಶೀಬಾಯಿ ಆಯತ್ತಸಮಯದಲ್ಲಿ ಎಲ್ಲಿಯೂ ಕಾಣಲಿಲ್ಲ.

ಭೀಮರಾಯ ಹೊರಗೆ ನಿಂತು ಗಡಿಬಿಡಿ ಮಾಡತೊಡಗಿದನು.

" ಬೇಗನೇ ಹೊರಬೀಳಿರಿ. ಅತ್ತಿಗೆ ? ಸುಮ್ಮನೆ ವಿಲಂಬವೇಕೆ ?

" ಇನ್ನೂ ಅಕ್ಕ ಬರಲಿಲ್ಲ.

ಕಾಂತಾ ಕೂಗಿ ಹೇಳಿದಳು.

" ಇಲ್ಲಿ ನಿಂತು ಕಾರುಭಾರ ಮಾಡುತ್ತೀಯೆ. ನೋಡು ಆದರೇನು

ಅಡಗಿಕೊಂಡು ಕುಳಿತಿರುವರೇನು ? ಬೇಗನೇ ಕರೆದುಕೊಂಡು ಬಾ ಇನ್ನೂ ಸಾವಿರ ಕೆಲಸಗಳಿವೆ.

ಆ ವೇಳೆಗೆ ಕಾಶೀಬಾಯಿಯ ದಾಸಿ ಬಿರಬಿರನೆ ಬಂದು ಕಾಂತಾ ಬಾಯಿಯ ಕಿವಿಯಲ್ಲಿ ಏನೋ ಹೇಳಿದಳು. ಕಾಂತಾಬಾಯಿಯ ಹುಬ್ಬು ಗಂಟಿಕ್ಕಿದವು, ಕೂಡಲೇ ಗಂಟು ಸಡಿಲವಾಗಿ ಮಂದಸ್ಮಿತವೂ ಮೂಡಿತು.

ಕೂಡಲೇ ಕಾಂತಾಬಾಯಿ ಗಂಡನನ್ನು ಪಕ್ಕಕ್ಕೆ ಕರೆದು ಹೇಳಿದಳು,

“ ಅಕ್ಕ ಹೊರಡುವಂತಿಲ್ಲ.

“ ಆಂ ?

“ ಅವರು ಮುಟ್ಟಾಗಿದ್ದಾರೆ,

ಈ ಮಾತನ್ನು ಅಲ್ಲಿಯೇ ನಿಂತ ಬಳವಂತಗೌಡನು ಕೇಳಿ,

“ ಇದು ಯಾರ ಕೈಯೊಳಗಿನ ಮಾತು ? ಮುಖ್ಯ ಈ ಸಮಾರಂಭ ದಲ್ಲಿ ಭಾಗವಹಿಸುವ ಪುಣ್ಯ ಅವಳಿಗಿಲ್ಲ. ಕಾಂತಾ ! ಕುಂಕುಮ ಕರಡಿಗೆ ಯನ್ನು ತೆಗೆದುಕೊಂಡು ದೇವರಿಗೆ ನಮಸ್ಕಾರಮಾಡಿ ಎಲ್ಲರನ್ನೂ ಮುಂದೆ ಹಾಕಿಕೊಂಡು ನಡೆದುಬಿಡು. ಈಗಲೇ ಸಾಕಷ್ಟು ವಿಲಂಬವಾಗಿಬಿಟ್ಟಿದೆ.

ಅನೇಕ ವಾದ್ಯಗಳ ಸರದಲ್ಲಿ, ಸಾವಿರಾರು ಜನರ ಗುಂಪು ಬೀಗರನ್ನು ಎದುರುಗೊಳ್ಳಲು ಸರಿಯಿತು.

ಅದೊಂದು ಅಪೂರ್ವವಾದ ಮೆರವಣಿಗೆಯಾಗಿತ್ತು. ಈ ಹಳ್ಳಿಯ ಇತಿಹಾಸದಲ್ಲಿ ಇಂತಹ ಮೆರವಣಿಗೆ ಆಗಿರಲಿಲ್ಲ. ಭಾವೂರಾಯರ ಮಕ್ಕ ಳೆಂದಬಳಿಕ ಕೇಳಬೇಕೆ ? ತಂದೆಯಂತೆ ಮಕ್ಕಳು.

ಈ ಮಾತುಗಳನ್ನು ಜನಜಂಗುಳಿಯಿಂದ ಕೇಳುತ್ತಲಿದ್ದ ಅಣ್ಣ ತಮ್ಮಂದಿರಿಗೆ ಬಾಳು ಸಾರ್ಥಕವೆನ್ನಿಸಿತು.

ಅವರಲ್ಲಿ ಅಭಿಮಾನ ಗರಿಮೂಡಿ ಉಡ್ಡಾಣಮಾಡಿತು.

ಮೇಲ್ಮಾಳಿಗೆಯ ಮೇಲೆ ನಿಂತು ಸುಧಾ ಈ ಅಬ್ಬರದ ನಿಬ್ಬಣವನ್ನು ನೋಡುತ್ತಿದ್ದಳು.

ಈ ಮದುವೆಯ ದಿನಗಳಲ್ಲಿ ಹಿರಿಯ ಅತ್ತಿಗೆ ಯಾವ ಉತ್ಸಾಹವನ್ನು ತೋರಿಸದೆ ಇರುವದು ಸುಧಾಳಿಗೆ ತಿಳಿದ ಮಾತಾಗಿತ್ತು. ಏನೋ ಅನಾರೋಗ್ಯ ವಾಗಿರಬೇಕೆಂದು ಅವಳು ಸಮಾಧಾನ ತಾಳಿದ್ದಳು. ಆದರೆ ಈಗ ಅವಳು ಮುಟ್ಟಾದ ಸಂಗತಿಯನ್ನು ಕೇಳಿ ಅವಳು ಗಾಟಿ ಕಟ್ಟಿಕೊಂಡಳು.

ಕೂಡಲೇ ಬಿರಬಿರನೆ ಕೆಳಗಿಳಿದು ಅವಳು ಕೆಳಗೆ ಬಂದಳು. ಗೋದ

ಲೆಯ ಆಚೆಗಿರುವ ಕೋಣೆಯತ್ತ ಸಾಗಿದಳು. ಮುಟ್ಟಾದವರೆಲ್ಲ ಕುಳಿತು ಕೊಳ್ಳುವದರ ಸಲುವಾಗಿ ಮೀಸಲವಾದ ಕೋಣೆ ಅದು.

ಅಲ್ಲಿ ಕಾಶಿಬಾಯಿ ಗದ್ದದಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಳು. ಅವಳ ಕಣ್ಣು ಕೆಂಪಗಾಗಿದ್ದವು. ಮುಖ ಸಿಂಡರಿಸಿತ್ತು.

" ಅತ್ತಿಗೆ !

" ಬಾ ! ಸುಧಾ ! ನೋಡು ನಿನ್ನ ಮದುವೆಯಲ್ಲಿ ಓಡಾಡಲು........

" ಆದರೆ ಇದೇನು ಅತ್ತಿಗೆ ?

" ಇದು ಯಾರ ಕೈಯೊಳಗಿನ ಮಾತು ಹೇಳು ?

" ಎಂಟು ದಿನಗಳ ಹಿಂದೆ ನೀವು ಮೈ ತೊಳೆದುಕೊಂಡಿಲ್ಲವೇ ಅತ್ತಿಗೆ?

" ಆದರೇನಾಯಿತು ? ಹೀಗಾಗಬಾರದೆಂದು............

" ಅತ್ತಿಗೆ....ಅತ್ತಿಗೆ....ನೀವು ನನ್ನ ತಾಯಿಯ ಸಮಾನರು....ನೀವು ಈ ರೀತಿ ಮಾಡಬಹುದೆ ?

" ನಾನೇನು ಮಾಡಲಿ ಹೇಳು...............

" ನಾಲ್ಕು ಜನರಲ್ಲಿ ಇದು ಛಂದಕಾಣಿಸುವದೆ ?

" ಇದ್ದಾಳಲ್ಲ. ನಿನ್ನ ಇನ್ನೊಬ್ಬ ಅತ್ತಿಗೆ. ಅವಳು ಮೆರೆದಾಡುತ್ತಾಳೆ ಮೆರೆದಾಡಲಿ.

" ಅಗ್ರಪಟ್ಟ ನಿಮ್ಮದು ಅತ್ತಿಗೆ !

" ಈ ಮನೆಯಲ್ಲಿ ನಾನು ಬಿಕನಾಸಿ ಸುಧಾ !

" ಇದೆಂತಹ ಮಾತು ನಿಮ್ಮದು ! ಈ 'ತುಂಬಿದಮನೆ'ಗೆ ನಿಮ್ಮನ್ನು ಬಿಟ್ಟರೆ ಯಾರು ಹಿರಿಯರು ?

" ನಾನು ಹಿರಿಯಳಲ್ಲ ಮಾರಾಯಳ ! ಅವಳೇ ಹಿರಿಯಳು. ಈ ಮನೆಯಲ್ಲಿ ಕಾರುಭಾರ ಮಾಡುವ ಅವಳು ಕಿರಿಯಳು ಹೇಗಾದಳು ಹೇಳು ? ಈ ಮನೆಯಲ್ಲಿ ನನ್ನದಾಗಲಿ, ನಿನ್ನ ಹಿರಿಯ ಅಣ್ಣಂದಿರದಾಗಲಿ ಏನು ನಡೆಯುತ್ತಿದೆ ಮಣ್ಣು. ನಾವು ಬಣವಿಯ ಹಿರಿಯರು ! ನಿನ್ನ ಹಿರಿಯ ಅಣ್ಣ ಕೂಳಿಗೆ ಬಿದ್ದ ಗಂಡುನಾಯಿ, ನಾನು ಅಶನಕ್ಕೆ ಬಂದ ಹೆಣ್ಣುನಾಯಿ."

ಕಾಶೀಬಾಯಿ ಹೃದಯದಲ್ಲಿಯ ಮಳ ಮಳಿಕೆಯನ್ನು ಕಾರಿದಳು. ಅವಳ ಕಣ್ಣಂಚಿನಲ್ಲಿ ನೀರೂರಿತ್ತು. ಮತ್ಸರದ ಬೇಗೆ ಹೃದಯವನ್ನು ಕೆಂಪಗೆ ಮಾಡಿತ್ತು.

ಸುಧಾನಿಗೆ ಅಣ್ಣನ ಹೆಂಡತಿಯ ಯಾವ ಮಾತುಗಳೂ ಅರ್ಥ

ವಾಗಲಿಲ್ಲ. ಅವಳಿಗೆ ಅರ್ಥವಾದ ಮಾತು ಒಂದೇ ಆಗಿತ್ತು. ತನ್ನ ತಾಯಿಯ ಸ್ಥಾನದಲ್ಲಿರುವ ಅತ್ತಿಗೆಯ ಮುಟ್ಟು ಕೇವಲ ನೆವವಾಗಿತ್ತು. ಇದು ಪೂರ್ಣ ಸುಳ್ಳಾಗಿದೆ ಎಂಬುದು,

ಸುಧಾಳಿಗೆ ದುಃಖವಾಯಿತು.

" ನೀವು ನನ್ನ ತಾಯಿಯಾಗಿ ಧಾರೆ ಎರೆದು....

" ನಿನ್ನ ಆಚ್ಚೆಯ ಅಣ್ಣ ಭೀಮಣ್ಣನ ಹೆಂಡತಿಯೂ ನಿನಗೆ ತಾಯಿಯ ಸಮಾನಳೇ ಅಲ್ಲವೇನು ?

" ಆದರೆ ನೀವು ಸುಳ್ಳು ಏಕೆ ?...............

" ನಾನೇಕೆ ಸುಳ್ಳು ಹೇಳಲಿ ಸುಮ್ಮನೆ ಹೋಗು.

ಸುಧಾಳಿಗೆ ಅಲ್ಲಿ ನಿಲ್ಲುವ ಮನಸ್ಸಾಗಲಿಲ್ಲ. ಈ ಮನೆಯಲ್ಲಿ ಆಗಾಗ ದುಸುಮುಸು, ಗುಸಿಗುಸಿ ಆಗುತ್ತಿರುವದನ್ನು ಅವಳು ಕಂಡಿದ್ದಳು. ಆದರೆ ಪರಿಸ್ಥಿತಿ ಈ ಮಟ್ಟಕ್ಕೆ ಬಂದಿರಬಹುದೆಂದು ಅವಳಿಗೆ ತಿಳಿದಿರಲಿಲ್ಲ. ಕುಂಬಾರನ ಆಲಿಯಲ್ಲಿ ಹಾಕಿದ ಹೊಗೆ ಒಳಗೆ ಕೆಂಡವನ್ನೇ ಅರಳಿಸಿದ್ದು ಅವಳಿಗೆ ಸ್ಪಷ್ಟವಾಗಿ ಗೋಚರಿಸಿತು.

ಅವಳು ತುಟಿಬಿಗಿದುಕೊಂಡು ಹೊರಟುಬಿಟ್ಟಳು.

ಬಾಳಣ್ಣನ ಕೈಹಿಡಿದವಳು ಬಾಳಣ್ಣ ಧರ್ಮಪತ್ನಿಯಾಗಿ ಗೌರವವನ್ನು ಹೊಂದಬಾರದಾಗಿತ್ತೆ ?

ಹಿರಿಯಗೌಡರ ಪತ್ನಿ ಇಷ್ಟು ಸಂಕುಚಿತ ಬುದ್ಧಿಯುವಳಾಗಬೇಕೆ ? " ಸುಧಾ ವಿಚಾರಿಸಿದಳು.

ಈ ಮಂಗಲ ಸಮಯದಲ್ಲಿ ಕಾಶೀಬಾಯಿಯ ನಡತೆ ಅಪಶಕುನವೆಂದೇ ಅವಳು ಭಾವಿಸಿದಳು.

ತವರು ಮನೆಯ ಭವಿಷ್ಯಚಿಂತನೆಯ ಒಂದು ಚಿಕ್ಕರೇಷೆ ಆಗಲೇ ಅವಳ ಮುಂದೆ ಮಿಂಚಿಹೋಯಿತು.

" ಎಂತಹ ಅಣ್ಣನಿಗೆ ಎಂತಹ ಹೆಂಡತಿ ! ಧರ್ಮರಾಯನಿಗೆ ಈ ರಕ್ಕಸಿ ಗಂಟು ಬೀಳಬೇಕೆ ?

ಸುಧಾಳ ಕಣ್ಣಲ್ಲಿ ನೀರೂರಿತು.

ಮದುವೆ ಅತ್ಯಂತ ವಿಜೃಂಭಣೆಯಿಂದಲೇ ನೆರವೇರಿತು. ಬೀಗರು ಅಚ್ಚುಕಟ್ಟಾದ ವ್ಯವಸ್ಥೆಯನ್ನು ನೋಡಿ ಬಹುವಾಗಿ ಮೆಚ್ಚಿದರು. ರಮೇಶ ನಂತೂ ತನ್ನ ದೈವ ತೆರೆಯಿತೆಂದೇ ಬಗೆದನು.

ಈ ಮೂರು ದಿನಗಳಲ್ಲಿಯ ಸಂಭ್ರಮವನ್ನು ಹಳ್ಳಿಗರೆಲ್ಲ ಅನುಭವಿಸಿದರು. ಪಟ್ಟದ ಸಾನಿಯರ ನೃತ್ಯಮೇಳವನ್ನೂ ಸಂಗೀತವನ್ನೂ ಕೇಳಿ ಅವರು ಬೆರಗುಪಟ್ಟರು. ಬೀಗರಂತೂ ಈ ಗಾಯನ ಸುಧೆಯಲ್ಲಿಮುಳುಗಿ ಮುಳುಗಿ ಎದ್ದರು.

ಬೇಕಾದಾಗ ತಿಂಡಿ ತಿನಿಸು, ಕುಳಿತಲ್ಲಿ ಮಣಿ, ನಿಂತಲ್ಲಿ ನೀರು. ಬೇಡಿದಲ್ಲಿ ಹಾಸಿಗೆ, ಈ ಸೌಕರ್ಯಗಳ ರಾಜೋಪಭೋಗದಲ್ಲಿ ಯಾರಿಗೆ ಅಸಂತೃಪ್ತಿಯಾಗದಿದ್ದೀತು. ವಿಠ್ಠಲನ ಈ ಕರ್ತೃತ್ವಶಕ್ತಿಯನ್ನು ಎಲ್ಲರೂ ಕೊಂಡಾಡಿದರು.

ಭೀಮರಾಯನ ಮೇಲೆ ಈಗ ಧಾರ್ಮಿಕವಿಧಾನದ ಬೇರೆ ಹೊರೆಯೂ ಬಿದ್ದದ್ದರಿಂದ ಅವನ ಶ್ರಮದ್ವಿಗುಣಿತವಾಗಿಬಿಟ್ಟಿತು. 'ಪುಣ್ಯಾಹವಾಚನೆ'ಯ ಪ್ರಾರಂಭದಿಂದ 'ಕನ್ಯಾದಾನ'ವಾಗುವ ವರೆಗೆ ಮಾಡಬೇಕಾದ ಎಲ್ಲ ಧಾರ್ಮಿಕ ವಿಧಾನಗಳಿಗೆ ಅವನೇ ನಿಲ್ಲಬೇಕಾಯಿತು.

ಇದು ಅಣ್ಣಾಸ ಕೆಲಸವಾಗಿತ್ತು. ಆದರೆ....

ಕಾಂತಾಬಾಯಿ ಅತ್ಯಂತ ನಡಗರದಿಂದ 'ಗೌಡತಿ'ಯಾಗಿ ಮೆರೆದಳು. ಯಾವ ದಣಿವನ್ನೂ ಲೆಕ್ಕಿಸದೆ ದುಡಿದಳು. ಅಧಿಕಾರದ ಕೋಡು ಅವಳಿಗೆ ಚೈತನ್ಯದಾಯಕವಾಗಿತ್ತು.

ಈ ಸಮಾರಂಭದಲ್ಲಿ ಒಂಟಿಗೂಬೆಯಾಗಿ ಕೋಣೆಯನ್ನು ಸೇರಿದವಳು ಕಾಶೀಬಾಯಿಯೊಬ್ಬಳೆ.

ಮೂರುದಿನ ಊರಿಗೆ ಊರೇ ಸುಗ್ರಾಸ ಭೋಜನವನ್ನುಂಡಿತು. ಅಕ್ಷರಶಃ ಜನ ಸಕ್ಕರೆ ತುಪ್ಪದಲ್ಲಿ ಕೈತೊಳೆಯಿತು. ಬೀಗರಂತೂ ತೃಪ್ತಿಯ ತೇಗನ್ನು ಬಿಡಹತ್ತಿದರು. ಕೊನೆಯ 'ಕಳ್ಳೂಟ'ದ ದಿನ ಒಂದು ಪ್ರಸಂಗ ನಡೆಯಿತು. ಈ ಪ್ರಸಂಗ ನಡೆಯುವದು ಯಾರಿಗೂ ಬೇಕಾಗಿರಲಿಲ್ಲವಾದರೂ ಹೆಂಗಸರ ಗುಂಪಿನಿಂದ ಇದರ ಬೀಜಾರೋಪಣವಾಯಿತು. ರಮೇಶನ ವಿಧವಾ ಅಕ್ಕ ಇದರ ಆಧ್ವರ್ಯವಾಗಿದ್ದಳು.

ಸಾಮಾನ್ಯವಾಗಿ ಸಾಂಪ್ರದಾಯಿತವಾದ ಹಳೆಯ ರೀತಿಯ ಮದುವೆಗಳಲ್ಲಿ ಈ ಸಂಪ್ರದಾಯ ನಡೆಯುತ್ತಿತ್ತು. ಅದು ಇಲ್ಲಿಯೂ ನಡೆಯಿತು. ಕೊನೆಯ ಊಟದ ದಿನ ಅಳಿಯದೇವರು 'ಸೆಟಕೊಂಡು' ಕುಳಿತು ಬಿಡುವದೇ ಈ ಸಂಪ್ರದಾಯ. ಇದರಲ್ಲಿ ಏನಾದರೂ ಬೇಡಿಕೆ ಇರುತ್ತಿತ್ತು. ಆ ಬೇಡಿಕೆಯನ್ನು ಸಲ್ಲಿಸುವವರೆಗೆ ಅಳಿಯದೇವರು ಊಟಕ್ಕೆ ಏಳುತ್ತಿರಲಿಲ್ಲ.

ಮದುವೆಯ ಮುಖ್ಯಪಾತ್ರವಾದ ಅಳಿಯನನ್ನು ಉಪವಾಸವಿರಿಸಿ ಬೀಗರಲ್ಲಿ ಯಾರೂ ಊಟಕ್ಕೆ ಹೋಗುತ್ತಿರಲಿಲ್ಲ, ಅವರವರ ಅಂತಸ್ತಿನ ಪ್ರಕಾರ ಈ ಬೇಡಿಕೆಗಳು ಮಂಡಿತವಾಗುವದು ವಾಡಿಕೆ. ಕೈಹಿಡಿದ ಸಮಾರಂಭದಲ್ಲಿ ಈ ಕೈಗೆ 'ರಿಷ್ಟ್‌ವಾಚ್' ಬೇಕು, ಉಂಗುರಬೇಕು, ಚಿನ್ನದ ಚೈನು ಬೇಕು. ಇಲ್ಲವೇ ರೋಖ ಹಣಬೇಕು. ಇವೆಲ್ಲ ಬೇಡಿಕೆಗಳು ಮಂಡಿತ ವಾಗುತ್ತಿದ್ದವು.

ಇದನ್ನು ಮನ್ನಿಸಿ ಕೊಡುವವರೂ ಇರುತ್ತಿದ್ದರು. ಒಮ್ಮೊಮ್ಮೆ ಇದನ್ನು ಕೊಡದೇ ಹಟಹಿಡಿದ ಅಸ್ವಾರಶ್ಯ ಪ್ರಸಂಗಗಳೂ ಏಳುತ್ತಿದ್ದವು. ಬೀಗರಲ್ಲಿ ಯಾರೂ ಊಟಕ್ಕೆ ಏಳದೆ ತಮ್ಮ ಬಿಡಾರದಲ್ಲಿಯೇ ಅನ್ನ, ಜುಣಕ ಮಾಡಿಕೊಂಡು ತಿಂದುಹೋದ ಉದಾಹರಣೆಗಳೂ ಇದ್ದವು.

ಇಡಿಯ ಮದುವೆ ಈ ಪ್ರಸಂಗದಿಂದ ಕಹಿಯಾಗಿ ಬಿಡುತ್ತಿತ್ತು.

ಶ್ರೀಮಂತನಾದ ರಮೇಶನ ಬೇಡಿಕೆ ಅವನ ಅಂತಸ್ತಿಗೆ ತಕ್ಕಹಾಗೆಯೇ ಇತ್ತು. ಅವನು ಬೇಡಿದ್ದು ಒಂದು ಕಾರು, ಒಂದು 'ರೇಡಿಯೋ ಶೆಟ್ಟು.'

ಊರ ಪ್ರತಿಷ್ಠಿತರೆಲ್ಲ ಒಂದು ಪಂಕ್ತಿಯಲ್ಲಿ ಕುಳಿತಿದ್ದರು. ಬಾಳೆಯ ಎಲೆಗಳ ಮೇಲೆ ಬೇರೆಬೇರೆ ಜೀನಸುಗಳನ್ನು ಬಡಿಸಿ ಆಗಿದ್ದಿತು. ಬೀಗರು ಬಂದು ಎಲೆಯಮೇಲೆ ಕುಳಿತಕೂಡಲೇ ಅನ್ನ ಹಾಕುವದು ಮಾತ್ರ ಬಾಕೀ ಉಳಿದಿತ್ತು. ಎಲ್ಲರೂ ಬೀಗರ ಬರವನ್ನೇ ಎದಿರುನೋಡುತ್ತಿದ್ದರು.

ಬೀಗರನ್ನು ಕರೆಯಲು ಹೋದವರು ಅತ್ತಲೇ ಹೋಗಿದ್ದರಿಂದ ಜನರಲ್ಲಿ ಕಳವಳ ಉಂಟಾಯಿತು.

ಅಳಿಯದೇವರು ಊಟಕ್ಕೆ ಬರುವದಿಲ್ಲವೆಂಬ ಸುದ್ದಿಯನ್ನು ಕೇಳಿ ಭೀಮಣ್ಣನು ರಾಜೂನನ್ನು ಕರೆದು 'ನಿನ್ನ ಸ್ನೇಹಿತನಿಗೆ ಬುದ್ಧಿ ಹೇಳಿ ಕರೆದುಕೊಂಡು ಬಾ'

ಎಂದು ಹೇಳಿಕಳುಹಿಸಿದನು.

ರಾಜಣ್ಣ ಧಾವಿಸಿಬಂದು

"ಜನರು ಕಾಯುತ್ತಿದ್ದಾರೆ ರಮೇಶ! ಊಟಕ್ಕೆ ಏಳಬೇಕು" ಎಂದು ನಗುತ್ತ ಹೇಳಿದ.

"ನಾನು 'ಸೆಟಗೊಂಡಿ'ದ್ದೇನೆ ರಾಜೂ! ನಾನು ಬರುವಹಾಗಿಲ್ಲ.

ರಮೇಶನೂ ವಿನೋದದಿಂದಲೇ ಹೇಳಿದನು.

"ಹಳಬರ ಹಾಗೆ ಮಾತಾಡಬೇಡ ಏಳು?

" ಆದರೆ ನಾನು ಬರುವಹಾಗಿಲ್ಲ ರಾಜೂ !

" ಇದು ಹೇಗೆ ನಡೆದೀತು ಹೇಳು ?

" ಹಾಗಾದರೆ ಅಕ್ಕನನ್ನು ಕೇಳು.

ಆವೇಳೆಗೆ ಬಂದ ರಮೇಶನ ಅಕ್ಕ ಗಂಭೀರವಾಗಿ ಹೇಳಿದಳು.

" ತಮ್ಮನಿಗೆ ಒಂದು ಕಾರು, ರೇಡಿಯೋ ಸಿಗುವವರೆಗೆ ಅವನು ನಿಮ್ಮ ಮನೆಯಲ್ಲಿ ಈದಿನ ಕೈತೊಳೆಯುವ ಹಾಗಿಲ್ಲ.

" ಹೌದೇನು ರಮೇಶ ?

" ಕಾಣಿಕೆ ಸಿಗದೇ ಅಳಿಯದೇವರು 'ಕಳ್ಳೂಟ'ಕ್ಕೆ ಬರಲಾರನು ರಾಜೂ !

" ನಿನಗೆ ಕಾಣಿಕೆ ಬೇಕೆ ?

" ಅಕ್ಕ ಹೇಳಿದಳಲ್ಲ !

" ನಮ್ಮ ಮನೆಯ ಅನರ್ಘ್ಯ ರತ್ನವನ್ನೇ ನಿನಗೆ ಕಾಣಿಕೆಯಾಗಿ ಕೊಡಲಾಗಿದೆ ರಮೇಶ! ಇದಕ್ಕೂ ಹೆಚ್ಚಿನ ಕಾಣಿಕೆಯನ್ನೇನು ಕೊಡುವದು?

ರಮೇಶನಿಗೆ ರಾಜೂ ಗಂಭೀರವಾಗಿ ಹೇಳಿದ,

" ಇದರಲ್ಲಿ ಅಕ್ಕನದೇ ಕೊನೆಯಮಾತು ರಾಜೂ !

ರಮೇಶ ಅಷ್ಟೇ ಗಂಭೀರವಾಗಿ ಹೇಳಿದ.

" ಏನು ಹೇಳುವಿರಿ ಅಕ್ಕ !

ರಾಜೂ ಕಾತರನಾಗಿ ಕೇಳಿದ.

" ಹಗಲೆಲ್ಲ ಹೇಳಿದ್ದನ್ನೇ ಏನು ಹೇಳುವದು. ಕಾಣಿಕೆ ಇಲ್ಲದೆ ಬರುವದು ದರಿದ್ರರ ಲಕ್ಷಣ. ಇದನ್ನು ನಾನು ಮಾಡಗೊಡಲಾರೆ. ನೀನು ಹೋಗಿ ನಿನ್ನ ಅಣ್ಣಂದಿರನ್ನು ಕೇಳಿಕೊಂಡು ಬಾ ! ಇದರಲ್ಲಿ ಎರಡನೆಯ ಮಾತು ಆಗುವದೇ ಇಲ್ಲ.

ರಮೇಶನ ಅಕ್ಕ ಖಂಡತುಂಡವಾಗಿ ಹೇಳಿದಳು.

ರಾಜೂ ಓಡುತ್ತಲೇ ಮನೆಗೆ ಹೋಗಿ ಬಾಳಣ್ಣನ ಕೋಣೆಯಲ್ಲಿ ಅಣ್ಣ ಭೀಮಣ್ಣನನ್ನೂ, ವಿಠ್ಠಲನನ್ನೂ ಕರೆದು ಎಲ್ಲವನ್ನೂ ಹೇಳಿದ.

" ಈಗಾಗಲೇ ಬೇಕಾದಷ್ಟು ಕೊಟ್ಟು ಆಗಿದೆ ತಮ್ಮ ! ಇದು ಕರಾರಿನಲ್ಲಿ ಇಲ್ಲವೇ ಇಲ್ಲ. ಹೀಗೆ ಕೇಳುವದು ಅಸಭ್ಯರ ಲಕ್ಷಣವಾಗಿದೆ.

ಭೀಮರಾಯ ಸಿಟ್ಟಿಗೆದ್ದು ಹೇಳಿದ.

" ಬಹಳವಾದರೆ 'ರೇಡಿಯೋ'ವನ್ನು ಕೊಡಬಹುದು. ಇದನ್ನು

ಅವನಿಗೆ ತಿಳಿಸು. ಇದರಿಂದ ಒಪ್ಪಿಕೊಂಡು ಊಟಕ್ಕೆ ಬಂದರೆ ಬರಲಿ, ಬರದಿದ್ದರೆ ನಮ್ಮ ಪಂಕ್ತಿ ಸಾಗಿಬಿಡುವದು.

ವಿಠ್ಠಲ ಅಬ್ಬರದಿಂದ ನುಡಿದ.

"ಅತ್ಯಂತ ವೈಭವದಿಂದ ಮದುವೆಯನ್ನು ಮಾಡಿದ್ದೇನೆ. ಅಳಿಯನ ಬೇಡಿಕೆಯನ್ನು ಕೊಡದಷ್ಟು ಗೌಡರ ಮಕ್ಕಳು ದರಿದ್ರರಾಗಿ ಬಾಳಬೇಕಾಗಿಲ್ಲ. ಕೊನೆಯ ಗಳಿಗೆಯಲ್ಲಿ ಕಹಿಭಾವನೆಯನ್ನು ಇಟ್ಟುಕೊಳ್ಳುವದು ನನಗೇನೋ ಯೋಗ್ಯವಾಗಿ ಕಾಣುವದಿಲ್ಲ. ಬೀಗರನ್ನು ಊಟಹಾಕದೇ ಕಳಿಸಿದರೆಂಬ ಅಪವಾದವನ್ನು ನಾವು ಹೊರುವದು ಬೇಡ. ಅಮೃತವನ್ನುಂಡು ಗೋಮೂತ್ರ ದಿಂದ ಬಾಯಿ ಮುಕ್ಕುಳಿಸಿದಂತೆ ಆಗಬಾರದು. ನಾನು ನಿಮ್ಮನ್ನು ಪ್ರಾರ್ಥಿಸು ತ್ತೇನೆ. ನನಗಾಗಿಯಾದರೂ ನೀವು ಇದಕ್ಕೆ ಒಪ್ಪಬೇಕು.

ರಾಜಣ್ಣ ಅಣ್ಣಂದಿರನ್ನು ಆಲ್ಪರಿದು ಕೇಳಿದ.

'ಆಗಲಿ ತಮ್ಮ! ನಿನ್ನ ಮಾತು ನಡೆಯಲಿ,

ಬಾಳಣ್ಣ ತನ್ನ ಕೊನೆಯ ನಿರ್ಧಾರವನ್ನು ಹೇಳಿದ.

ಊಟ ಪೂರೈಸಿತು. ಬೀಗಬಿಜ್ಜರೆಲ್ಲ ತಣಿದುಂಡರು. ಕೇಸರಿಯ ಗಮಗಮಿಸುವ ಓಕುಳಿಯನ್ನು ಎಲ್ಲರಿಗೂ ಸಿಂಪಡಿಸಲಾಯಿತು.

ಅಳಿಯದೇವರಿಗೆ ದಾರಿಯ ಬುತ್ತಿಯನ್ನು ಕಟ್ಟಿಕೊಡಲಾಯಿತು.

ಬಳಗದ ವಸ್ತ್ರಗಳನ್ನು ಎಲ್ಲರಿಗೂ ಓದಿಸಲಾಯಿತು. ರಮೇಶನ ಅಕ್ಕನಿಗೆ ತೃಪ್ತಿಯಾಗುವಂತೆ ಸಮಾಧಾನ ಮಾಡಲಾಯಿತು.

ಭಾವೂರಾಯರ ಕೋಣೆಯಲ್ಲಿ ಸುಧಾ ಕಣ್ಣೀರು ತುಂಬಿ ಕುಳಿತಿದ್ದಳು.

ರಾಜೂ ಅಲ್ಲಿಯೇ ಕುಳಿತು ತಂಗಿಗೆ ಸಮಾಧಾನದ ಮಾತುಗಳನ್ನು ಹೇಳುತ್ತಿದ್ದನು.

ಹೊರಡುವ ಗಳಿಗೆ ಬಂದಂತೆಲ್ಲ ಸುಧಾ ಕಣ್ಣೀರಿನ ಕಡಲಾಗಿಬಿಟ್ಟಳು.

ಬಳವಂತಗೌಡ ತಂಗಿಯ ತಲೆಯನ್ನು ತಟ್ಟುತ್ತ ಗದ್ಗದಿತನಾಗಿ ಹೇಳಿದ,

"ಈ ಮನೆಯ ಗೌರವವನ್ನು ಅತ್ತೆಯ ಮನೆಯಲ್ಲಿ ಕಾಪಾಡಬೇಕು ತಂಗಿ! ಗೌಡರ ಮಗಳು ನೀನು! ದೊಡ್ಡವರ ಸೊಸೆಯಾಗಿರುವಿ........

"ಅಣ್ಣ !....ನಿನ್ನ ಮಾತನ್ನು ನಡೆಯಿಸುತ್ತೇನೆ.

"ನೀನು ಅಂಥ ಸುಗುಣಿಯೇ ಇರುತ್ತೀ ಸುಧಾ!

ಬಳವಂತಗೌಡ ಕಂಬನಿಯನ್ನು ಕೊಡವಿದನು.

ಪಡಸಾಲೆಯಲ್ಲಿ ಮಣೆ ಹಾಕಿ ಕಾಂತಾಬಾಯಿ ಸುಧಾಳನ್ನು ಕರೆದಳು.

" ಈ ಮಣೆಯಮೇಲೆ ಕುಳಿತುಕೋ ಬಾ ಸುಧಾ ! ಕುಂಕುಮ ಹಚ್ಚಿ ಉಡಿತುಂಬುತ್ತೇನೆ.

ರಾಜೂ ಕಣ್ಣೆತ್ತಿ ನೋಡಿದನು. ಸುಧಾಳನ್ನು ತಬ್ಬಿಕೊಂಡು ಚಿಕ್ಕ ಮಗುವಿನ ಹಾಗೆ ಅತ್ತುಬಿಟ್ಟನು.

" ಹುಚ್ಚಪ್ಪಾ ! " ಎನ್ನುತ್ತ ಭೀಮಣ್ಣ ರಾಜೂನನ್ನು ಬದಿಗೆ ಸರಿಸಿದನು.

ವಿಠ್ಠಲನಿಗೆ ಏನೋ ನೆನವಾಗಿ ಕಾಂತಾ ಅತ್ತಿಗೆಯ ಹತ್ತರ ಹೋಗಿ ಕಿವಿಯಲ್ಲಿ ಏನೋ ಕೇಳಿದನು. ಆದಕ್ಕೆ ಉತ್ತರವಾಗಿ ಅವಳು ತುಸು ಗಟ್ಟಿಯಾಗಿಯೇ ' ಅವರಿಗೆ ಹೊಟ್ಟೆಸೂಲಿಯಂತೆ ' ಎಂದಳು.

ಕಾಶೀಬಾಯಿ ಹೊಟ್ಟೆಸೂಲೆಯ ನೆವಮಾಡಿ ಮನೆಯ ಮಗಳನ್ನು ಕಳಿಸಲು ಬಂದಿರಲಿಲ್ಲ.

ಈ ಮಾತನ್ನು ಕೇಳಿ ಬಾಳಣ್ಣನ ಮುಖ ರೌದ್ರವಾಯಿತು. ಆದರೆ ಅವನಿಗೆ ತಂಗಿ ಅತ್ತೆಯ ಮನೆಗೆ ಹೊರಡುವ ಹೊತ್ತಿನಲ್ಲಿ ಕಸಕಸಿ ಮಾಡುವದು ಬೇಕಾಗಿರಲಿಲ್ಲ.

" ಅವಳದು ಮಾಮೂಲ ಬೇನೆ ಕಾಂತಾ ! ನೀನೇ ತಂಗಿಯ ಉಡಿಯನ್ನು ತುಂಬಿ ಆಶೀರ್ವದಿಸು "

ಎಂದು ಮಾತ್ರ ಹೇಳಿದನು.

ಹಣೆತುಂಬ ಕುಂಕುಮ ಹಚ್ಚಿಕೊಂಡು, ಉಡಿಯನ್ನು ಭದ್ರವಾಗಿ ಹಿಡಿದುಕೊಂಡು ಸುಧಾ ದೇವರ ಮನೆಗೆ ಹೋದಳು. ಅಲ್ಲಿ ತುಪ್ಪದ ದೀವಿಗೆಗಳು ಬೆಳ್ಳಿಯ ನೀಲಾಂಜನಗಳಲ್ಲಿ ಪ್ರಜ್ವಲಿಸುತ್ತಿದ್ದವು. ಸುಧಾ ದೇವರಿಗೆ ಅಡ್ಡಬಿದ್ದಳು. ಹಾಗೆಯೇ ನೇರವಾಗಿ ಭಾವೂರಾಯರ ಕೋಣೆಗೆ ಹೋಗಿ ತಂದೆಯ ಚಿತ್ರಪಟಕ್ಕೆ ವಂದಿಸಿ ಬಿಕ್ಕಿಬಿಕ್ಕಿ ಅತ್ತಳು.

ಇದನ್ನು ನೋಡುತ್ತಲಿದ್ದ ಅಣ್ಣಂದಿರೆಲ್ಲ ಗದ್ಗದಿತರಾದರು.

ಸುಧಾ ನೇರವಾಗಿ ಕಾಶೀಬಾಯಿ ಮಲಗಿದ ಕೋಣೆಗೆ ಹೋಗಿ,

" ಹೋಗಿಬರುತ್ತೇನೆ ಅತ್ತಿಗೆ " ಎಂದಳು.

ಕಾಶೀಬಾಯಿ ನೆರಳುತ್ತಲೇ ಸಾವಕಾಶವಾಗಿ ಎದ್ದು, ಕುಳಿತಳು. ಕೃತಕವೇದನೆಯ ಆವಿರ್ಭಾವ ಸ್ಪಷ್ಟವಾಗಿ ಅವಳ ಮುಖದ ಮೇಲೆ ಒಡೆದು ಕಾಣುತ್ತಿತ್ತು.

" ನೀನು ಹೊರಡುವ ಹೊತ್ತಿನಲ್ಲಿಯೂ ನನ್ನಿಂದ ಏನೂ ಮಾಡಲಾಗ ಲಿಲ್ಲ ಸುಧಕ್ಕ ! ಹೋಗಿ ಬಾ !

ಎಂದು ಕಾಶೀಬಾಯಿ ನೆರಳುತ್ತಲೇ ಹೇಳಿದಳು. ಅತ್ತಿಗೆ ! ಈ ಬೇನೆಯ ಚಿಕಿತ್ಸೆಯನ್ನು ಆದಷ್ಟು ಬೇಗ ಮಾಡಿಸಿಕೊಳ್ಳಿರಿ. ಇದನ್ನು ಬೆಳೆಯ ಗೊಡಬಾರದು. ದೇಹಕ್ಕೆ ಹಿತವಲ್ಲ."

ಸುಧಾ ಪರಿಯಾಯವಾಗಿ ತನ್ನ ಮನೋಗತವನ್ನು ಹೇಳಿದುದನ್ನು ಕಾಶೀಬಾಯಿ ಗ್ರಹಿಸದಿರಲಿಲ್ಲ.

" ಚೋಟುದ್ದ ಹುಡಿಗಿಗೆ ಎಷ್ಟು ದೊಡ್ಡ ಮಾತು " ಎನ್ನಬೇಕೆಂದ ಕಾಶೀಬಾಯಿ ಏನೂ ಅನ್ನದೆ ಒಮ್ಮೆ ಸುಧಾಳನ್ನು ನೇರವಾಗಿ ನೋಡಿ ದಿಂಬಿಗೆ ಒರಗಿದಳು.

" ಅಣ್ಣನ ಪ್ರಸ್ತಕಾರ್ಯಕ್ಕೆ ನನ್ನನ್ನು ಕರಿಸಿಕೊಳ್ಳಿರಿ. ಸರಳಾ ಅತ್ತಿಗೆಯನ್ನು ನಾನು ಇನ್ನಷ್ಟು ಕಾಡಬೇಕಾಗಿದೆ "

ಸುಧಾ ನಗುತ್ತಲೇ ಹೇಳಿದಳು.

" ಈ ಮನೆಯ ಒಬ್ಬಳೇ ಮಗಳು ಸುಧಾ ನೀನು !

ನಿನ್ನನ್ನು ಬಿಟ್ಟು ಯಾವ ಮಂಗಲಕಾರ್ಯಗಳು ಈ ಮನೆಯಲ್ಲಿ ನಡೆದಾವು ಹೇಳು ? "

ಎಂದು ಭೀಮಣ್ಣನೆಂದಾಗ

ಸುಧಾ ಅತ್ಯಂತ ತೃಪ್ತಿಯಿಂದ ತಲೆಬಾಗಿಲವನ್ನು ದಾಟಿ ಕಾರನ್ನು ಏರಿದಳು.

ಗೌಡರ ಮಗಳು ಸುಬ್ಬರಾಯರ ಸೊಸೆಯಾದದ್ದು ಎಲ್ಲರಿಗೂ ಹೆಮ್ಮೆಯ ಮಾತಾಯಿತು.

ಸುಧಾಳ ಮದುವೆಯ ವೈಭವವನ್ನು ಆ ಹಳ್ಳಿಯ ಜನರು ಲಾವಣಿ ಮಾಡಿ ಹಾಡುವಂತಾಯಿತು.

ಐವತ್ತು ಸಾವಿರ ರೂಪಾಯಿಗಳನ್ನು ವೆಚ್ಚಮಾಡಿದ ಮದುವೆ ವೈಭವ ಪೂರ್ಣವಾಗದಿದ್ದೀತೆ ?

## ೮

ಮದುವೆಗಾಗಿ ಕೂಡಿದ ಬಂಧುಬಳಗದವರೆಲ್ಲ ಹೋರಟುಹೋದ ಮೇಲೆ ಬಳವಂತರಾಯನು ಒಂದು ದಿನ ಏಕಾಂತದಲ್ಲಿ ಹೆಂಡತಿಯನ್ನು ತರಾಟಿಗೆ ತೆಗೆದುಕೊಂಡನು.

ಹೆಂಡತಿಯ ಆಚರಣೆಯಿಂದ ಅವನ ಮನಸ್ಸು ರೋಸಿಹೋಗಿತ್ತು. ನಾಲ್ಕು ಜನರಲ್ಲಿ ಅವನಿಗೆ ಅವಮಾನವಾಗಿತ್ತು. ಇದನ್ನು ಹೀಗೆಯೇ ಸಡಿಲುಬಿಟ್ಟರೆ ಒಂದು ಮನೆಯಲ್ಲಿ ಮೂರು ಮನೆಗಳಾಗುವದರಲ್ಲಿ ಸಂದೇಹ ವಿಲ್ಲವೆಂಬ ಕಾತರತೆ ಅವನನ್ನು ಜಾಗ್ರತೆಗೊಳಿಸಿತು.

ತಮ್ಮಂದಿರ ಮೇಲಿರುವ ಅವನ ಅಕೃತ್ರಿಮ ಪ್ರೀತಿಯೂ ಇದಕ್ಕೆ ಕಾರಣವಾಯಿತು. ತಂಗಿಯ ಮದುವೆಯಲ್ಲಿ ತನ್ನ ಹೆಂಡತಿ ತೋರಿಸಿದ ಅನಾಸ್ಥೆಯಂತೂ ಅವನ ಕರುಳುಗಳಿಗೆ ಬರೆಯನ್ನೇ ಕೊಟ್ಟಿತ್ತು. ಸುಧಾ ಅತ್ತೆಯ ಮನೆಗೆ ನಡೆದಾಗ ಹೊಟ್ಟೆಸೂಲೆಯ ನೆವ ಮಾಡಿ ಕೋಣೆಯೊಳಗೆ ಅವಿತುಕೊಂಡಿದ್ದು ಅಕ್ಷಮ್ಯವಾದ ಅಪರಾಧವೆಂದೇ ಬಳವಂತರಾಯನು ಎಣಿಸಿದನು.

ಒಮ್ಮೆ ಹೆಂಡತಿಯನ್ನು ಅಲ್ಲಾಡಿಸಿ ಅವಳ ತಪ್ಪನ್ನು ಅವಳಿಗೆ ಮನಗಾಣಿಸಿಕೊಟ್ಟು ಅತ್ಯಂತ ಎಚ್ಚರಿಕೆಯಿಂದ ಮುನ್ನಡೆಯಲು ಹೇಳ ಬೇಕೆಂದು ಆ ದಿನ ತರಾಟಿಗೆ ತೆಗೆದುಕೊಂಡನು.

" ನಿನ್ನ ಬುದ್ಧಿ ಹೀಗೇಕಾಯಿತೆ ? ನಾಲ್ಕು ಜನರಲ್ಲಿ ನನ್ನ ಮರ್ಯಾದೆ ಯನ್ನೇ ಕಳೆದುಬಿಟ್ಟೆಯಲ್ಲ. ಮನೆಯ ಹಿರಿಯಳೇ ಕುಳಿತು ಹೀಗೆ ಮಾಡಿದರೆ ಈ ಮನೆತನದ ಗತಿಯೇನು ?

" ಈ ಮನೆತನದ ಮೇಲೆ ಪ್ರೀತಿ ಇದ್ದವರು ಅದನ್ನು ವಿಚಾರಿಸಲಿ. ಅದನ್ನು ತೆಗೆದುಕೊಂಡು ನನಗೇನು ಮಾಡುವದು ?

" ನಿನಗೆ ಈ ಮನೆತನದ ಮೇಲೆ ಪ್ರೀತಿ ಇಲ್ಲವೆ ?

" ನನ್ನ ಪ್ರೀತಿಯನ್ನು ಯಾರು ಕೇಳಬೇಕು ?

" ನೀನೇನು ಚಿಕ್ಕ ಹುಡುಗಿಯೇನು ?

" ಚಿಕ್ಕ ಹುಡುಗಿಯರದೇ ಕಾರಭಾರ ಸಾಗಿರುವಾಗ........

" ಇದಕ್ಕೆ ನೀನೇ ಕಾರಣ. ನೀನು ಮೂಲೆ ಹಿಡಿದು ಕುಳಿತರೆ ಅದು

ಯಾರ ತಪ್ಪು. ನಿನಗಾಗಿ ಎಲ್ಲ ಕೆಲಸಗಳೂ ಮೂಲೆಗುಂಪಾಗಿ ಬೀಳಬೇಕೇನು ?

" ಅದ್ದೂರಿಯಿಂದ ಮಾಡಿಕೊಳ್ಳಿರಲ್ಲ ನಾನೇಕೆ ಬೇಡವೆನ್ನಲಿ ? ಮಾವನವರು ಕಣ್ಣುಮುಚ್ಚಿದ ದಿನವೇ ಈ ಮನೆಯ ಹಿರಿಯತನವೂ ಕಣ್ಣು ಮುಚ್ಚಿತು. ಈಗ ಎಲ್ಲ ಕಾಗೆಗಳೂ ಕಾರಭಾರ ಮಾಡುತ್ತವೆ.

" ನನ್ನ ತಮ್ಮಂದಿರು ಕಾಗೆಗಳೆಂದು ಅನ್ನುವಿಯಾ ?

" ಅವರಿಗೇಕನ್ನಲಿ ?

" ಮತ್ತೆ ?

" ನನ್ನನ್ನು ಮೂಲೆಗುಂಪುಮಾಡಲು ಯಾರು ಕಾರಣರೋ ಅವರಿಗೆ ಅನ್ನುತ್ತೇನೆ.

" ಅವಕ್ಕೆ ನೀನೇ ಕಾರಣಳು.

" ಅಯ್ಯೋ! ಆ ಹೆಣ್ಣುಹುಲಿಗೆ ನೀವು ಎಷ್ಟು ಅಂಜುತ್ತೀರಿ ! ಅವಳೇನು ನಿಮಗೆಲ್ಲ ಮಾಟ ಮಾಡಿದ್ದಾಳೇನು ? ಪ್ರತಿಯೊಂದು ಮಾತಿಗೂ ಅವಳನ್ನು ಮೇಲುಹಚ್ಚಿಕೊಂಡು ಮಾತಾಡಿ ನೀವೇ ಅವಳನ್ನು ಒಯ್ದು ಅಟ್ಟದಮೇಲಿಟ್ಟಿರುವಿರಿ. ಅವಳು ನನ್ನನ್ನೇಕೆ ಕೇಳಬೇಕು. ನೀವು ಹೆಸರಿಗೆ ಗೌಡರು. ಕಾರಭಾರವೆಲ್ಲ ಭೀಮರಾಯರದು. ನಿಮ್ಮನ್ನು ಕೋಣೆಯಲ್ಲಿ ದಬ್ಬಿ ಊರನ್ನು ಅವರು ಆಳುತ್ತಾರೆ. ನನ್ನನ್ನು ದಬಾಯಿಸಿ ಅಡಿಗೆಯ ಮನೆಯನ್ನು ಈ ಸೆಟವಿ ಆಳತೊಡಗಿದ್ದಾಳೆ. ಸುಮ್ಮನೆ ಇದೆಲ್ಲ ಯಾಕೆ ? ಎರಡು ತಂಬೂರಿಗಳನ್ನಾದರೂ ತೆಗೆದುಕೊಂಡು ಬನ್ನಿರಿ. ಒಂದು ನಿಮಗೆ ಇನ್ನೊಂದು ನನಗೆ. ನನಗಂತೂ ಜೀವವೇ ಸಾಕಾಗಿಹೋಗಿದೆ.

ಕಾಶೀಬಾಯಿ ಕಣ್ಣೀರ ಸುರಿಸುತ್ತ ಅಧೋವದನಳಾಗಿ ನಿಂತು ಮುಳು ಮುಳು ಅಳತೊಡಗಿದಳು.

ಬಳವಂತರಾಯನಿಗೆ ಅವಳ ಹೃದಯದಲ್ಲಿ ಮೂಡಿ ಮೊಳಕೆಯೊಡೆದು ಮರವಾದ ಮತ್ಸರದ ವಿರಾಟಸ್ವರೂಪದ ಅರಿವಾಯಿತು. ಇವಳಿಂದ ಈ ಮನೆತನವನ್ನು ರಕ್ಷಿಸುವದು ತನ್ನ ಮುಖ್ಯ ಕರ್ತವ್ಯವಾಗಿದೆ ಎಂಬುದರ ಅರಿವು ನಿಚ್ಚಳವಾಯಿತು. ಅವಳನ್ನು ಅವನೊಮ್ಮೆ ನಿಷ್ಠುರವಾಗಿ ನೋಡಿ,

" ಮನೆಯ ಹಿರಿಯಳಾದ ನೀನೇ ಕುಳಿತು ಹೀಗೆ ಮತ್ಸರವನ್ನು ತೋರುವದು ಅವಿವೇಕವಾಗಿದೆ. ಇದನ್ನು ನಾನು ನಡೆಯಗೊಡುವದಿಲ್ಲ. ನಿನ್ನ ಬುದ್ಧಿ ಕೆಟ್ಟುಹೋಗಿದೆ.

“ನನ್ನ ಬುದ್ಧಿ ಮಾತ್ರ ಕೆಟ್ಟುಹೋಗಿದೆ. ಆ ವಯ್ಯಾರಿಯ ಬುದ್ಧಿ ಮಾತ್ರ ಬಹಳ ಚೆನ್ನಾಗಿದೆ.

“ಮಾತುಮಾತಿಗೆ ಅವಳನ್ನು ದೂರುವದು ನಿನ್ನ ಸಂಕುಚಿತ ಮನಸ್ಸನ್ನೇ ತೋರುತ್ತದೆ.

“ಹೆಜ್ಜೆಹೆಜ್ಜೆಗೆ ನನ್ನ ಅವಮಾನ ಮಾಡುವುದು ಅವಳ ವಿಶಾಲ ದೃಷ್ಟಿಯೇನು ?

“ನಿನ್ನ ಕಣ್ಣಿಗೆ ಕಾಮಣಿಯು ಬೇನೆಯಾಗಿದೆ.

“ನನ್ನನ್ನು ನೋಡುವ ನಿಮ್ಮ ಕಣ್ಣಿಗೂ ಯಾವುದೋ ದೋಷ ತಗುಲಿದೆ. ನೀವೇ ಕುಳಿತು ನನ್ನ ಛಲನೆ ಮಾಡತೊಡಗಿದರೆ ಅವಳು ತಟ್ಟದೇ ಬಿಟ್ಟಾಳೆ ?

“ಇದು ಛಲನೆಯಲ್ಲ. ನಿನ್ನ ನಡತೆ ಸರಿಯಾಗಿರಬೇಕು. ಎಷ್ಟೆಂದರೂ ನೀನು ಹಿರಿಯಳು. ಕಿರಿಯರ ತಪ್ಪುಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಅವರನ್ನು ಸಂಬಾಳಿಸುವದು ನಿನ್ನ ಕರ್ತವ್ಯವಾಗಿದೆ. ಅದನ್ನು ಬಿಟ್ಟು ಹೃದಯದಲ್ಲಿ ವಿಷ ತುಂಬಿಕೊಂಡು ಕುಳಿತರೆ ಮನೆತನ ಹೇಗೆ ನಡೆದೀತು ?

“ಯಾರಿಗೆ ಬೇಕಾಗಿದೆ ?

“ಈ ಮನೆತನ ನಡೆಯುವದು ನಿನಗೆ ಬೇಕಾಗಿಲ್ಲವೆ ?

“ನನಗೆ ಗೌಡರ ಮನೆತನದ ಕೂಲಿಯಾಗಿ ಇರುವ ಮನಸ್ಸಿಲ್ಲ.

“ಏನೆಂದಿ ?

“ಇವರೊಡನೆ ನನಗೆ ಕೂಡಿ ನಡೆಯುವದು ಸಾಧ್ಯವಿಲ್ಲ. ಸ್ಪಷ್ಟವಾಗಿಯೇ ಹೇಳುತ್ತೇನೆ. ಊರ ಜನರೆಲ್ಲ ಬಂದು ನಿಮ್ಮ ಬದಲು ಭೀಮರಾಯರಿಗೆ ಸಲಾಮು ಮಾಡಿ ಕಾಂತಾಳಿಗೆ ಗೌಡಕೆ ಬಂದು ಕರೆಯುವದನ್ನು ನಾನು ಸಹಿಸಲಾರೆ. ಈ ಹಳ್ಳಿಯಲ್ಲಿ ನಿಜವಾದ ಗೌಡರಿಗೆ ಮರ್ಯಾದೆ ಸಿಗದಿದ್ದರೆ ನಿಮ್ಮಂತೆ ನನಗೆ ಕಣ್ಣುಮುಚ್ಚಿ ಕುಳಿತುಕೊಳ್ಳುವದು ನನಗೆ ಸಾಧ್ಯವಿಲ್ಲ. ಕಾಂತಾಳನ್ನು ಕಂಡರೆ ನನ್ನ ಮೈ ಉರಿಯುತ್ತದೆ.

“ನಿನಗೆ ನನ್ನ ತಮ್ಮಂದಿರನ್ನು ಕಂಡರೆ ಆಗುವದಿಲ್ಲ. ಅವರ ಹೆಂಡಂದಿರೊಡನೆ ಕೂಡಿ ನಡೆಯುವದಿಲ್ಲ. ಮಾತು ಈ ಪರಿಸ್ಥಿತಿಗೆ ಬಂದರೆ ನಿನಗೆ ಈ ಮನೆಯಲ್ಲಿ ಯಾವ ಸ್ಥಾನವೂ ಇಲ್ಲ. ನೀನು ಬೇಕಾದಲ್ಲಿ ಹೋಗಬಹುದು ತಿಳಿಯಿತೆ,”

ಬಳವಂತರಾಯ ಹುಬ್ಬು ಗಂಟಿಕ್ಕಿ ಹೇಳಿದನು.

"ನಾನೇನು ಬಗಲಲ್ಲಿ ಸೀರೆ ಹಾಕಿಕೊಂಡು ಈ ಮನೆಗೆ ಬಂದಿಲ್ಲ ಹೇಳಿದ ಕೂಡಲೇ ಹೋಗಲಿಕ್ಕೆ.

"ನೀನು ಬಗಲಲ್ಲಿ ದೊಣ್ಣೆ ಇಟ್ಟುಕೊಂಡು ಬಂದಂತೆ ಕಾಣುತ್ತದೆ. ಅಲ್ಲವೇ ?

"ಬಗಲಲ್ಲಿ ಕಸಬರಿಗೆಯನ್ನು ಇಟ್ಟುಕೊಂಡು ಬಂದವಳಿಗೂ ಒಂದು ಮಾತು ಹೇಳಿರಿ.

"ಬಾಯಿ ಮುಚ್ಚು.

"ಯಾರನ್ನು ಹೆದರಿಸುತ್ತೀರಿ.

"ಇನ್ನುಮೇಲೆ ನೀನು ಇಂಥ ಅಬದ್ಧ ಮಾತುಗಳನ್ನಾಡಿದರೆ ನಿನ್ನನ್ನು ಒದ್ದು ಓಡಿಸುತ್ತೇನೆ. ಎಚ್ಚರವಿರಲಿ, ಸಲಿಗೆಯ ನಾಯಿಯನ್ನು ತಲೆಗೆ ಏರಿಸಿಕೊಳ್ಳುವದು ಸಾಧ್ಯವಿಲ್ಲ. ನೀನು ಹೆಂಗಸೋ ರಾಕ್ಷಸಿಯೋ ?

"ನಾನು ಮಾತ್ರ................

"ನಾಯಿಯ ಹಾಗೆ ಬಗುಳಬೇಡ.

ಎಂದು ಬಳವಂತರಾಯನು ಹೆಂಡತಿಯ ಕೆನ್ನೆಗೊಂದು ಕೊಟ್ಟು ಹೇಳಿದನು,

"ನಿನ್ನ ಒಡಕು ಬಾಯಿಯನ್ನು ಮುಚ್ಚದಿದ್ದರೆ ಹಲ್ಲುಗಳನ್ನೇ ಉದುರಿಸುತ್ತೇನೆ. ನೀನು ನೀಚಳಾಗಿದ್ದೀ. ಮದುವೆಯ ಮಂಗಲ ಸಮಯದಲ್ಲಿ ಸುಮ್ಮಸುಮ್ಮನೆ ಮುಟ್ಟಾಗಿರುವದಾಗಿ ಹೇಳಿ ವಂಚನೆ ಮಾಡಿದ್ದೀ. ನನ್ನ ತಂಗಿ ಅತ್ತೆಯ ಮನೆಗೆ ಹೊರಟುನಿಂತಾಗ ಜೇನೆಯ ಸೇವಮಾಡಿದ ಚಂಡಾಳಿಯಾಗಿದ್ದೀ. ಇನ್ನುಮೇಲೆ ಇಂತಹದನ್ನು ಮಾಡಿದರೆ ನಿನ್ನನ್ನು ನಾಯಿಯ ಹಾಗೆ ಬಡಿದು ಕೊಲ್ಲುತ್ತೇನೆ. ತಿಳಿಯಿತಿಲ್ಲೊ !

ಕೋಪೋದ್ರಿಕ್ತನಾದ ಬಳವಂತಗೌಡನು ಮತ್ತೆ ನಾಲ್ಕು ಗುದ್ದು ಕೊಟ್ಟು ಹೆಂಡತಿಯನ್ನು ತಳ್ಳಿಬಿಟ್ಟನು.

ಧಡಾಲೆಂದು ಹಿಂದೆ ಉರುಳಿಬಿದ್ದ ಕಾಶೀಬಾಯಿ ಆ ಕೂಡಲೇ ಪ್ರತಿಭಟಿಸಲಿಲ್ಲ. ಅವಳು ಅಂಜಿ ಗದಗದ ನಡುಗತೊಡಗಿದಳು ಆಕ್ಷಣ ಅವಳಲ್ಲಿ ಗೌಡನು ಹೇಳಿದಂತೆ ಪಟ್ಟುಹಿಡಿದು ಮನೆಯಿಂದ ಹೊರದಬ್ಬಿದರೆ ತನ್ನ ಬಾಳು ನಾಯಿಯ ಬಾಳಾಗಬಹುದೆಂದು ಗ್ರಹಿಸಿದಳು.

ಈ ಗೌಡರ ಮನೆತನದಲ್ಲಿ ಆಗಿಹೋದ ಇತಿಹಾಸವನ್ನು ಅವಳು ಕೇಳಿ ತಿಳಿದಿದ್ದಳು. ಮನೆಯ ಕಪಾಟಿನ ಒಳಗೆ ಹುದುಗಿದ ಹಗೆಗಳ ಕಥೆ

ಗಳನ್ನು ಅವಳು ಕೇಳಿ ತಿಳಿದಿದ್ದಳು.

ಹಗೆಯ ನೆನಪಾದಕೂಡಲೇ ಅವಳ ನೆತ್ತರು ಹೆಪ್ಪುಗಟ್ಟಿದಂತೆ ಆಯಿತು.

ಅವಳು ಮಿಸುಕದಾದಳು.

ಮುಖದ ಮೇಲೆ ಎರಡೂ ಹಸ್ತಗಳನ್ನು ಇಟ್ಟುಕೊಂಡು ಮಲಗಿದ್ದಲ್ಲಿಯೇ ಮಲಗಿದಳು.

ಮಧ್ಯರಾತ್ರಿಯ ಸುಮಾರಿಗೆ ಅವಳು ಕಣ್ಣುತೆರೆದು ತನ್ನ ಬೆರಳ ಕಿಂಡಿಯೊಳಗಿಂದ ನೋಡಿದಳು.

ದೀಪ ಇನ್ನೂ ಢಾಳವಾಗಿ ಉರಿಯುತ್ತಿತ್ತು.

ಮಂಚದ ಮೇಲೆ ಪತಿಯು ಗಲ್ಲದ ಮೇಲೆ ಕೈ ಇಟ್ಟುಕೊಂಡು ಇನ್ನೂ ಹಾಗೆಯೇ ಕುಳಿತಿದ್ದನು.

ಅವನ ಮುಖ ಗಂಭೀರವಾಗಿತ್ತು.

ನಿಷ್ಠುರತೆ ಅಲ್ಲಿ ತಾಂಡವವಾಡುತ್ತಿತ್ತು.

ಕಾಶೀಬಾಯಿ ಮೆಲ್ಲಗೆ ಮೈ ಮುರಿದುಕೊಂಡು ಎದ್ದಳು. ನೇರವಾಗಿ ಪತಿಯ ಪಾದಗಳನ್ನು ಹಿಡಿದು ಬಿಕ್ಕಿಸಿ ಬಿಕ್ಕಿಸಿ ಅಳತೊಡಗಿದಳು.

"ನನ್ನಿಂದ ತಪ್ಪಾಯಿತು. ನೀವು ಹೇಳಿದಂತೆ ಕೇಳುತ್ತೇನೆ. ನನ್ನನ್ನು ಬಡಿದು ಕೊಲ್ಲಬೇಡಿರಿ. ನಿಮ್ಮ ಕಾಲು ಬೀಳುತ್ತೇನೆ ನಾನು ಕಾಂತಾ ಹೇಳಿದಂತೆ ಕೇಳುತ್ತೇನೆ. ಮೈದುನರು ಅಂದದ್ದನ್ನು ಅನ್ನಿಸಿಕೊಳ್ಳುತ್ತೇನೆ. ನಾನು ಕೂಲಿಯ ಆಳಿನಂತೆ ಬಿದ್ದಿರುತ್ತೇನೆ.

ಕಾಶೀಬಾಯಿ ಗಂಡನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ರೋದಿಸತೊಡಗಿದಳು.

ಜೀವಮಾನದಲ್ಲಿ ಕಾಶೀಬಾಯಿ ಇಷ್ಟು ಮೆತ್ತಗಾಗಿ ಎಂದೂ ಮಾತಾಡಿರಲಿಲ್ಲ. ಈ ದಿನ ಅವಳು ಹೀಗೆ ಮಾತಾಡುತ್ತಿರುವುದನ್ನು ಕೇಳಿ ಬಳವಂತಗೌಡನ ಹೃದಯದಲ್ಲಿ ಕರುಣೆ ಚಿಮ್ಮಿತು. ಅವಳಲ್ಲಿಯೂ ಅದಾವುದೋ ಸತ್ವ ಹುದುಗಿದೆ ಎಂಬುದು ಅವನ ವಿಚಾರಕ್ಕೆ ದಾರಿ ಮಾಡಿ ಕೊಟ್ಟಿತು.

ಅವನು ಹೆಂಡತಿಯನ್ನು ಉದ್ದೇಶಿಸಿ ಹೇಳಿದನು,

"ನೀನು ಕಾಂತಾ ಹೇಳಿದಂತೆ ಕೇಳುವ ಕಾರಣವಿಲ್ಲ. ನೀನು ಹೇಳಿದಂತೆ ಅವನು ಕೇಳಬೇಕು. ಭೀಮಣ್ಣನಾಗಲಿ, ವಿಠ್ಠಲನಾಗಲಿ ನಿನಗೆ

ಏನಾದರೂ ಅಂದರೆ ಹೇಳು ಅವರ ಚರ್ಮ ಸುಲಿಯುತ್ತೇನೆ. ಆದರೆ ವ್ಯರ್ಥ ವಾಗಿ ಕಾಲುಕೆದರಿ ಜಗಳ ತೆಗೆಯಬೇಡ.

" ನೀವು ಹೇಳಿದಂತೆ ಕೇಳುತ್ತೇನೆ.

" ಈ ಮನೆಗೆ ನೀನೇ ಹಿರಿಯಳು. ಆ ರೀತಿ ನಿನ್ನ ವರ್ತನೆ ಇರಲಿ.

" ಹಾಗೆಯೇ ಮಾಡುತ್ತೇನೆ....ಆದರೆ....

" ಆದರೆ ಏನು ?

" ನೀವು....ಗೌಡರಾಗಿ....ಬಾಳಬೇಡವೇ ?

" ಹುಚ್ಚಿಯ ಹಾಗೆ ಮಾತಾಡಬೇಡ. ನಾನು ಹೇಳಿದ್ದರಿಂದಲೇ ಅವನು ಕಾರಭಾರ ಮಾಡುತ್ತಾನೆ. ನನಗೆ ಬೇಡನೆನ್ನಿಸಿದಾಗ ಹಾಗೆ ಸ್ಪಷ್ಟವಾಗಿ ಹೇಳುತ್ತೇನೆ.

" ನಿಮಗೆ ಹೇಗೆ ಬೇಕೋ ಹಾಗೆ ಮಾಡಿಕೊಳ್ಳಿರಿ.

" ಮನೆಯಲ್ಲಿ ಯಾವ ರೀತಿಯ ರಾದ್ಧಾಂತವೂ ಆಗಕೂಡದು.

" ನಾಳೆಯಿಂದ ನೀವೇ ನೋಡುವಿರಲ್ಲ.

" ಈ ಮನೆಯೇ ನಿನ್ನದು. ಹಿರಿಯ ಗೌಡತಿ ನೀನು.

" ಕಾಶೀಬಾಯಿ ಗಂಡನನ್ನು ಕಣ್ತುಂಬಾ ನೋಡಿದಳು. ಆ ನೋಟ ದಲ್ಲಿ ತನ್ನ ಹೃದಯ ಫಲಿಸಿದ ಆಶಾಕಿರಣವೊಂದು ಸೂಸಿದ ಆನಂದವನ್ನು ಅವಳು ಪಡೆದಳು.

ಕಾಶೀಬಾಯಿಯಲ್ಲಿ ಯಾವುದೇ ರೀತಿಯ ಮಾರ್ಪಾಟು ಆಗುವದು ಕಾಂತಾಬಾಯಿಗೂ ಬೇಡವಾಗಿತ್ತು. ಈಗಿನ ಪಟ್ಟವನ್ನು ಸ್ಥಿರಪಡಿಸಿ ಕೊಂಡು ಹಿರಿಯ ಅಕ್ಕನನ್ನು ಮೂಲೆಗುಂಪು ಮಾಡುವ ಅಭಿಲಾಷೆ ಅವಳದಾಗಿತ್ತು.

ಆದರೆ ಕಾಶೀಬಾಯಿಯಲ್ಲಿ ಇತ್ತೀಚೆಗೆ ಉಂಟಾದ ಪರಿವರ್ತನೆ ಅವಳಲ್ಲಿ ನಿರಾಶೆಯನ್ನೇ ತರಹತ್ತಿತ್ತು.

ಕಾಶೀಬಾಯಿ ಕಾಂತಾಳನ್ನು ಕೇಳದೇ ಯಾವುದೇ ನಿರ್ಣಯ ತೆಗೆದು ಕೊಳ್ಳುತ್ತಿರಲಿಲ್ಲ. ಮಾತುಮಾತಿಗೆ ' ಕಾಂತಾ ಇದನ್ನು ನೀನೇ ಮಾಡಿ ಬಿಡು' ಎನ್ನುತ್ತಿದ್ದಳು. ಕಾಂತಾಬಾಯಿಗೆ ಈಗ ಹಿರಿಯತನವನ್ನುಮನ್ನಿಸಲೇ ಬೇಕಾಗುತ್ತಿತ್ತು.

" ಇದು ಹಿರಿಯರು ಮಾಡುವ ಕೆಲಸ ಅಕ್ಕಾ ! ಇದನ್ನು ನೀವೇ ಮಾಡಿರಿ " ಎಂದು ಕಾಂತಾಬಾಯಿ ಅಂದಾಗ,

" ಹಿರಿಯರೇನು ಕಿರಿಯರೇನು ? ಯಾರಾದರೂ ಮಾಡಿದರಾಯಿತು. ಹಿರಿಯಳಾದ ನಾನು ಹೇಳುತ್ತೇನೆಂದಾದರೂ ನೀನು ಮಾಡು.

ಕಾಂತಾಬಾಯಿಗೆ ತಲೆಬಾಗಲೇ ಬೇಕಾಗುತ್ತಿತ್ತು.

ಈ ವರ್ತನೆಯಲ್ಲಿ ಕಾಶೀಬಾಯಿ ಅನೇಕ ನುಂಗಲಾರದ ತುತ್ತು ಗಳನ್ನು ನುಂಗಲೇ ಬೇಕಾಗುತ್ತಿತ್ತು. ಅವಳ ಮನಸ್ಸು ಕಾಂತಾನಮೇಲೆ ರುಕ್ಷವಾಗುತ್ತಿತ್ತು. ಕೋಪೋದ್ದೀಪ್ತವಾಗುತ್ತಿತ್ತು.

ಆದರೆ ಕಾಶೀಬಾಯಿ ಅವನ್ನೆಲ್ಲ ಬಹು ಪ್ರಯಾಸವಾಗಿಯಾದರೂ ಹತ್ತಿಕ್ಕಿಕೊಳ್ಳುತ್ತಿದ್ದಳು.

ಹೃದಯ ಹೊತ್ತುತ್ತಿತ್ತು ; ಕಿಡಿ ಹಾರುತ್ತಿರಲಿಲ್ಲ.

ಮನಸ್ಸು ಕೋಪಿಸುತ್ತಿತ್ತು ; ಶಬ್ದ ವೇಳುತ್ತಿರಲಿಲ್ಲ.

ಭಾವನೆಗಳನ್ನೆಲ್ಲ ಕಾಶೀಬಾಯಿ ಅದುಮಿಬಿಡುತ್ತಿದ್ದಳು. ಇದಕ್ಕೆ ಗಂಡನ ಅಂಜಿಕೆಯ ಜತೆಗೆ ಅವಳ ದೀರ್ಘ ಯೋಜನೆಯೂ ಕಾರಣವಾಗಿತ್ತು.

ತನ್ನಿಂದ ಯಾವ ತಪ್ಪೂ ಆಗದೆ ತನ್ನನ್ನು ಕಾಂತಾಬಾಯಿ ಕ್ಷುಲ್ಲ ವಾಗಿ ಕಾಣುತ್ತಾಳೆಂಬುದರ ಪ್ರತ್ಯಕ್ಷಪ್ರಮಾಣವನ್ನು ಅವಳಿಗೆ ಮಾಡಿ ಕೊಡಬೇಕಾಗಿತ್ತು.

ಈ ಹವ್ಯಾಸದಲ್ಲಿ ಅವಳು ಸಧ್ಯದ ಅವಮಾನವನ್ನು ಸಹಿಸತೊಡ ಗಿದಳು.

ಆದೆಷ್ಟು ಭಾವನೆಗಳನ್ನು ಅದುಮಿಕೊಳ್ಳುತ್ತಿದ್ದರೂ ಒಮ್ಮೊಮ್ಮೆ ಅವು ಹೊರಹೊಮ್ಮುತ್ತಿದ್ದವು. ಆ ಕೂಡಲೇ ಕಾಶೀಬಾಯಿ ಸುಧಾರಿಸಿಕೊಳ್ಳು ತ್ತಿದ್ದಳು.

ಕಾಂತಾಬಾಯಿಯ ಬಗ್ಗೆ ಅವಳಲ್ಲಿ ಮೂಡಿದ ತಿರಸ್ಕಾರವು ಯಾವ ರೀತಿಯಿಂದಲೂ ಕಡಿಮೆಯಾಗಿರಲಿಲ್ಲ. ಪ್ರತಿಯಾಗಿ ಅವಳ ಬಗ್ಗೆ ದ್ವೇಷವೇ ತುಂಬಿನಿಂತಿತ್ತು. ಏನಾದರೂ ಮಾಡಿ ತಾನು ಬೇರೆನಿಂತು ಸೋಮಪ್ಪನ ಸಹಾಯದೊಂದಿಗೆ ಯಜಮಾನರು ಊರ ಗೌಡಿಕೆಯನ್ನು ನೋಡುವಂತಾ ದಾಗ ಮಾತ್ರ ಅವಳ ಆತ್ಮಕ್ಕೆ ತೃಪ್ತಿ ಸಿಗುತ್ತಿತ್ತು.

ಈ ತೃಪ್ತಿಗಾಗಿ ಅವಳು ಚಿಕ್ಕಪುಟ್ಟ ಕಾಳಗಗಳನ್ನು ತಪ್ಪಿಸಿಕೊಳ್ಳು ತ್ತಿದ್ದಳು.

ಇದರಿಂದ ಅವಳ ದ್ವೇಷದ ಚಿಲುಮೆಯಲ್ಲಿ ಇನ್ನೊಂದು ಕಿಡಿ ಕೂಡಿ ಬೀಳುತ್ತಿತ್ತು.

ಕೂಡಿದ ಕಿಡಿಗಳು ಒಮ್ಮೆಲ್ಲ ಒಮ್ಮೆ ಜ್ವಾಲೆಯನ್ನು ತಾಳಿ ಸ್ಫೋಟವಾಗಲಾರವೆ ?

ಕಾಶೀಬಾಯಿ ಅದೆಷ್ಟು ಪ್ರಯತ್ನಮಾಡಿದರೂ ವಿಠ್ಠಲನ ಪ್ರಸ್ತ ಸಮಾರಂಭದ ದಿನ ಅದು ವಿಕೋಪಕ್ಕೆ ಹೋಯಿತು.

ಈ ಸನ್ನಿವೇಶದಿಂದ ಗೌಡರ ಮನೆತನದಲ್ಲಿ ಹೊತ್ತಿದ ಬೆಂಕಿ ಬೀಗ ಬಿಜ್ಜರ ಕಿವಿಯ ವರೆಗೂ ಹೋಗಿ ಮುಟ್ಟಿತು.

ಅಂದು ರಾತ್ರಿ ಹತ್ತುಗಂಟೆಯ ಸುಮಾರಿಗೆ ಸುವಾಸಿನಿಯರೆಲ್ಲ ಗಂಡ ಹೆಂಡರಾದ ಸರಳಾ–ವಿಠ್ಠಲರಿಗೆ ಆರತಿ ಮಾಡಿ 'ಹಾಸಿಗೆಯ ಪದ'ಗಳನ್ನು ಹೇಳಿ ಮಂಗಲವನ್ನು ಕೋರಿದ ಬಳಿಕ ಸರಳಾ ಸುಸಜ್ಜಿತವಾದ ಸಜ್ಜೆವನೆಯನ್ನು ಪ್ರವೇಶಿಸಿದಳು.

ವಿಠ್ಠಲಗೌಡನಿಗೆ ಆ ದಿನ ಜೀವನದಲ್ಲಿ ಬಂದ ರಸನಿಮಿಷವಾದುದ್ದರಿಂದ ಅವನ ರಸಿಕತೆ ಹುಚ್ಚು ಹೊಳೆಯಾಗಿ ಹರಿಯುತ್ತಿತ್ತು.

ಅವನು ಮಂದಸ್ಮಿತನಾಗಿ ಪ್ರೇಯಸಿಯನ್ನು ಬರಮಾಡಿಕೊಂಡ.

ಬೀಗ–ಬಿಜ್ಜರೆಲ್ಲ ಪಡಸಾಲೆಯಲ್ಲಿ ಮಲಗಿದರು. ಈ ನವದಂಪತಿಗಳ ಶಯ್ಯಾಗ್ರಹವು ಮೇಲಟ್ಟದ ಮೇಲೆ ಮಂಡಿತವಾಗಿತ್ತು. ವಿಠ್ಠಲನು ಬಳಸುವ ದಿನದ ಕೋಣೆಯೇ ಈ ದಿನ ಸಿಂಗಾರವಾಗಿತ್ತು.

ಎಲ್ಲರೂ ಮಲಗಿದರೂ ನಡುಮನೆಯಲ್ಲಿ ಕಾಂತಾಬಾಯಿ, ಕಾಶೀಬಾಯಿಯವರು ಯಾವ ಮಾತಿಗಾಗಿಯೋ ವಾದ ಹಾಕುತ್ತಿದ್ದರು. ರಾತ್ರಿಯ ಮೌನಸಾಮ್ರಾಜ್ಯದಲ್ಲಿ ಇದು ವಿಠ್ಠಲನಿಗೆ ಕೇಳಬರುತ್ತಿತ್ತು.

ಒಳಗಿನ ಕೋಣೆಯಲ್ಲಿ ಬಳವಂತಗೌಡರು ಎಚ್ಚರವಿದ್ದರೂ ಅವರ ಪರಿವೆ ಕೂಡ ಇಲ್ಲದೆ ಈ ಮಾತುಗಳ ಬಿರುಮಳೆ ಸುರಿಯುತ್ತಿತ್ತು.

ಸರಳಾ ಪ್ರಶ್ನಾರ್ಥಕಚಿನ್ಹೆಯಿಂದ ಪತಿಯ ಮುಖವನ್ನು ನೋಡಿದಳು.

" ಇದು ನಮ್ಮ ಮನೆಯಲ್ಲಿ ಇತ್ತೀಚೆಗೆ ಬೆಳೆದುಬಂದ ವ್ಯಾಧಿಯಾಗಿದೆ ಸರಳಾ! ಅತ್ತಿಗೆಯರಿಗೆ ಕಚ್ಚಾಡದೆ ನಿದ್ರೆ ಬರುವದಿಲ್ಲ. ಇದರ ಅಭ್ಯಾಸವು ನಿನಗೂ ಆಗುತ್ತದೆ.

" ಇಷ್ಟು ರಾತ್ರಿಯಲ್ಲಿ ಎಂತಹ ಮಾತು ಮತ್ತೆ !

ಸರಳಾ ಹಣ್ಣಿನ ತೊಳೆಯನ್ನು ಬಿಡಿಸುತ್ತ ಕೇಳಿದಳು.

" ಸ್ಫೂರ್ತಿ ಯಾವ ಕಾಲಕ್ಕೆ ಬರುವದೆಂಬುದನ್ನು ಹೇಗೆ ಹೇಳುವದು ?

ಸರಳಾ ಬಾಯಿಯಲ್ಲಿ ಹಾಕಿದ ಹಣ್ಣಿನ ತೊಳೆಯನ್ನು ಮೆಲ್ಲುತ್ತ ವಿಠ್ಠಲ ನುಡಿದನು.

ನಡುಮನೆಯಲ್ಲಿ ಮಾತುಗಳು ಇನ್ನೂ ಬಿರುಸಾಗಿ ಕೇಳಬರತೊಡಗಿದವು. ವಿಠ್ಠಲನು ಅದೆಷ್ಟು ಅಲಕ್ಷ್ಯದಿಂದ ಇರಬೇಕೆಂದರೂ ನಡೆಯದಾಯಿತು. ಅವನ ರಸಭಂಗವಾಗತೊಡಗಿತು.

"ಆ ಕುಂಕುಮ ಕರಡಿಗೆ ನನ್ನ ತವರುಮನೆಯದು. ಅದನ್ನು ಸುಮ್ಮನೆ ನನಗೆ ಕೊಟ್ಟುಬಿಡಿರಿ.

ಕಾಂತಾಬಾಯಿ ಕರ್ಕಶವಾಗಿ ನುಡಿದಳು.

"ಸುಳ್ಳು ಹೇಳಬೇಡ. ಇದು ಈ ಮನೆಯ ಆಸ್ತಿ. ನಾನು ಎಂದಿಗೂ ಕೊಡುವದಿಲ್ಲ ಬಿಡು" ಕಾಶೀಬಾಯಿ ಆ ಕರಡಿಗೆಯನ್ನು ಮುಷ್ಟಿಯಲ್ಲಿ ಬಲವಾಗಿ ಹಿಡಿದು ನಿಷ್ಠುರವಾಗಿ ಹೇಳಿದಳು.

"ಸುಮ್ಮನೇ ಕೊಡಿರಿ.

"ಕೊಡುವದಿಲ್ಲ.

"ನಾನು ಕಸಿದುಕೊಳ್ಳಬೇಕಾಗುತ್ತದೆ.

"ನನ್ನ ಮೈಮುಟ್ಟಿದರೆ ಪರಿಣಾಮವೇನಾದೀತು?

"ಹಾಗಾದರೆ ಕೊಟ್ಟುಬಿಡಿರಿ.

"ಕೊಡುವದಿಲ್ಲ....ಕೊಡುವದಿಲ್ಲ....ಕೊಡುವದಿಲ್ಲ.

ಕಾಶೀಬಾಯಿ ತೊಲೆ ಹಾರುವಹಾಗೆ ಗದ್ದರಿಸಿದಳು.

ಈ ಕರ್ಣಕಠೋರವಾದ ದನಿಯನ್ನು ಕೇಳಿ ಬಳವಂತಗೌಡರು ಕೋಣೆಯ ಬಾಗಿಲ ತೆರೆದು,

"ಏನಿದು ಗದ್ದಲ?" ಎಂದು ಕೂಗಿದರು.

"ಇದೆಲ್ಲಾ ಏನು ಅತ್ತಿಗೆ?" ಎಂದು ಮೇಲಟ್ಟದ ಕೋಣೆಯಿಂದ ವಿಠ್ಠಲನು ಏರಿಕೆಯ ದನಿಯಲ್ಲಿ ಕೇಳಿದನು.

ಒಂದು ಅರೆನಿಮಿಷ ಮೌನ.

ಒಮ್ಮೆಲೇ ಕಾಂತಾಬಾಯಿ ಚೀರಿದಳು. "ಅಯ್ಯೊ! ಬನ್ನಿರಿ! ಅಕ್ಕ ಹೇಗೆಹೇಗೋ ಮಾಡಹತ್ತಿದ್ದಾರೆ....ಅಯ್ಯೊ!....ಅಯ್ಯೊ!........ಭಾವಜಿಯವರೆ....!........"

ಬಳವಂತಗೌಡನಿಗೆ ಈ ಚೀತ್ಕಾರವನ್ನು ಕೇಳಿ ಎದೆಯಲ್ಲಿ ತಣ್ಣೀರು ಸುರುವಿದಂತಾಯಿತು.

ಅವನು ಧಡಪಡಿಸಿ ನಡುಮನೆಗೆ ಓಡಿಬಂದು ಕಾಶೀಬಾಯಿಯನ್ನು ನೋಡಿ

" ಅಯ್ಯೋ! ದೇವರೆ! ಭೀಮೂ !....ವೈದ್ಯರನ್ನು ಕರೆಯಿರೋ.... ಏನಿದು....?

ಅಣ್ಣನ ಈ ವೇದನಾಪೂರ್ಣವಾದ ದನಿಯನ್ನು ಕೇಳಿ ವಿಠ್ಠಲನು ಒಂದೇ ನೆಗೆತಕ್ಕೆ ಅಟ್ಟದ ಎಲ್ಲ ಪಾವಟಿಗೆಗಳನ್ನೂ ಹಾರಿ ಒಳಗೆಬಂದು ನೋಡುವಾಗ ಕಾಶೀಬಾಯಿ ನಿಶ್ಚೇಷ್ಟಿತಳಾಗಿ ಬಿದ್ದಿದ್ದಳು. ಅವಳ ಕಣ್ಣ ಗುಡ್ಡೆಗಳು ಮೇಲೇರಿದ್ದವು. ಒಲಗೈಯಲ್ಲಿ ಕುಂಕುಮ ಕರಡಿಗೆಯ ಅರ್ಧ ಭಾಗವು ಮುಷ್ಟಿಯಲ್ಲಿ ಬಿಗಿಯಾಗಿದ್ದು ಉಳಿದರ್ಧಭಾಗವಾದ ಮುಚ್ಚಳವು ಕಾಂತಾಬಾಯಿಯ ಕೈಯಲ್ಲಿತ್ತು. ಕುಂಕುಮ ಹಾಸಿಗೆಯ ತುಂಬ ಹರಡಿ ಬಿದ್ದಿತ್ತು.

ವಿಠ್ಠಲನು ಒಮ್ಮೆಲೇ ಅಣ್ಣನಿಗೆ ಹೇಳಿದನು.

" ನೀನು ಗಾಬರಿಯಾಗುವ ಕಾರಣವಿಲ್ಲ ಅಣ್ಣಾ! ಭೀಮಣ್ಣನನ್ನು ಎಬ್ಬಿಸಿ ವೈದ್ಯರನ್ನು ಕರೆತರಲು ಹೇಳು. ಅಲ್ಲಿಯ ವರೆಗೆ ನಾನು ಅತ್ತಿಗೆಯನ್ನು ಎಚ್ಚರಿಸಲು ಪ್ರಯತ್ನಿಸುತ್ತೇನೆ ?

ಬಳವಂತಗೌಡರು ಓಡುತ್ತಲೇ ಹೊರಬಿದ್ದರು.

ಕಾಂತಾಬಾಯಿ ಥರಥರ ನಡುಗುತ್ತಿದ್ದಳು. ಭಯದಿಂದ ಅವಳ ಮುಖದ ಕಳೆ ಕೆಟ್ಟುಹೋಗಿತ್ತು.

" ಅತ್ತಿಗೆ ಅಂಗಾಲಿಗೆ ಬೂದಿಯನ್ನು ಹಚ್ಚಿ ತಿಕ್ಕಿರಿ! ಸರಳಾ! ಊದುಗೊಳವಿಯನ್ನು ಹೆರಚಿ ಪುಡಿಮಾಡು. ಅದರ ಹೊಗೆಯಿಂದ ಅತ್ತಿಗೆಗೆ ಎಚ್ಚರವಾಗಬಹುದು....ಅತ್ತಿಗೆ !....ಅತ್ತಿಗೆ....

ವಿಠ್ಠಲನು ಕಾಶೀಬಾಯಿಯ ತಲೆಗೆ ಒಂದೇ ಸವನೇ ನೀರು ತಟ್ಟ ತೊಡಗಿದನು. ಸರಳಾ ಇದ್ದಲುವಲಿಯಲ್ಲಿ ಬೆಂಕಿ ಮಾಡಿಕೊಂಡು ಬಂದಳು. ಊದುಗೊಳಿವೆಯ ಪುಡಿಯ ಹೊಗೆಯನ್ನು ಹಾಕಲಾಯಿತು. ಇದರಿಂದ ಕಾಶೀಬಾಯಿಗೆ ಯಾವ ಪರಿಣಾಮವೇ ಆಗದಾಯಿತು. ವಿಠ್ಠಲನು ಒಂದೇ ಸವನೇ...."ಅತ್ತಿಗೆ' ಎಚ್ಚರವಾಯಿತೇ ಅತ್ತಿಗೆ! ಅಯ್ಯೋ!...." ಎಂದು ಚಡಪಡಿಸಹತ್ತಿದನು.

ಕಾಂತಾಬಾಯಿ ಒಂದೇ ಸವನೇ ಅಂಗಾಲುಗಳಿಗೆ ಬಿಸಿ ಬೂದಿಯನ್ನು ಹಚ್ಚಿ ತಿಕ್ಕತೊಡಗಿದಳು.

ಆ ವೇಳೆಗೆ ಮನೆಯ ಎಲ್ಲ ಜನರೂ ಎದ್ದು ಕುಳಿತು ಹೌಹಾರಿದರು.

ಭೀಮಣ್ಣ ವೈದ್ಯರೊಡನೆ ಬಂದಾಗ ಕಾಶೀಬಾಯಿಗೆ ಇನ್ನೂ ಸ್ಮರಣೆ ಮರುಕಳಿಸಿರಲಿಲ್ಲ.

ವೈದ್ಯರು ಎಲ್ಲರನ್ನೂ ಬದಿಗೆ ಸರಿಸಿ ಔಷಧೋಪಚಾರ ಮಾಡ ತೊಡಗಿದರು.

ಸಮಗ್ರ ಒಂದು ತಾಸಿನವರೆಗೆ ಪ್ರಯತ್ನವಾದ ಬಳಿಕ ಕಾಶೀ ಬಾಯಿಯೊಮ್ಮೆ ಕಣ್ಣು ತೆರೆದಳು. ಸುತ್ತಲೂ ನೋಡಿದಳು.

" ಕಾಂತಾ ಎಲ್ಲಿದ್ದಾಳೆ? " ಎಂದು ಮಂದದನಿಯಲ್ಲಿ ಗೋಣು ಅಲ್ಲಾಡಿಸುತ್ತ ಕೇಳಿದಳು.

" ಇಲ್ಲಿಯೇ ಇದ್ದೇನೆ ಅಕ್ಕ !

ಕಾಂತಾಬಾಯಿ ನಡುಗುವ ದನಿಯಲ್ಲಿ ಹೇಳಿದಳು.

ಕಾಶೀಬಾಯಿ ಮತ್ತೆ ಚಿಟ್ಟನೆ ಚೀರಿ ಮೂರ್ಛಿತಳಾಗಿಬಿಟ್ಟಳು.

ವೈದ್ಯರು ಕಾಂತಾಬಾಯಿಯನ್ನೊಮ್ಮೆ ತೀಕ್ಷ್ಣವಾಗಿ ನೋಡಿದರು.

ಅವರಿಗೆ ಸಂದರ್ಭದ ಅರಿವಾಯಿತು.

ಅದಾವುದೋ ಉದ್ವೇಗವು ಪರಾಕಾಷ್ಟ ಸ್ಥಿತಿಯನ್ನು ಹೊಂದಿ ಮಿದುಳಿಗೆ ಏರಿರಬೇಕು ಎಂಬುದೇ ಅವರ ಅನುಮಾನವಾಯಿತು.

ಇದು ಸತ್ಯವಾಗಿತ್ತು.

ಕಾಶೀಬಾಯಿ ಕುಂಕುಮ ಕರಡಿಗೆಯನ್ನು ಕೊಡುವದಿಲ್ಲವೆಂದು ಕೂಗಿದಕೂಡಲೇ ಕಾಂತಾಬಾಯಿ ಅದನ್ನು ಭಿರ್ರನೇ ಕಸಿದುಕೊಂಡಳು. ಇದರಿಂದ ಕಾಶೀಬಾಯಿಗೆ ಸಿಟ್ಟಿನ ತುತ್ತುತುದಿಯೇ ಬಂದಿತು. ಅದರ ಪರಿಣಾಮವಾಗಿ ಅವಳು ನಿಶ್ಚೇಷ್ಟಿತಳಾಗಿದ್ದಳು.

ಇದು ಯಾರಿಗೂ ತಿಳಿಯುವ ಶಕ್ಯವಿರಲಿಲ್ಲ.

ವೈದ್ಯರು ನಿದ್ದೆ ಬರುವ ಔಷಧವನ್ನು ಕೊಟ್ಟು ಇಲ್ಲಿಯಾರೂ ಗದ್ದಲ ಮಾಡಬಾರದೆಂದು ಹೇಳಿದರು.

ಆಗಲೇ ಬೆಳಗು ಮುಂಜಾನೆ ನಾಲ್ಕು ಗಂಟೆಯಾಗಿತ್ತು.

ವಿಠ್ಠಲನು ಸೋತ ಹೆಜ್ಜೆಯಿಂದ ಅಟ್ಟದ ಪಾವಟಿಗೆಗಳನ್ನು ಏರಿದನು.

ಅಷ್ಟೇ ದಣಿದ ಸರಳಾ ಅವನನ್ನು ಹಿಂಬಾಲಿಸಿದಳು.

೬

ಗುಡ್ಡದಂತೆ ಮೈಮೇಲೆ ಬಂದ ಭಾರವು ಮಂಜಿನ ಹನಿಯಂತೆ ಹಾರಿ ಹೋದುದನ್ನು ನೋಡಿದ ಕಾಂತಾಬಾಯಿ ಹಾಯಾಗಿ ಒಮ್ಮೆ ಉಸಿರು ಹಾಕಿದಳು.

ಈ ಹಗರಣದ ಹೊಣೆಯೆಲ್ಲ ತನ್ನದೇ ಎಂಬ ಒಳದನಿ ಅವಳನ್ನು ಸುತ್ತಿಸುತ್ತಿ ಕಾಡುತ್ತಿತ್ತು. ಪರಿಸ್ಥಿತಿ ಇಷ್ಟು ವಿಕೋಪಕ್ಕೆ ಹೋಗಬಹು ದೆಂದು ಅವಳಿಗೆ ಅನ್ನಿಸಿರಲಿಲ್ಲ. ಮಾಮೂಲವಾದ ಜಗಳಮಾಡಿ ಮಲಗ ಬೇಕೆಂದು ಮಾಡಿದ ಅವಳಿಗೆ ಈ ಭಯಂಕರ ಆಪತ್ತು ಬಂದಂತಾಗಿತ್ತು.

ಅವಳಿಗೆ ಬಹಳ ಪಶ್ಚಾತ್ತಾಪವಾಯಿತು. ಅಕಸ್ಮಾತ್ತಾಗಿ ಏನಾದರೂ ಆಗಿದ್ದರೆ...............

ಕಾಂತಾಬಾಯಿ ಗದಗುಟ್ಟಿ ನಡುಗಿದಳು.

ಏನಾದರೂ ಮಾಡಿ ಅಕ್ಕನನ್ನು ಸಂತೈಸಲೇಬೇಕೆಂದು ನಿಶ್ಚಯಮಾಡಿ ಬೆಳಗು ಮುಂಜಾನೆ ಸೂರ್ಯೋದಯವಾಗುವ ಹೊತ್ತಿಗೆ ಕಾಶೀಬಾಯಿ ಮಲಗಿದ ಕೋಣೆಯಲ್ಲಿ ಕಾಲಿಟ್ಟಳು.

ಕಾಶೀಬಾಯಿ ಇನ್ನೂ ಮಲಗಿದ್ದಳು.

ಕಾಂತಾಬಾಯಿ ಅಲ್ಲಿಯೇ ಇದ್ದಳು ಒಲೆಯನ್ನು ಹೊಡಿ ಕಾಫಿಗೆ ಎಸರು ಇಟ್ಟಳು.

ಆ ವೇಳೆಗೆ ಕಾಶೀಬಾಯಿ ಆಯಾಸದಿಂದ ಕಣ್ಣು ತೆರೆದಳು.

" ಅಕ್ಕ !

" ನನ್ನನ್ನು ಇನ್ನೂ ಕಾಡಬೇಕೆನ್ನುತ್ತೀಯಾ ? ಆಗ ಸಾಯಲಿಲ್ಲ ವೆಂದು ಈಗ ಕೊಲ್ಲಲು ಬಂದೀದ್ದಿಯಾ ?

ಕಾಶೀಬಾಯಿ ನಿಷ್ಠುರವಾಗಿ ಮಾತಾಡಿದಳು.

ಕಾಂತಾಬಾಯಿ ಅಕ್ಕನ ಪಾದಗಳನ್ನು ಗಟ್ಟಿಯಾಗಿ ಹಿಡಿದು ಅಳುತ್ತ ಹೇಳಿದಳು.

" ನನ್ನಿಂದ ತಪ್ಪಾಯಿತು ಅಕ್ಕಾ ! ಕ್ಷಮಿಸಬೇಕು. ನನ್ನ ತಪ್ಪು ಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು. ಇನ್ನೊಮ್ಮೆ ನಾನು ನಿಮಗೆ

ಏನಾದರೂ ಅಂದರೆ ನನ್ನ ನಾಲಿಗೆ ಸಹಸ್ರ ಹೋಳಾಗಲಿ. ವಿಷಮವೇಳೆ ಅಕ್ಕ! ನೀವು ನನ್ನನ್ನು ಕ್ಷಮಿಸಬೇಕು.

“ ಮಾಡುವ ಕಾರಭಾರವನ್ನು ಮಾಡಿ ಈಗ ಬುಬ್ಬುಣಚಾರ ಮಾಡ ಬೇಡ ಹೋಗು.

ನೀವು ಕ್ಷಮಿಸದಿದ್ದರೆ ನಾನು ನಿಮ್ಮ ಕಾಲನ್ನೇ ಬಿಡುವದಿಲ್ಲ. ತಪ್ಪಾಯಿತು....ತಪ್ಪಾಯಿತು....ತಪ್ಪಾಯಿತು....ಅಕ್ಕ !

ಕಾಂತಾಬಾಯಿ ಮುಳು ಮುಳು ಅಳಹತ್ತಿದಳು.

ಕಾಶೀಬಾಯಿ ಒಮ್ಮೆ ಅವಳನ್ನು ತೀಕ್ಷ್ಣವಾಗಿ ನೋಡಿ ಹೇಳಿದಳು.

“ ಸ್ವಲ್ಪ ಬಿಸಿಬಿಸಿಯಾದ ಕಾಫಿಯನ್ನು ಮಾಡಿಕೊಡು ಗಂಟಲು ಆರಿಹೋಗಿದೆ.

ಕಾಂತಾಬಾಯಿಗೆ ಹೋದಜೀವ ಬಂದತಾಯಿತು. ಅವಳು ಏನೆಲ್ಲವನ್ನುಮಾಡಿ ಅಕ್ಕನನ್ನು ಉಪಚರಿಸಿದಳು.

ಮರುದಿನ ನೋಡುವವರಿಗೆ ಈ ಮನೆಯಲ್ಲಿ ಆ ರಾತ್ರೀ ಏನೂ ಆಗಿರಲಿಲ್ಲವೆಂಬಂತೆ ಆ ಅಕ್ಕತಂಗಿಯರ ಆಚರಣೆಯಾಗಿತ್ತು.

ವಿಠ್ಠಲನಿಗೆ ಮಾತ್ರ ಅತ್ಯಂತ ಸಂತಾಪವಾಗಿತ್ತು.

ಈ ಸನ್ನಿವೇಶವನ್ನು ಮರೆಯುವದು ಅವನಿಗೆ ಸಾಧ್ಯವಿರಲಿಲ್ಲ.

ಆ ದಿನ ಮೊದಲು ಅತ್ತಿಗೆಯರ ಬಗ್ಗೆ ಅವನ ಮನಸ್ಸು ಬಿದ್ದು ಹೋಯಿತು.

ಭೀಮಣ್ಣನ ಮುಂದೆ ಟರಪುರ ಒದರಾಡಿಬಿಟ್ಟನು. ಹಿರಿಯ ಅತ್ತಿಗೆಯಿಂದ ಉಳಿಗಾಲವಿಲ್ಲವೆಂದು ಪ್ರತಿಪಾದಿಸಿದನು.

“ ಹೆಂಗಸರ ಸ್ವಭಾವವೇ ಹಾಗೆ ವಿಠೂ! ಒಂದು ದಿನ ಕಚ್ಚಾಡು ತ್ತಾರೆ. ಮರುದಿನ ಕೂಡಿ ನಕ್ಕು ಕೆಳೆಯುತ್ತಾರೆ. ಇದನ್ನೆಲ್ಲ ಗಂಡುಸಾದರು ತಲೆಗೆ ಹಚ್ಚಿಕೊಳ್ಳಬಾರದು. ಅಡಿಗೆಯ ಮನೆಯಿಂದ ಆರುಗಾವುದ ದೂರ ವಿರಬೇಕು.

“ ಆದರೆ ಈಗ ವಿಪರೀತಕಿಟ್ಟುಕೊಂಡಿದೆ ಅಣ್ಣಾ ! ಆ ಸೋಮಪ್ಪನೇ ಇದಕ್ಕೆ ಕಾರಣವಾಗಿದ್ದಾನೆ.

“ ನಾವು ಗಟ್ಟಿಮುಟ್ಟ ಇರುವ ತನಕ ಯಾವ ಸೋಮಪ್ಪನು ಏನು ಮಾಡಬಹುದು ಹೇಳು. ಹತ್ತು ಸೋಪ್ಪರನ್ನು ಉರುಳಿಸಿಬಿಡುತ್ತೇನೆ. ಸುಮ್ಮನಿರು.

" ಈ ಮನೆಯಲ್ಲಿ ಅವನ ಅವಶ್ಯಕತೆಯಾದರೂ ಏನು ?

" ಅವನು ಅತ್ತಿಗೆಗೆ ಬೇಕಾದವನು. ನಾಲ್ಕು ಜನ ಆಶ್ರಿತರ ಜನರಲ್ಲಿ ಇವನೂ ಒಬ್ಬ ಅಷ್ಟೆ. ಈಗ ನಾವು ಇವನಿಗೆ ಏನಾದರೂ ಅಂದರೆ ಅತ್ತಿಗೆ ಅದನ್ನೇ ಗುಡ್ಡದಷ್ಟು ಮಾಡಿ ಅಣ್ಣನ ಮನಸ್ಸು ಕೆಡಿಸುತ್ತಾಳೆ. ಇತ್ತೀಚೆಗೆ ಅವನೂ ಒಂದುತರಹ ಆಗಿದ್ದಾನೆ.

" ಅತ್ತಿಗೆಯ ಮೂಗುದಾರವೇ ಇದಕ್ಕೆ ಕಾರಣವಾಗಿರಬೇಕು.

" ಗೌಡರ ವಂಶದಲ್ಲಿ ಇಂದಿನ ವರೆಗೆ ಯಾರೂ ಹೆಂಡತಿ ಕುಣಿಸಿದಂತೆ ಕುಣಿದಿಲ್ಲ ವಿಠೂ ! ಈ ಮನೆತನದ ಹಿರಿಯರಲ್ಲಿ ಕೆಲವರು ಹೆಂಡತಿಯೊಡನೆ ಇಡೀ ಆಯುಷ್ಯದಲ್ಲಿ ಹತ್ತೆಂಟುಬಾರಿ ಮಾತ್ರ ಮಾತಾಡಿದ ಉದಾಹರಣೆ ಗಳಿವೆ.

" ಈಗ ಕಾಲ ಬದಲಾದರೂ ಹೆಂಡತಿಯ ಮಾತು ಕೇಳುವಾಗ ವಿವೇಚನೆ ಬೇಡವೆ ?

" ಹೆಂಡತಿಯ ಮಾತು ಕೇಳುವವನಿಗೆ ವಿವೇಚನೆಯೆಂದರೇನು ?

" ಅಣ್ಣನಿಗೆ ಒಮ್ಮೆ ಹೇಳಿಯಾದರೂ ಹೇಳಬೇಕು.

" ನಾಳಿನ ಸಾವನ್ನು ಇಂದೇ ಏಕೆ ಮೈಮೇಲೆ ಹಾಕಿಕೊಳ್ಳಬೇಕು. ಅವನಿಗೆ ತನ್ನ ದಾರಿತಪ್ಪು ಎಂದು ತಿಳಿಯುವ ವರೆಗೆ ಸುಮ್ಮನಿರುವದೇ ಲೇಸು.

" ಅಷ್ಟರಲ್ಲಿ........

" ಅಣ್ಣನದು ಅಷ್ಟು ಅವಸರದ ಪ್ರಕೃತಿಯಲ್ಲ. ಇಂದು ಆಗುವ ಕಾರ್ಯ ಇನ್ನು ಹತ್ತು ವರುಷದ ಮೇಲಾದರೂ ಆಗುತ್ತದೆಯೋ ಇಲ್ಲವೋ ?

ಇಂತಹ ಮಾತುಗಳು, ಆಗಾಗ ಈ ಅಣ್ಣತಂಮ್ಮದಿರಲ್ಲಿ ನಡೆಯ ತೊಡಗಿದವು.

ಆದರೆ ಬಳವಂತ ಅಣ್ಣನ ಬಗ್ಗೆ ಇಬ್ಬರಿಗೂ ಅಪಾರವಾದ ಗೌರವ ವಿತ್ತು. ಅತ್ತಿಗೆಯ ಬಗ್ಗೆ ಅವರ ಮನಸ್ಸು ಮಾತ್ರ ರುಕ್ಷವಾಗತೊಡಗಿತು.

ತನ್ನ ಹೆಂಡತಿಯನ್ನು ಬೇಕೆಂದೇ ಅವಳು ಹೆಚ್ಚು ದುಡಿಸುತ್ತಾಳೆಂಬ ಹೊಸ ಕಲ್ಪನೆಯೊಂದು ವಿಠ್ಠಲನಲ್ಲಿ ಸುಳಿದದ್ದರಿಂದ ಕಾಶೀಬಾಯಿಯ ಮೇಲೆ ಅವನು ಕೆಂಡ ಕಾರತೊಡಗಿದನು.

ಆ ದಿನ ರಾತ್ರಿ ಹತ್ತು ಗಂಟೆಯಾದರೂ ಸರಳಾನ ಮನೆಗೆಲಸ ಮುಗಿಯಲಿಲ್ಲ. ವಿಠ್ಠಲನು ಕೋಣೆಯಲ್ಲಿ ಅವಳ ದಾರಿ ಕಾಯ್ದು ಕಾಯ್ದು ಬೇಸತ್ತನು.

ನಡುಮನೆಯಲ್ಲಿ ಅತ್ತಿಗೆಯರು ಏನೇನೋ ಗುಣುಗುಣು ಮಾತಾಡುತ್ತ ಕುಳಿತಿರುವುದನ್ನು ಅವನು ಕಂಡಾಗ ಅವನ ಪಿತ್ತ ನೆತ್ತಿಗೇರಿತು. ತನ್ನ ಹೆಂಡತಿಯನ್ನು ಮನೆಗೆಲಸಕ್ಕೆ ಹಚ್ಚಿ ಇವರು ಚಕ್ಕಂದವಾಡುತ್ತಿರುವ ರೆಂಬುದು ಅವನ ಕೋಪಕ್ಕೆ ಕಾರಣವಾಗಿದ್ದಿತು.

ಅವನು ದುಡುದುಡು ಕೆಳಕ್ಕೆ ಇಳಿದುಬಂದು ಅತ್ತಿಗೆಯರನ್ನು ಉದ್ದೇಶಿಸಿ ಕೇಳಿದ,

" ಇವಳ ದುಡಿತ ಇನ್ನೂ ಮುಗಿಯಲಿಲ್ಲವೆ ?

" ದುಡಿತವೆಂದರೇನು ಭಾವಜಿ ! ನಾಲ್ಕು ಉಪಕರಣಗಳನ್ನು ಗಲ ಬರಿಸಲು ಅವಳಿಗೆ ನಾಲ್ಕು ತಾಸುಗಳೇ ಬೇಕಾಗುತ್ತವೆ.

" ಅವಳೇ ಏತಕ್ಕೆ ತೊಳೆಯಬೇಕು ?

" ಮತ್ತೆ ಯಾರು ತೊಳೆಯಬೇಕು ಹಾಗಾದರೆ ?

" ಇಷ್ಟುದಿನ ಯಾರು ಈ ಕೆಲಸ ಮಾಡುತ್ತಿದ್ದರು ?

" ಇಷ್ಟು ದಿನವೆಂದರೆ....

" ಇವಳು ಬರುವದಕ್ಕೆ ಮೊದಲು ?

" ಅವಳು ಬಂದಮೇಲೂ ನಾವೇ ಮಾಡುತ್ತಿದ್ದೆವು. ಈ ದಿನ ಅವಳೇ ಮಾಡುತ್ತೇನೆಂದಳು. ಆಗಲಿ ಎಂದು ನಾವೆಂದರೆ ಈ ಪ್ರಾಣಿ ರಾತ್ರಿಯನ್ನೇ ಕಳೆಯುವಂತೆ ಕಾಣುತ್ತಾಳೆ. ಬೇಕಾದ್ದು ಹೇಳಿರಿ ಭಾವಜಿ ! ಸರಳಾನಿಗೆ ಯಾವ ಕೆಲಸವೂ ಬರುವದಿಲ್ಲ. ಹುಟ್ಟಿದ ಹಾಗೆ ಬೆಳೆದಿದ್ದಾಳೆ.

ಕಾಂತಾಬಾಯಿ ನಗುತ್ತಲೇ ಹೇಳಿದಳು.

" ಅವಳು ಕೆಲಸಮಾಡುವ ಅಗತ್ಯವಾದರೂ ಎಲ್ಲಿದೆ ಹೇಳಿರಿ ? ದೊಡ್ಡ ಜಮೀನುದಾರರ ಮನೆಯಲ್ಲಿ ಬೆಳೆದವಳು ಶ್ರೀಮಂತಗೌಡರ ಮನೆ ತುಂಬಿದ್ದಾಳೆ.

" ಆದರೇನಾಯಿತು ? ಹೆಂಗುಸಾದಮೇಲೆ ಕೆಲಸ ಬರಬಾರದೆ ?

" ನನ್ನ ಹೆಂಡತಿ ಈ ಮನೆಯ ತೊತ್ತೇನು ?

ವಿಠ್ಠಲನು ಕ್ರುದ್ಧನಾಗಿ ಕೇಳಿದನು.

" ಮನೆಯ ನಾಲ್ಕು ಕೆಲಸಗಳನ್ನು ಮಾಡುವದು ಅನ್ಯಾಯದ ಕೆಲಸವಲ್ಲ ಬಿಡಿರಿ. ಈ ವಯಸ್ಸಿನಲ್ಲಿ ಕೆಲಸವನ್ನು ಕಲಿಯದೆ ಅವಳು ಯಾವಾಗ ಕಲಿಯಬೇಕು ? ಮುಂಜಾವಿನಿಂದ ಸಂಜೆಯವರೆಗೆ ಅಕ್ಕ ದುಡಿಯುತ್ತಾರೆ. ಅವರು ತೊತ್ತೆಂದು ತಿಳಿಯಬೇಕೇನು ?

“ ದುಡಿಸುವದಕ್ಕೂ ಒಂದು ಮಿತಿ ಇರಬೇಕು.

“ ನಾವೇನು ದುಡಿಸುವದಿಲ್ಲ ಮಾರಾಯರೇ! ನಾಳೆಯಿಂದ ಅವಳು ಕೆಲಸ ಮಾಡುವದೇ ಬೇಡ. ಕೋಣೆಯಲ್ಲಿ ಕುಳ್ಳಿರಿಸಿಕೊಂಡು ಪೂಜೆ ಮಾಡಿರಿ ನಾನೇಕೆ ಬೇಡವೆನ್ನಲಿ?

ಕಾಂತಾ ಸಿಡುಕಿನಿಂದಲೇ ಹೇಳಿದಳು.

“ ಇದು ಆಡುವ ಮಾತಲ್ಲ ಅತ್ತಿಗೆ.

“ ಸುಮ್ಮಸುಮ್ಮನೆ ನಮ್ಮ ಮೇಲೆ ಅಪವಾದ ಹೊರಿಸುವದು ಮಾತ್ರ ನೀವು ಆಡುವ ಮಾತು. ನೀವು ಅಪವಾದ ಹೊರಿಸುವದೂ ಬೇಡ. ಅವಳು ಈಚೆಯ ಕಡ್ಡಿಯನ್ನು ಆಕಡೆಗೆ ಸರಿಸುವದೂ ಬೇಡ. ಅದೇನೋ ಅಂತಾರಲ್ಲ !

“ ನನ್ನ ಹೆಂಡತಿಯೆಂದರೆ ನಿಮಗೆ ಕಾಲುಕಸವಾಗಿದ್ದಾಳೆ.

ಕಾಶೀಬಾಯಿ ಈ ಮಾತನ್ನು ಕೇಳಿ ಪ್ರತಿಭಟಿಸಿದಳು.

“ ಗೌಡರ ಮನೆಯನ್ನು ತುಂಬಿದ ಯಾವ ಸೊಸೆಯೂ ಕಾಲು ಕಸವಲ್ಲ ಬಿಡಿರಿ. ನೀವು ಏನಾದರೂ ಹೇಳಬೇಡಿರಿ. ಅವಳ ತಲೆಯಲ್ಲಿ ಇಲ್ಲದ್ದನು ಹಾಕಿ ಅಟ್ಟದಮೇಲೆ ಏರಿಸಬೇಡಿರಿ.

“ ಮನೆತುಂಬಿದ ಸೊಸೆ ಸರಿರಾತ್ರಿಯವರೆಗೂ ದುಡಿಯುವದು ಮಾತ್ರ ವಿಲಕ್ಷಣವಾಗಿದೆ.

“ ತನ್ನ ಮನೆಯಲ್ಲಿ ತಾನು ದುಡಿಯುತ್ತಾಳೆ. ಇದರಲ್ಲಿ ಯಾವ ಉಪಕಾರವಿದೆ?

“ ಅವಳನ್ನು ಸಾಯಹೊಡೆಯಿರಿ ಆಯಿತಿಲ್ಲೊ ?

ಎನ್ನುತ್ತ ವಿಠ್ಠಲನು ನೇರವಾಗಿ ನೀರಮನೆಗೆ ಹೋಗಿ ಅಲ್ಲಿ ತಿಕ್ಕಿದ ಬಾಂಡಿಗಳನ್ನೇ ಬೇಕೆಂದೇ ತಿಕ್ಕುತ್ತ ಕುಳಿತ ಹೆಂಡತಿಗೆ ಹೇಳಿದನು.

“ ಈ ಕೆಲಸವನ್ನು ಇಲ್ಲಿಯೇ ಬಿಟ್ಟುನಡೆ.

ಸರಳಾ ಗಂಡನನ್ನು ನೋಡಿ ಒಮ್ಮೆ ಮೈಮುರಿದುಕೊಂಡಳು. ತನಗೆ ಅತ್ಯಂತ ದಣಿವಾಗಿದೆ ಎಂಬ ಪ್ರದರ್ಶನವನ್ನು ಮಾಡಿದಳು.

ವಿಠ್ಠಲನು ಆ ಉಪಕರಣಗಳನ್ನು ತಾನೇ ಕೈಗೆತ್ತಿಕೊಂಡು ಅವುಗಳಿಗೊಮ್ಮೆ ಸ್ನಾನಮಾಡಿಸಿ ತಾನೇ ಹೊತ್ತುತಂದು ಅಡಿಗೆಯ ಮನೆಯಲ್ಲಿಟ್ಟನು.

ಸರಳಾ ಅವನನ್ನು ಹಿಂಬಾಲಿಸಿದಳು.

ಅತ್ತಿಗೆಯರು ನೋಡುತ್ತಿರುವ ಹಾಗೆಯೇ ಸರಳಾ ಅಟ್ಟದ ಮೇಲೇರಿ ಹೋದಳು.

ಕಾಂತಾಬಾಯಿ – ಕಾಶೀಬಾಯಿಯನ್ನು ನೋಡಿದಳು. ಅವಳು ಇವಳನ್ನು ನೋಡಿದಳು.

ಅವರ ದೃಷ್ಟಿಯಲ್ಲಿ ಅತೃಪ್ತಿ, ಅಸಂತೋಷಗಳು ಎದ್ದು ಕಾಣುತ್ತಿದ್ದವು.

ಈ ಮಟ್ಟಿಗೆ ಪರಸ್ಪರರಲ್ಲಿ ಒಂದೇ ದೃಷ್ಟಿ ಮೂಡಿತ್ತು.

ಹೆಂಡತಿಯನ್ನು ಮಂಚದ ಮೇಲೆ ಕುಳ್ಳಿರಿಸಿಕೊಂಡು ವಿಠ್ಠಲನು ಹೇಳಿದನು.

“ ಅವರು ಹೇಳುವ ಎಲ್ಲ ಕೆಲಸಗಳನ್ನೂ ನೀನು ಮಾಡಬೇಕೆಂಬ ನಿಯಮವಿಲ್ಲ ಸರಳಾ !

“ ಇದು ಹೇಗಾದೀತು ? ನಿಮಗೇನು ಗಂಡಸರಿಗೆ. ಹೊರಗೆ ನಿಂತು ಏನಾದರೂ ಹೇಳುತ್ತೀರಿ. ಅಡಿಗೆ ಮನೆಯಲ್ಲಿಯ ಸಂಕಟ ನಿಮಗೇನು ತಿಳಿಯುತ್ತದೆ ?

“ ನೀನು ದುಡಿಯುವ ಆಳಲ್ಲ ತಿಳಿಯಿತೆ ?

“ ನಾನೂ ಈ ಮನೆಗೆ ಬಂದಾಗ ಹಾಗೆಯೇ ತಿಳಿದಿದ್ದೆ. ತವರಿನಲ್ಲಿ ಅಚ್ಚೆಯಿಂದ ಬೆಳೆದ ಮಗಳು ಅತ್ತೆಯ ಮನೆಯಲ್ಲಿಯೂ ಹಾಗೆಯೇ ಎಂದು ತಿಳಿದಿದ್ದೆ. ಆದರೆ........

“ ನೀನು ಈ ಮನೆಗೆ ರಾಣಿ ಸರಳಾ ?

“ ಇಸ್ಪೇಟು ಎಲೆಗಳಲ್ಲಿಯೂ ಒಂದು ರಾಣಿ ಇರುತ್ತದೆ ಅಲ್ಲವೆ ? ಆ ಅವಸ್ಥೆಯೇ ನನ್ನದು. ನನ್ನ ಮಾತು ಹೇಗೇ ಇರಲಿ ನಾನೇನು ದುಡಿಯುವುದಕ್ಕೆ ಹಿಂದುಮುಂದು ನೋಡುವದಿಲ್ಲ. ಆದರೆ ಅನ್ನಿಸಿಕೊಳ್ಳುವದೆಂದರೆ ನನ್ನ ಜೀವದ ಸುತ್ತ ಬರುತ್ತದೆ.

ಸರಳಾನ ಕಣ್ಣು ಕುಣಿಯಲ್ಲಿ ನೀರು ತುಂಬಿದವು.

“ ಅತ್ತಿಗೆಯವರು ನಿನಗೆ ಅನ್ನುತ್ತಾರೇನು ? ಇದು ನನಗೆ ಹೊಸ ಮಾತೇ ಆಗಿದೆ.

ಹಣೆಯಮೇಲೆ ಹಾರಿಬಿದ್ದ ಮುಂಗುರುಳನ್ನು ತೀಡುತ್ತ ವಿಠ್ಠಲನು ಕೇಳಿದನು,

“ ಅವರು ನನ್ನ ಭರ್ತ್ಸನೆ ಮಾಡಿದರೆ ನನಗೆ ದುಃಖವಿಲ್ಲ. ಆದರೆ ಅಪ್ಪಯ್ಯಾ ! ನಾನು ನಿಮ್ಮ ಬಗ್ಗೆ ಆಡುತ್ತಿರುವದನ್ನು ಹೇಗೆ ಕೇಳಲಿ ?

" ಅತ್ತಿಗೆಯವರು ನನ್ನ ಬಗ್ಗೆಯೂ ಆಡುತ್ತಾರೆಯೆ ?

" ಎಂದಾದರೂ ಒಂದು ದಿನ ಅನ್ನುತ್ತಿದ್ದರೆ ನಾನು ಹಚ್ಚಿಕೊಳ್ಳುತ್ತಿದ್ದಿಲ್ಲ. ದಿನಬೆಳಗು ಈ ಪುರಾಣವನ್ನು ಕೇಳಿ ಕೇಳಿ ನನಗೆ ಸಾಕಾಗಿ ಹೋಗಿದೆ.

" ಅವರು ಅನ್ನುವದಾದರೂ ಏನು ಸರಳಾ !

" ಅದನ್ನು ಹೇಳಿ ನಾನೇಕೆ ಕೆಡಕಾಗಲಿ. ಒಂದಿಲ್ಲ ಒಂದು ದಿನ ನಿಮಗೇ ಅದೂ ತಿಳಿಯಲಿ.

ಈ ಮನೆಯಲ್ಲಿ ನನಗೆ ನನ್ನ ಅಣ್ಣಂದಿರು ಕೂಡ ಏನೂ ಅನ್ನದಿರುವಾಗ ಇವರಿಗೇನು ಬಂದಿದೆ ? ಅವರ ಕಣ್ಣಲ್ಲಿ ನಾನೇಕೆ ಉಲುಕುತ್ತೇನೆ ?

" ಇದರಲ್ಲಿ ನಿಮ್ಮದೂ ತಪ್ಪು ಇದೆ.

" ಯಾವುದು ?

" ಯಾವ ಕೆಲಸವನ್ನೂ ಮಾಡದೆ ಕುಳಿತು ತಿನ್ನುತ್ತೀರಲ್ಲ !

" ಅತ್ತಿಗೆ ಇದನ್ನು ಅಂದರೇ ?

"ಇವರಿಗೆ ಹೆಂಡತಿಯ ಹುಚ್ಚೇ ಹಿಡಿದಿದೆ. ಮೂರು ಹೊತ್ತು ಕುಳಿತು ತಿನ್ನುವವರು ಯಾವ ಕಾರಭಾರ ಮಾಡಬೇಕು. ಕೆಲಸವಿಲ್ಲದ ಭಾವಜಿಗೆ ಈ ಸಟವಿ ಒಂದು ಕೆಲಸವನ್ನೇ ಒದಗಿಸಿದ್ದಾಳೆ........ಇನ್ನೂ ಏನೇನೋ ಅನ್ನುತ್ತಾರೆ.

ವಿಠ್ಠಲನ ಕಣ್ಣು ಕೆಂಪಗಾದವು. ಅವನು ಸಿಡುಕಿನಿಂದಲೇ ಕೇಳಿದನು

" ನಾನು ಕೆಲಸಗೇಡಿಯೆಂದು ಇವರು ತೆಗಳುತ್ತಾರೆಯೆ ?

" ಕುಳಿತು ತಿನ್ನುವರೆಂದೂ ಅನ್ನುತ್ತಾರೆ.

" ನನ್ನ ಮನೆಯ ಅನ್ನವನ್ನು ನಾನು ತಿಂದರೆ ಇವರ ಅಪ್ಪನ ಗಂಟೇನು ಹೋಯಿತು ? ಇವರೇನು ತಮ್ಮ ತವರಿನಿಂದ ಆಸ್ತಿಯನ್ನು ತಂದು ನನ್ನ ಹೊಟ್ಟೆಗೆ ಹಾಕುತ್ತಾರೇನು ? ಕುಳಿತು ತಿನ್ನುವದಿರಲಿ, ಮಲಗಿ ಉಂಡರೂ ಮೂರು ತಲೆಮಾರು ಸರಿಯುದಷ್ಟು ಆಸ್ತಿ ಇದೆ. ಗೌಡರ ಸಂತಾನ ದುಡಿಯುವದೆಂದರೇನು ?

" ಇದೆಲ್ಲ ನನಗೇನುಗೊತ್ತು ? ನೀವು ಕೋಣದಂತೆ ಕೇವಲ ತಿಂದು ತಿರುಗುವ ಕೆಲಸವನ್ನೇ ಮಾಡುತ್ತೀರೆಂದು ಅವರು ಅನ್ನುತ್ತಾರೆ.

" ಹೀಗೋ ? ಅವರನ್ನು ಕೈಹಿಡಿದು ಕೇಳುತ್ತೇನೆ. ಎಂದೂ ಇಲ್ಲದ ಮಾತುಗಳು ಈಗೇಕೆ ಬರಬೇಕು ?

" ನಾನು ಬಂದದ್ದರಿಂದಲೇ ಅಲ್ಲವೇನು ?

" ನನ್ನ ಚಿನ್ನಾ !

" ಸಾಕುಬಿಡಿರಿ !

" ಇನ್ನೊಮ್ಮೆ ಅವರ ನಾಲಗೆ ಏಳದಂತೆ ಮಾಡುತ್ತೇನೆ. ಪ್ರಸಂಗ ಬಂದರೆ....

" ಯಾವ ರಾದ್ಧಾಂತವನ್ನೂ ಮಾಡಬೇಡಿರಿ. 'ತುಂಬಿದ ಮನೆಯಲ್ಲಿ ಇದು ತರವಲ್ಲ. ಅಲ್ಲದೆ ನೀವು ಏನುಮಾಡಿದರೂ ಅದು ನನ್ನ ತಲೆಯ ಮೇಲೆಯೇ ಬರುತ್ತದೆ.

" ಬಂದರೆ ಬರಲಿ. ಅವರೇನು ನಿನ್ನ ತಲೆ ಹೊಡೆಯುತ್ತಾರೇನು ?

" ನಿಮಗಾಗಿ ನಾನು ನನ್ನ ತಲೆಒಡೆದುಕೊಳ್ಳಲೂ ಸಿದ್ಧವಾಗಿದ್ದೇನೆ ಬಿಡಿರಿ. ಅನ್ನುವದಕ್ಕಾದರೂ ಒಂದು ಅಳತೆ ಇರಬೇಕೋ ಬೇಡವೋ ? ಈ ಮನೆಯಲ್ಲಿ ನಿಮಗೆ ಯಾವ ಅಧಿಕಾರವೂ ಇಲ್ಲವೆ ? ತುಂಬಿದ ಮನೆ – ತುಂಬಿದ ಮನೆ ಎಂದು ಯಾವಾಗಲೂ ಅನ್ನುವ ಇವರೇ ಕುಳಿತು ಮನೆಯ ಗೋಡೆಗಳಲ್ಲಿ ತೂತು ಕೊರೆಯುತ್ತಿದ್ದಾರೆ. ಅವರಿಗೆ ನಾವು ಇಲ್ಲಿ ಇರುವದೇ ಬೇಡವಾಗಿದೆ. ನಾವೆಂದರೆ ಅವರಿಗೆ ಅಸಹ್ಯವಾಗಿದೆ. ಇದನ್ನು ಎಷ್ಟು ದಿನ ಸಹಿಸುವುದು ತಾಯಿ !

ಕೇಶವರಾಯರ ಮಗಳು ತನ್ನ ಕಣ್ಣೀರಿನ ಜಲ ಸಂಪ್ರೋಕ್ಷಣೆಯಿಂದ ಪತಿಯ ಹೃದಯದಲ್ಲಿ ವಿಷದ ಉಸಿರನ್ನು ಸೂಸಿ ಯಶಸ್ವಿಯಾದಳು.

ಅಂದಿನಿಂದ ವಿಠ್ಠಲನು ತನ್ನ ಮನೆಯನ್ನು ನೋಡುವ ದೃಷ್ಟಿಯಲ್ಲಿ ಬದಲಾವಣೆಯಾಗತೊಡಗಿತು. ಆ ಸಮಗ್ರ ಮನೆ ಅವನ ಅಭಿಮಾನದ ಮನೆಯಾಗದೆ ಉಳಿಯತೊಡಗಿತು. ಈ ಮನೆಯಲ್ಲಿ ತನ್ನ ಭಾಗವಾದಾಗ ಅದು ತನ್ನ ಮನೆಯಾದೀತು ಎಂಬ ಭಾವ ಹಣಿಕಿಕ್ಕತೊಡಗಿತು.

ಹುಟ್ಟಿಬೆಳದ ಮನೆ ಈಗ ಅವನಿಗೆ ಪರಕೀಯವಾಗಿ ಕಾಣತೊಡಗಿತು.

ಅವನ ಪಾಲಿಗೆ ಅತ್ತಿಗೆಯರು ಅಂದಿನಿಂದ ದೂರದವರಾಗತೊಡಗಿದರು.

ಅಣ್ಣನ ಅಂಜಿಕೆ ಇರದಿದ್ದರೆ ವಿಠ್ಠಲನು ಆಗಲೇ ಸಿಡಿದು ಹೋಗಬಹುದಾಗಿತ್ತು.

ಈಗ ಅವನು ಸಮಯ ಕಾಯತೊಡಗಿದನು.

ಮೈದುನನಲ್ಲಿ ಉಂಟಾದ ಪರಿವರ್ತನೆಗೆ ಸರಳಾ ಕಾರಣವೆಂದು ತಿಳಿದ ಹಿರಿಯರಿಬ್ಬರೂ ಅವಳ ಮೇಲೆ ಕೆಂಡ ಕಾರತೊಡಗಿದರು.

ಸರಳಾ ಇವರ ಪರಿವೆಯನ್ನು ಇಟ್ಟುಕೊಳ್ಳದೆ ತಾನೂ ಆ ಮನೆಯ ಅಧಿಕಾರಿಯಂತೆ ವರ್ತಿಸತೊಡಗಿದಳು.

ಮನೆಯಲ್ಲಿ ನಡೆಯುತ್ತಿರುವ ಈ ವಿದ್ಯಮಾನಗಳನ್ನು ಅಳೆಯುವ ಶಕ್ತಿ ಬಳವಂತರಾಯನಲ್ಲಿ ಇರಲಿಲ್ಲ.

ಕಚ್ಚಾಡುವದು ಹೆಂಗಸರ ಸ್ವಭಾವವೇ ಎಂದು ತಿಳಿದ ಅವನು ಮನೆಯಲ್ಲಿ ಆಗಾಗ ನಡೆಯುತ್ತಿರುವ ವಾಗ್ಯುದ್ಧಗಳನ್ನು ಅಲಕ್ಷ್ಯದಿಂದಲೇ ನೋಡುತ್ತಿದ್ದನು. ಒಮ್ಮೊಮ್ಮೆ ಅಪ್ಪರಮುಟ್ಟಿಗೆ ಹೆಂಡತಿಯನ್ನು ಗದ್ದರಿಸಿ ಕೃತಾರ್ಥನಾಗುತ್ತಿದ್ದನು.

ವಿಠ್ಠಲನು ಹೆಂಡತಿಯ ದಾಸಾನುದಾಸನಾಗಿ ಅವಳು ಹೇಳಿದಂತೆ ಕುಣಿಯುತ್ತಿದ್ದನು. ಮನೆಯ ವಾತಾವರಣವನ್ನು ಕೂಡಲೇ ಹದಗೆಡಿಸುವದು ಸರಳಾನಿಗೆ ಬೇಕಾಗಿರಲಿಲ್ಲವಾದ್ದರಿಂದ ಅವಳು ಗಂಡನನ್ನು ಹೆಚ್ಚಿನ ಉಸಾಬರಿಗೆ ಹೋಗದಂತೆ ತಡೆಯುತ್ತಿದ್ದಳು. ಆದರೂ ಯಾವ ವಿಚಾರಕ್ಕಾಗಿಯೋ ಅವಳು ಆಗಾಗ ಕೇಶವರಾಯರ ಕಡೆಗೆ ಗಂಡನನ್ನು ಕಳಿಸುತ್ತಿದ್ದಳು. ಅವಳದು ಅಲ್ಪಾವಧಿ ಯೋಜನೆಯಾಗಿರಲಿಲ್ಲ; ಅವಳಿಗೆ ದೀರ್ಘಾವಧಿಯ ಶಾಶ್ವತಪರಿಹಾರ ಬೇಕಾಗಿತ್ತು.

ಕೆಲಸದ ಒತ್ತಡದಲ್ಲಿ ಭೀಮರಾಯನಿಗೂ ಸಾಕಷ್ಟು ಲಕ್ಷ್ಯವನ್ನು ಮನೆಯ ಕಡೆಗೆ ಹೊರಳಿಸಲು ಆಗುತ್ತಿರಲಿಲ್ಲ. ಅವನು ಒಂದು ದಿನ ಮನೆಯಲ್ಲಿದ್ದರೆ ಒಂಪು ತಿಂಗಳು ಹೊರಗೆ ಇರಬೇಕಾಗುತ್ತಿತ್ತು. ಮನೆತನದ ಎಲ್ಲ ಕೆಲಸದ ಭಾರವು ಅವನ ಮೇಲೆಯೇ ಇದ್ದದ್ದರಿಂದ ಇದು ಅನಿವಾರ್ಯವಾಗಿತ್ತು.

ಮನೆಯ ಮೇಲ್ವಿಚಾರಣೆಯನ್ನು ವಿಠ್ಠಲನು ಮಾಡುತ್ತಿದ್ದುದರಿಂದ ಆ ಮಟ್ಟಿಗೆ ಅವನು ನಿಶ್ಚಿಂತನೇ ಆಗಿದ್ದನು.

ಮನೆಯಲ್ಲಿ ಸುತ್ತುತ್ತಿದ್ದ ಹೊಗೆ ಈ ವರೆಗೂ ಅವನ ಕಣ್ಣು ತುಂಬಿರಲಿಲ್ಲ.

ಒಂದೆರಡು ಸಲ ಹೆಂಡತಿಯು ಅದನ್ನು ಹೇಳಿದಾಗ,

'ಆ ಚಿಕ್ಕ ಹುಡುಗಿಯನ್ನು ಸಂಬಾಳಿಸಲು ಆಗದ ನೀವು ಎಂತಹ ಹಿರಿಯರು' ಎಂದು ಹೆಂಡತಿಯನ್ನೇ ಜರೆದುಬಿಟ್ಟಿದ್ದನು.

ಕಾಂತಾಬಾಯಿ ಆ ಮೇಲೆ ಈ ಸಂಗತಿಗಳನ್ನು ಗಂಡನ ಎದುರು ಹೇಳುವದನ್ನೇ ಬಿಟ್ಟುಬಿಟ್ಟಳು.

ಈ ಅವಧಿಯಲ್ಲಿ ರಾಜಣ್ಣನೊಮ್ಮೆ ಬಂದುಹೋದನು. ಮನೆಯಲ್ಲಿ ಏನೋ ಬದಲಾವಣೆಯಾಗತೊಡಗಿದೆಯೆಂದು ಅವನಿಗೆ ಅನ್ನಿಸಿತು. ಆದರೆ ನಾಲ್ಕು ದಿನ ಬಂದಾಗ ಏತಕ್ಕೆ ಇಲ್ಲದ ಉಸಾಬರಿಯನ್ನು ಮಾಡಬೇಕೆಂದು ಅವನು ಎಲ್ಲರೊಡನೆ ನಾಲ್ಕು ಒಳ್ಳೆಯ ಮಾತುಗಳನ್ನೆ ಆಡಿ ಹೋಗಿಬಿಟ್ಟನು.

ತನ್ನ ಯಾವ ಮಾತುಗಳೂ ಫಲಿಸದ್ದನ್ನು ತಿಳಿದ ಕಾಶೀಬಾಯಿ ಬೇರೆ ವಿಧಾನವನ್ನೇ ಕೈಕೊಂಡಳು. ತವರುಮನೆಯನ್ನು ತುಂಬುವದೇ ಈ ವಿಧಾನವಾಗಿತ್ತು. ಸೋಮಪ್ಪನ ಮುಖಾಂತರವಾಗಿ ಬೆಳ್ಳಿಯ ಬಟ್ಟಲುಗಳು, ತಾಟುಗಳು, ಬೆಲೆಯುಳ್ಳ ಆಭರಣಗಳು ಅವಳ ತವರುಮನೆಯ ಹಾದೀ ಹಿಡಿಯತೊಡಗಿದವು. ಹತ್ತಾರು ಬೆಳ್ಳಿಯ ನೀಲಾಂಜನಗಳು ಮಾಯವಾಗತೊಡಗಿದವು.

ಕಾಂತಾಬಾಯಿಗೆ ಇದರ ಅರಿವಾದರೂ ಅವಳು ತಾನೇ ಇದನ್ನು ಪ್ರತಿಭಟಿಸುವಂತಿರಲಿಲ್ಲ. ಇತ್ತೀಚೆಗೆ ಸರಳಾನ ವಿರುದ್ಧವಾಗಿ ಅವರಲ್ಲಿ ಸ್ನೇಹ ಬೆಳೆದಿತ್ತು. ಇದನ್ನು ಸರಳಾನಿಂದಲೇ ಕೆಣಕಿಸಬೇಕೆಂದು ಕಾಂತಾಬಾಯಿ ಸಮಯ ಕಾಯತೊಡಗಿದಳು.

ಸರಳಾನಿಗೆ ಈಗ ಇನ್ನೊಂದು ಕೋಡು ಮೂಡಿತ್ತು. ಅವಳು ಗರ್ಭಿಣಿಯಾಗಿದ್ದಳು. ಗೌಡರ ಮನೆಯಲ್ಲಿ ಈ ಪೀಳಿಗೆಯ ಮೊದಲ ಸಂತಾನ ಮೂರನೆಯ ಮಗನಿಂದಲೇ ಉಂಟಾಗುವ ಸಂದರ್ಭ ಬಂದಿತ್ತು. ಇದು ಬಳವಂತಗೌಡನಿಗೂ, ಭೀಮರಾಯನಿಗೂ ಸಂತೋಷದ ಮಾತಾಗಿದ್ದರೂ ಅವರ ಹೆಂಡಂದಿರಲ್ಲಿ ಮಾತ್ರ ಈ ಬಗ್ಗೆ ಮತ್ಸರವೇ ಉದಿಯಿಸಿತು. ತಮಗೆ ಮಕ್ಕಳಾಗದೆ ಈ ಹುಡುಗಿ ತಾಯಾಗುವದನ್ನು ನೋಡಿ ಅವರು ಸೈರಿಸದಾದರು. ಅಲ್ಲದೆ ಹಳ್ಳಿಯಲ್ಲಿ ಆಗುವ ವೈಭವಪೂರ್ಣವಾದ ಕುಪ್ಪುಸ, ಉಡಿತುಂಬುವ ಸಮಾರಂಭಗಳು ತಮಗೆ ಇಲ್ಲದೆ ಹೋದವಲ್ಲಾ ಎಂಬ ಕರುಬು ಇಬ್ಬರನ್ನೂ ಬಾಧಿಸುತ್ತಿತ್ತು.

ಆದರೆ ಆಗಬೇಕಾದುದು ಆಗಲೇಬೇಕಲ್ಲವೆ?

ಸರಳಾನಿಗೆ ಬಯಕೆ ಕಾಡತೊಡಗಿದವು. ಬಯಕೆಯ ದಿನಗಳು ಮುಗಿದುಹೋದರೂ ಅವಳು ಬಯಕೆಯ ಆವಿರ್ಭಾವವನ್ನು ಬಿಡಲೇ ಇಲ್ಲ.

ಕೆಲಸಮಾಡುವುದನ್ನು ನಿಲ್ಲಿಸಿಬಿಟ್ಟಿದ್ದಳು. ಬೇಕಾದುದನ್ನು ಮಾಡಿಸಿಕೊಂಡು ಇಲ್ಲವೆ ಗಂಡನಿಂದ ತರಿಸಿಕೊಂಡು ತಿನ್ನುತ್ತಿದ್ದಳು.

ವಿಠ್ಠಲನು ಈಗ ಪತ್ನಿಯ ದಾಸಾನುದಾಸನಾಗಿ ಅವಳ ಇಚ್ಛೆಯನ್ನು ಪೂರೈಸಿಕೊಡುತ್ತಿದ್ದನು.

ಕಾಂತಾಬಾಯಿ ಆ ದಿನ ಸರಳಾನಿಗೆ ಹೇಳಿದಳು.

" ಈ ದಿನ ನಿನಗೆ ಮಸಾಲೆಯ ಥಾಲೀಪಿಟ್ಟು ಕೊಡುತ್ತೇನೆ. ನನ್ನ ಕೋಣೆಗೆ ಬಾ " ಎಂದಳು.

" ಅದರ ಜೊತೆಗೆ ಒಳ್ಳೊಳ್ಳೆಯ ಪುರಾಣಿ ಹಿಂಡಿಯನ್ನು ಅರೆದು ಇಟ್ಟುಬಿಡಿರಿ ಅಕ್ಕಾ ! ನನ್ನ ಬಾಯಿ ಕೆಟ್ಟುಹೋಗಿದೆ.

" ಯಾರು ಬೇಡವೆನ್ನುತ್ತಾರೆ ಬಾ! ನಿನಗೇನು ಕಡಿಮೆಯಾಗಿದೆ.

" ಆದರೆ ಹಿರಿಯ ಅಕ್ಕ ನನ್ನನ್ನು ಕಂಡರೆ........

" ಅವಳ ಮೋರೆಗೆ ಬೆಂಕೀ ಹಚ್ಚು ! ಅದೊಂದು ಪಿಕನಾಶಿ !

ಈ ಮಾತನ್ನು ಕೇಳಿ ಸರಳಾನಿಗೆ ಆನಂದವೂ ಆಯಿತು. ಅಚ್ಚರಿಯೂ ಆಯಿತು. ಕಾಶೀಬಾಯಿಯನ್ನು ಕಾಂತಾಬಾಯಿ ಹೀಗೆ ಅಂದದ್ದು ಅವಳ ಅಚ್ಚರಿಗೆ ಕಾರಣವಾಗಿತ್ತು ಕಾಶೀಬಾಯಿಯ ವಿಷಯದಲ್ಲಿ ಕಾಂತಾ ಬಾಯಿಯೂ ಹೀಗೆ ಎಂದು ತಿಳಿದು ಆನಂದವಾಗಿತ್ತು.

ರುಚಿರುಚಿಯಾದ ಥಾಲೀಪಿಟ್ಟಿನ ಚೂರನ್ನು ಬೆಣ್ಣೆಯಲ್ಲಿ ಅದ್ದಿ ಕೊಂಡು ಸರಳಾ ನಾಲಗೆಯನ್ನು ಚಪ್ಪರಿಸುತ್ತಿರುವಾಗ ಕಾಂತಾ ಅಂದಳು,

" ಇದು ಹೀಗೆಯೇ ನಡೆದರೆ ಹೇಗೆ ಸರಳಾ ?

" ಯಾವುದು ?

" ನೀನು ಚಿಕ್ಕವಳು. ನಿನ್ನ ಮುಂದೆ ಇದನ್ನು ಹೇಳಬಾರದು ಸರಿ. ಆದರೆ ಈ ಮನೆಯ ಭಾಗ್ಯದಲ್ಲಿ ನಿನ್ನದೂ ಪಾಲು ಇರುವಾಗ ನಾನು ಹೇಗೆ ಅನ್ಯಾಯಮಾಡಲಿ ಹೇಳು ?

" ಆದದ್ದಾದರೂ ಏನು ?

ಸರಳಾ ಪುರಾಣಿಯ ಚಟ್ನಿಯ ಲೇಪನವನ್ನು ಅದೇ ಮುರಿದ ತುಣುಕಿಗೆ ಮಾಡುತ್ತ ಕೇಳಿದಳು.

" ಇದನ್ನು ಯಾರ ಮುಂದೆಯೂ ಹೇಳಬೇಡ.

" ನಾನೇಕೆ ಹೇಳಲಿ ಬಿಡಿರಿ.

" ಬೇಕಾದರೆ ಒಂದು ಮಾತು ಭಾವಜಿಯ ಮುಂದೆ ಹೇಳಿದರೂ

ನಡೆದೀತು. ಈ ಮಾತು ಅವರಿಗೂ ಸಂಬಂಧಿಸಿದ ಮಾತಾಗಿದೆ.

“ ನೀವು ಹೇಗೆ ಹೇಳುತ್ತೀರೋ ಹಾಗೆ !

“ ಮನೆಯಲ್ಲಿಯ ಸಂಪತ್ತೆಲ್ಲ ಅವಳ ತವರುಮನೆಗೆ ಸಾಗತೊಡಗಿದೆ ಸರಳಾ ! ಬೆಳ್ಳಿಯ ಭಾಂಡಿಗಳನ್ನು ಸೋಮಪ್ಪ ಒಯ್ಯತೊಡಗಿದ್ದಾನೆ. ಕಾಳು-ಕಡಿಗಳಂತೂ ಲೆಕ್ಕವಿಲ್ಲದೆ ಹೋಗುತ್ತವೆ. ಇನ್ನೂ ಏನೇನು ಮಾಯವಾಗಿವೆಯೋ ನನಗೆ ಗೊತ್ತಿಲ್ಲ. ಈ ಹಿರಿಯ ಮುತ್ತೈದೆ ನಮ್ಮನ್ನೆಲ್ಲ ಬಯಲಿನಲ್ಲಿ ನಿಲ್ಲಿಸುವಂತೆ ಕಾಣುತ್ತದೆ.

“ ಅಯ್ಯ ! ಇದು ಹೀಗೆ ನಡೆದಿದೆಯೆ ?

“ ಹತ್ತು ಬೆಳ್ಳಿಯ ನೀಲಾಂಜನಗಳಿದ್ದವು. ಈಗ ಎಷ್ಟು ಅದೆ ನೀನೇ ಹೇಳು.

“ ಅಂದ ಹಾಗೆ ಇತ್ತೀಚೆಗೆ ಅವು ಕಾಣುವದೇ ಇಲ್ಲ. ಒಳಗೆ ತೆಗೆದಿರಿಸಿರಬಹುದೆಂದು ಅರಿದುಕೊಂಡಿದ್ದೆ.

“ ಮಾತು ಹೀಗಿದೆ ನೋಡು.

“ ಇದರ ಬಂದೋಬಸ್ತು ಮಾಡಲೇಬೇಕು.

“ ಹೇಗೆ ಸಾಧ್ಯ ಹೇಳು. ಹಿರಿಯಗೌಡರು ಕಣ್ಣುಮುಚ್ಚುತ್ತಾರೆ. ನನ್ನನ್ನು ಕೇಳಿದರೆ ಅವರೂ ಹೆಂಡತಿಗೆ ಅನುಕೂಲವಾಗಿರುವಂತೆ ಕಾಣುತ್ತದೆ. ನಮ್ಮವರಂತೂ, ನಿನಗೆ ಗೊತ್ತೇಯಿದೆಯಲ್ಲ, ಮನೆಯ ಉಸಾಬರಿಯನ್ನೇ ಬಿಟ್ಟುಬಿಟ್ಟದ್ದಾರೆ. ಅವರಿಗೆ ಕುರಿಸಿಕೊಳ್ಳಲೂ ಬಿಡುವಿಲ್ಲ. ಇದರಿಂದ ಈ ರಾಣಿಗೆ ಚಕ್ಕಂದವಾಗಿದೆ. ವಿಠ್ಠಲಗೌಡರಂತೂ ಚಿಕ್ಕವರು. ಅದಕ್ಕೆಂತಲೇ ನಿನ್ನಮೇಲೆ ಹೀಗೆ ಸೆಟೆದಾಡುತ್ತಾಳೆ ಸೆಟವಿ !

“ ಅವಳ ಮುಖಭಂಗ ಮಾಡದಿದ್ದರೆ ನಾನು ಕೇಶವರಾಯರ ಮಗ ಳೇಕೆ ಆಗಬೇಕು. ಅಕ್ಕ ! ನೀನು ಪಾಳಕಿಯಲ್ಲಿರು. ಇನ್ನೊಮ್ಮೆ ಆ ಸೋಮಪ್ಪ ಸಾಮಾನನ್ನು ಒಯ್ಯುವ ಸಮಯಕ್ಕೆ ಸರಿಯಾಗಿ ಅವನ ಮುಖಭದ್ರ ಮಾಡಿಬಿಡುತ್ತೇನೆ.

ಕಾಂತಾಬಾಯಿ ಇನ್ನೊಂದು ಅರ್ಧ ಥಾಲೀಪಿಟ್ಟನ್ನು ಹಾಕಿ ಹೇಳಿದಳು.

“ ನಿನಗೆ ಏನು ಅಪೇಕ್ಷೆಯಾಗುತ್ತದೋ ಅದನ್ನು ನನ್ನ ಮುಂದೆ ಹೇಳು. ಮಾಡಿಹಾಕುತ್ತೇನೆ. ಆ ಚೌಂಡಾಳಿಗೆ ಏತಕ್ಕೆ ಹೇಳುತ್ತೀ. ತನಗೆ ಮಕ್ಕಳಾಗಲಿಲ್ಲವೆಂದು ಅದು ಕಂಡವರಿಗೆಲ್ಲ ಪಾಪಕೊಡುತ್ತದೆ.

ಅಂದಿನಿಂದ ಸರಳಾನಿಗೂ ಕಾಂತಾಬಾಯಿಗೂ ಗುಪ್ತಸ್ನೇಹ ಪ್ರಾರಂಭ

ವಾಯಿತು. ಕಾಂತಾಬಾಯಿ ಕಾಶೀಬಾಯಿಗೂ ಬೇಕಾದವಳಾಗಿ ಸರಳಾ ನನ್ನೂ ಕುಣಿಸತೊಡಗಿದಳು. ಅವಳಲ್ಲಿ ಕೂಡ ಸರಳಾನ ಗರ್ಭ ಮತ್ಸರವನ್ನು ತುಂಬಿತ್ತು. ಕಾಶೀಬಾಯಿಗಿಂತ ಹೆಚ್ಚಾಗಿ ಅವಳಿಗೆ ಈ ಮಾತು ಕಂಗೆಡಿಸು ತ್ತಿತ್ತು. ಆದರೆ ಅವಳು ಅದನ್ನು ತೋರಗೊಡದೆ ನಟನೆಯಿಂದ ಇರು ತ್ತಿದ್ದಳು.

" ಬೆಳ್ಳಿಯ ನಿಲಾಂಜನಗಳಿಲ್ಲ ಎಲ್ಲಿಹೋದವು ಅಕ್ಕ ?

ಸರಳಾ ಅಧಿಕಾರಯುಕ್ತವಾಗಿ ಆ ದಿನ ಕೇಳಿದಳು.

" ಅವು ಎಲ್ಲಿಯೇ ಹೋಗಲಿ. ಅದನ್ನು ತೆಗೆದುಕೊಂಡು ನಿನಗೇನು ಮಾಡುವದಂದೆ ?

" ನಾನು ತುಳಸಿಯ ಮುಂದೆ ಹಿತ್ತಾಳೆಯ ನಿಲಾಂಜನದಲ್ಲಿ ದೀಪ ಹಚ್ಚುವ ಪ್ರಸಂಗ ಬಂದದ್ದರಿಂದ ಕೇಳಬೇಕಾಯಿತು.

" ನನಗಾದರೂ ಏನುಗೊತ್ತು. ನೀನೇ ಎಲ್ಲ ಕಾರಭಾರ ಮಾಡ ತೊಡಗಿದ್ದೀ, ಅಡಕಲ ಮೇಲಿನ ಬೆಳ್ಳಿಯ ತಾಟೂ ಕಾಣದಾಗಿದೆ,

ಕಾಶೀಬಾಯಿ ಅಪವಾದ ಹೊರಿಸುವ ದನಿಯಲ್ಲಿ ಕೈ ತಿರುವುತ್ತ ಹೇಳಿದಳು.

" ಈ ಮನೆಯಲ್ಲಿ ಯಾರಾದರೂ ಕಳ್ಳರು ಇರಲೇಬೇಕಾಯಿತು.

" ಯಾರು ಕಳ್ಳರೋ ಅವರ ಜೀವ ಹುಳ್ಳುಹುಳ್ಳಗೆ. ನೀಲಾಂಜನ ಮಾಯವಾದದ್ದು ನಿನಗೇ ಹೇಗೆ ಗೊತ್ತಾಯಿತೇ ಮಳ್ಳಿ !

" ನಿಮ್ಮ ಮಾತು ನಿಜ ! ಕಳ್ಳರ ಜೀವ ಹುಳ್ಳಹುಳ್ಳಗೆ. ಈ ಮನೆಯಲ್ಲಿ ಮನೆಗೆ ಸಂಬಂಧಿಸದವರು ಯಾಕೆ ಇರುತ್ತಾರೆ. ನನಗೇನು ತಿಳಿಯದೆ ?

" ಏನು ? ನನ್ನ ಮಾವನಿಗೆ ಹೀಗನ್ನುವಷ್ಟು ನಿನ್ನ ಪುಚ್ಚ ಬಲಿತವೆ ?

" ಯಾರಾದರೇನು ? ಈ ಮನೆಯ ಬಗ್ಗೆ............

" ಬಂದು ನಾಲ್ಕು ದಿನವಾಯಿತು. ಎಷ್ಟು ನಾಲಿಗೆ ಉದ್ದ ಬಿಡು ತ್ತೀಯೇ ?

" ಬಂದು ಹೆಚ್ಚುದಿನವಾದವರು ಮನೆಯನ್ನು ಹಾಳುಮಾಡಬೇಕೆಂದು ನಿಯಮವಿದೆಯೇನು ?

" ನಾನು ಮಾತ್ರ ಈ ಮನೆಯನ್ನು ಹಾಳುಮಾಡಲಿಕ್ಕೆ ಬಂದಿ ದ್ದೇನು. ನೀನುಮಾತ್ರ ಗಂಟು ಕೂಡಿಹಾಕಲು ಬಂದಿದ್ದೀ. ಬಸಿರಾಧ ಮಾತ್ರಕ್ಕೆ ನಿನಗೆ ಬುದ್ಧಿ ಬಂದಂತಾಗಲಿಲ್ಲ ಹೋಗು.

“ ಅದಕ್ಕೂ ಇದಕ್ಕೂ ಏನು ಸಂಬಂಧ. ನಿಮಗೆ ಬಸಿರು ನಿಲ್ಲದಿದ್ದರೆ ನನ್ನಮೇಲೇಕೆ ನಿಮ್ಮ ಮತ್ಸರ ?

“ ನಿನಗೆ ಬಹಳ ಸೊಕ್ಕುಬಂದಿದೆ.

“ ಇದು ಹೊಟ್ಟೆಕಿಚ್ಚು ಅಲ್ಲವೇನು ?

ಕಾಶೀಬಾಯಿ ಒಮ್ಮೆಲೇ ರೋಧಿಸತೊಡಗಿದಳು. ಸರಳಾ ಹತಾಶಳಾಗಿ ಆ ಸ್ಥಳ ಬಿಟ್ಟಳು.

ಮುಂದೆ ಎಂಟು ದಿನಗಳಾದ ಮೇಲೆ ಒಂದು ದಿನ ವಿಠ್ಠಲನು ಬಾಗಿಲಲ್ಲಿ ಸೋಮಪ್ಪನನ್ನು ಕರುಬಿ ಕೇಳಿದನು,

“ ನಿನ್ನ ಒಳಜೇಬಿನಲ್ಲಿ ಏನು ತುಂಬಿಕೊಂಡು ಎಲ್ಲಿಗೆ ಹೊರಟಿದ್ದೀ. ಒಳಗೆ ನಡೆ. ನನಗೆ ನಿನ್ನ ಜೇಬಿನ ಝಡತಿ ಮಾಡಬೇಕಾಗಿದೆ.

ಈ ಮಾತನ್ನು ಕೇಳಿ ಕಾಶೀಬಾಯಿ ಹೊರಗೆ ಬಂದು

“ ನನ್ನ ಮಾವನ ಜೇಬು ಝಡತಿ ಮಾಡಲಿಕ್ಕೆ ಅವನೇನು ಕಳ್ಳನಲ್ಲ. ಸುಮ್ಮನೆ ಅವನನ್ನು ಬಿಟ್ಟುಬಿಡಿರಿ.

“ ಅವರು ಕಳ್ಳರಾಗಿರದಿದ್ದರೆ ಹೀಗೆ ಕಳ್ಳತನದಿಂದ ಹೋಗುತ್ತಿರಲಿಲ್ಲ. ಅವರ ಮುಖ ನೋಡಿದರೆ ಗೊತ್ತಾಗುತ್ತದೆ. ಬೆವರು ಸುರಿಯತೊಡಗಿದೆ.

ಸರಳಾ ಕಿಸಕ್ಕನೆ ನಕ್ಕು ನುಡಿದಳು.

ಆ ಹೊತ್ತಿಗೆ ವಿಠ್ಠಲನು ಬಲಾತ್ಕಾರದಿಂದ ಸೋಮಪ್ಪನ ಒಳಜೇಬಿಗೆ ಕೈಹಾಕಿ ಅದರಿಂದ ಒಂದು ಬೆಳ್ಳಿಯ ‘ ಅತ್ತರದಾನಿ ’ಯನ್ನು ಹೊರತೆಗೆದನು.

“ ಯಾರು ಕಳ್ಳರು ಹೇಳುವಿರಾ ಅತ್ತಿಗೆ ? ಹೀಗೆ ನಿಮ್ಮ ತವರು ಮನೆಗೆ ಈ ಬದಮಾಷನ ಮುಖಾಂತರವಾಗಿ ಎಷ್ಟು ಕಳಿಸಿದ್ದೀರಿ ಹೇಳಿರಿ. ತುಂಬಿದ ಮನೆಯ ಹಿರಿಯರಾದ ನೀವು ಹೀಗೆ ವಿಶ್ವಾಸಘಾತ ಮಾಡಬಹುದೆ ? ಇದರಲ್ಲಿ ನಿಮ್ಮ ಹಸ್ತಕ್ಷೇಪವಿರದಿದ್ದರೆ ಈ ಸೋಮಪ್ಪನನ್ನು ಆಗಲೇ ಜೈಲಿಗೆ ಕಳಿಸಿಬಿಡುತ್ತಿದ್ದೆ.”

ಕಾಂತಾಬಾಯಿ ಏನೋ ಕೆಲಸವಿದ್ದವಳಂತೆ ಅಲ್ಲಿ ಬಂದು ಸುದ್ದಿಯನ್ನು ಕೇಳುವಂತೆ ನಟಿಸಿ ಹೇಳಿದಳು.

“ ಬುದ್ಧಿ ತಿಳಿಯದೆ ಅಕ್ಕ ಏನಾದರೂ ಮಾಡಿರಬಹುದು ಭಾವಜಿ ! ಇದೊಂದು ಸಲ ಕ್ಷಮಿಸಿಬಿಡಿರಿ.

ವಿಠ್ಠಲನು ಹಿರಿಯ ಅತ್ತಿಗೆಯನ್ನು ದುರುಗುಟ್ಟಿ ನೋಡುತ್ತ ಸೋಮಪ್ಪನನ್ನು ನೂಕಿಬಿಟ್ಟನು.

ಮರುದಿನ ಬಳವಂತಗೌಡನು ವಿಠ್ಠಲನನ್ನು ಕೋಣೆಗೆ ಕರೆಯಿಸಿಕೊಂಡು ಒಳಿತಾಗಿ ಛೀ ಹಾಕಿದನು. ಹಿರಿಯ ಅತ್ತಿಗೆಯ ಮರ್ಯಾದೆ ಕಳೆಯುವದೂ, ತನ್ನ ಮರ್ಯಾದೆ ಕೆಳೆಯುವದೂ ಒಂದೇ ಎಂದು ತಮ್ಮನಿಗೆ ಹೇಳಿದನು.

" ಆದರೆ ಅತ್ತಿಗೆಯುವರು ಹೀಗೆ ಮಾಡಬೇಕೇ ಅಣ್ಣಾ ?

ವಿಠ್ಠಲ ಅಬ್ಬರದಿಂದ ಕೇಳಿದನು.

" ಅವಳು ತಪ್ಪು ಮಾಡಿರಬಹುದು. ಆದರೆ ಅದನ್ನು ಒರೆಗೆ ಹಚ್ಚಲು ನೀನು ದುಡುಕಬಾರದಾಗಿತ್ತು. ಈ ಮಾತನ್ನು ನೀನು ನನ್ನ ಕಿವಿಯ ಮೇಲಿಡುವದು ಯೋಗ್ಯವಾಗಿತ್ತು. ನೀವೆಲ್ಲ ಹೀಗೆ ಮನೆಯಲ್ಲಿ ಬೇಕುಬೇಕಾದ ಕಾರಭಾರ ಮಾಡಿದರೆ ನಾನಿದ್ದು ಏನು ಪ್ರಯೋಜನ ? ನಾನು ಎದ್ದು ಹೋಗಿಬಿಡುತ್ತೇನೆ. ಬೇಕಾದ್ದು ಮಾಡಿಕೊಳ್ಳಿರಿ.

" ನನ್ನಿಂದ ತಪ್ಪಾಯಿತು ಅಣ್ಣಾ ! ಇನ್ನು ಮೇಲೆ ಅತ್ತಿಗೆಗೆ ಏನೂ ಅನ್ನುವದಿಲ್ಲ.

" ಈ ಮಾತನ್ನು ಅವಳಿಗೆ ಹೇಳು. ನನಗೆ ಹೇಳಿ ಏನು ಪ್ರಯೋಜನ.

ವಿಠ್ಠಲನು ನೇರವಾಗಿ ಅಡಿಗೆಯ ಮನೆಗೆ ಹೋಗಿ ಅತ್ತಿಗೆಯ ಪಾದ ಮುಟ್ಟಿ ಹೇಳಿದನು.

" ನೀವು ಬಹಳ ದೊಡ್ಡವರು ಅತ್ತಿಗೆ. ಇನ್ನು ಮೇಲೆ ನಿಮ್ಮ ಹೆಸರು ಎತ್ತುವದಿಲ್ಲ. ಇದೊಂದು ಸಲ ನನ್ನನ್ನು ಕ್ಷಮಿಸಿಬಿಡಿರಿ.

ವಿಠ್ಠಲನ ಮಾತಿನಲ್ಲಿ ವ್ಯಂಗ್ಯವಿತ್ತು. ಆದರೆ ಕಾಶೀಬಾಯಿ ಅದನ್ನು ಅರ್ಥಮಾಡಿಕೊಳ್ಳದೇ ಹೇಳಿದಳು.

" ಅನುಭವವಿಲ್ಲದೆ ನೀವು ಏನೇನೋ ಅಂದಿರಿ. ಪಾಪ ! ಇದಕ್ಕೆ ನಿಮ್ಮ ಚಿಕ್ಕ ವಯಸ್ಸೇ ಕಾರಣ. ನಿಮ್ಮ ಹಾಗೆ ನಾನು ಹೇಗೆ ದುಡುಕಲಿಕ್ಕೆ ಬಂದೀತು. ಇನ್ನು ಮೇಲಾದರೂ ಹಿಡಿತವಾದ ಮಾತಾಡಿರಿ " ಎಂದಳು.

ವಿಠ್ಠಲ ನರಗಳು ರಭಸದಿಂದ ಹರಿದಾಡಿದವು. ಕಾಶೀಬಾಯಿ ಅದೆಷ್ಟು ಕೃತಕಳಾಗಿದ್ದಾಳೆಂಬುದನ್ನು ಅವನು ಕಂಡುಕೊಂಡನು. ಅತ್ತಿಗೆಯ

ಪಕ್ಷಗಟ್ಟಿ ಹಿರಿಯ ಅಣ್ಣನು ಕೂಡ ತನ್ನನ್ನು ತೆಗಳಿದ್ದು ನೋಡಿ ಅವನಿಗೆ ಅತ್ಯಂತ ವ್ಯಥೆಯಾಯಿತು.

ಭೀಮಣ್ಣನಿಗಾಗಿ ಅವನು ಕಾಯತೊಡಗಿದನು.

ಸೋದರ ಮತ್ಸರದ ಮೊದಲ ಸೋಪಾನದ ಮೇಲೆ ವಿಠ್ಠಲನ ಮನಸ್ಸು ತೂಗುಯ್ಯಾಲೆಯಾಡತೊಡಗಿತು.

# ೧೦

ಗೌಡರ ಮನೆಯಲ್ಲಿ ಹೊಸಗಣ್ಣು ಮೂಡುವದು ಬಹಳ ದಿನಗಳ ಬಯಕೆಯಾಗಿದ್ದಿತು. ಆ ಗೌರವಕ್ಕೆ ಪಾತ್ರಳಾಗುವ ಮೊದಲತಾಯಿತನ ಮೊದಲಿನ ಇಬ್ಬರು ಸೊಸೆಯರಿಗೆ ಆಗದಾಗಿತ್ತು. ಸರಳಾ ಮೊದಲಿಗಳಾದಳು. ಅವಳ ಸಂಭ್ರಮವೇ ಸಂಭ್ರಮ.

ಹಳ್ಳಿಯಲ್ಲಿ ಅವಳ ತೃಪ್ತಿಗಾಗಿ ಏನೆಲ್ಲ ಸಮಾರಾಧನೆಗಳು ನಡೆಯತೊಡಗಿದವು. ತೋಟದಲ್ಲಿ ಚಿತ್ರಾನ್ನದ ಊಟ, ಬೆಳದಿಂಗಳು ಕುಪ್ಪಸ, ಕೆರೆಯಲ್ಲಿ ನೌಕೆಯನ್ನು ತೇಲಿಸಿ ಅದರಲ್ಲಿ ಭೋಜನ ಸಮಾರಂಭ, ಬಿಸಿ ಊಟ, ಪಾಯಸದೂಟ, ಮಸಾಲೆ ಕರಿಗಡಬಿನ ಊಟ, ಸೆಜ್ಜಿಯ ರೊಟ್ಟಿ, ಇಡೀ ಬದನಿಕಾಯಿಯ ತುಂಬುಗಾಯಿಯ ಪಲ್ಲೆ, ಬೆಣ್ಣೆ, ಎಳ್ಳಿನ ಚಟ್ನಿ, ಮೊದಲಾದ ಕಾರದ ಊಟದ ಮೇಜವಾನಿಗಳೂ ಆದವು.

ಹಳ್ಳಿಯಲ್ಲಿ ಉಡಿತುಂಬಿದ ಕಣಗಳಿಗೆ ಲೆಕ್ಕವೇ ಇರಲಿಲ್ಲ. ಈ ಎಲ್ಲ ಕಣಗಳನ್ನು, ಜರದ ವಸ್ತ್ರಗಳನ್ನು ಸರಳಾ ನೇರವಾಗಿ ತನ್ನ ದೊಡ್ಡ ಟ್ರಂಕಿನಲ್ಲಿಟ್ಟು ಬಿಡಹತ್ತಿದಳು.

ಹಿರಿಯರಿಬ್ಬರಿಗೂ ಮತ್ಸರವಾಗತೊಡಗಿತು. ಆದರೆ ಕಾಶೀಬಾಯಿ ತನ್ನ ಹಿರಿಯತನವನ್ನು ಲಕ್ಷ್ಯಕ್ಕೆ ತಂದುಕೊಂಡು ಶ್ರೀಮದ್ಗಾಂಭೀರ್ಯ ದಿಂದಲೇ ಅವಳನ್ನು ದ್ವೇಸತೊಡಗಿದಳು. ಆದರೆ ಕಾಂತಾಬಾಯಿ ಮಾತ್ರ ಯಾವಾಗಲೂ ಅಸಮಾಧಾನವನ್ನೇ ತೋರತೊಡಗಿದಳು.

ಅವಳ ವೈಭವ ತನಗೆ ಮೊದಲು ಬರಲಿಲ್ಲವಲ್ಲಾ ಎಂಬ ಭಾವನೆಯಲ್ಲಿ ಅವಳು ಕೊರಗತೊಡಗಿದಳು.

ಈ ಮೊದಲು ಸಂತಾನ ಪ್ರಾಪ್ತಿಗಾಗಿ ಅವಳು ಅನೇಕ ವ್ರತಗಳನ್ನೂ ಮಾಡಿದ್ದಳು. ದಾನಧರ್ಮಗಳನ್ನೂ ಮಾಡಿದ್ದಳು. ಊರಹೊರಗಿನ ಮಾರುತಿಗೆ ಮೌನದಿಂದ ಎಡತಾಕಿ ಸಂತಾನ ಅಪೇಕ್ಷೆಯನ್ನು ಆ ಬಲಭೀಮನಿಗೆ ಸೂಚಿಸಿದ್ದಳು. ಆದರೆ ಬ್ರಹ್ಮಚಾರೀ ದೇವರು ಗೌಡಕಿಗೆ ಸಂತಾನದ ಆಶೀರ್ವಾದವನ್ನು ಮಾಡಲು ಸಮರ್ಥವಾಗಿರಲಿಲ್ಲ.

ಈಗ ಕಾಂತಾಬಾಯಿ ಹನುಮನಿಗೆ ಡೊಂಕುಮೋರೆಯ ದೇವರೆಂದು ಶಪಿಸತೊಡಗಿದಳು.

ಸರಳಾನ ಸಮಾರಂಭದಲ್ಲಿ ಭಾಗವಹಿಸದೆ ಏನಾದರೂ ನೆವಮಾಡಿ ತಪ್ಪಿಸತೊಡಗಿದಳು.

ಸರಳಾನಿಗೆ ಇದರಿಂದ ಯಾವ ವ್ಯಥೆಯೂ ಆಗುತ್ತಿರಲಿಲ್ಲ.

ಉಡಿತುಂಬುವ ಶ್ರೀಮಂತ ಸಮಾರಾಧನೆಯಾದ ಬಳಿಕ ಸರಳಾ ತವರುಮನೆಗೆ ಹೆರಿಗೆಯ ನಲುವಾಗಿ ಹೋಗುವವಳಾಗಿದ್ದರಿಂದ ಮನೆಯಲ್ಲಿ ಆ ಸಮಾರಂಭವನ್ನು ಅತ್ಯಂತ ವೈಭವದಿಂದ ಆಚರಿಸಬೇಕೆಂದು ಭೀಮ ರಾಯನು ಎಲ್ಲರಿಗೂ ಆದೇಶವಿತ್ತನು. ಇಂತಹ ಸಮಾರಂಭವು ಈ ಮನೆಗೆ ಹೊಸದಾಗಿದ್ದರಿಂದ ಭೀಮರಾಯನಿಗೆ ಅತ್ಯಂತ ಸಂತೋಷವಾಗಿತ್ತು. ತಮ್ಮನ ಸಂತೋಷಕ್ಕೆ ಮಿಗಿಲಾದ ಸಂತೋಷವು ಬಾಳಣ್ಣನದಾಗಿತ್ತು.

ಕೆಲವು ದಿನಗಳಲ್ಲಿಯೇ ಭಾವೂರಾಯರ ವಂಶವನ್ನು ನಿಲ್ಲಿಸುವ ಕಂದನು ಕಣ್ಣುತೆರೆಯುವ ಭಾಗ್ಯ ಆ ಅಣ್ಣತಮ್ಮಂದಿರಲ್ಲಿ ರೋಮಾಂಚನ ವನ್ನೇ ಎಬ್ಬಿಸಿತು. ಕಣ್ಣು ತೆರೆಯುವ ಕೂಸು ವಿಠ್ಠಲನದೆಂಬ ಅನ್ಯಭಾವ ಅವರಲ್ಲಿ ತಪ್ಪಿ ಕೂಡ ಸುಳಿಯಲಿಲ್ಲ.

ಶ್ರೀಮಂತ ಸಮಾರಾಧನೆಯ ದಿನ ರಾಮೇಶ್ವರನಿಗೆ ಹನ್ನೊಂದು ಮಂದಿ ಬ್ರಾಹ್ಮಣರು ರುದ್ರಾಭಿಷೇಕವನ್ನು ಮಾಡಿದರು. ಅಷ್ಟೇಜನ ರಾಯರ ಗುಡಿಯಲ್ಲಿ ರಾಘವೇಂದ್ರಸ್ತೋತ್ರವನ್ನು ಪಠಿಸಿದರು.

ಈ ಎರಡೂ ಪಂಗಡದ ಜನರಿಗೆ ಸಮೀಚೀನವಾದ ಸುಗ್ರಾಸ ಭೋಜನವನ್ನು ಬೇರೆಬೇರೆಯಾಗಿಯೇ ಗೌಡರು ಸಿದ್ಧಪಡಿಸಬೇಕಾಯಿತು. ಯಾಕಂದರೆ ಈ ಉಚ್ಚವರ್ಗದ ಆಚಾರ್ಯ ಜನಾಂಗದಲ್ಲಿ ಒಂದೇ ಪಂಕ್ತಿ ಯಲ್ಲಿ ಎಲ್ಲರೂ ಕುಳಿತುಕೊಂಡು ಊಟಮಾಡುವಂತಿರಲಿಲ್ಲ. ಒಬ್ಬರು ಮಾಡಿದ ನೈವೇದ್ಯದ ಅಡಿಗೆಯನ್ನು ಇನ್ನೊಬ್ಬರು ಸೇವಿಸುವದು ಅಗೌರವ ವೆಂಬ ಭಾವ ಬೆಳೆದುನಿಂತಿತ್ತು.

ರೈತರಿಗಾಗಿಯೂ ಗೌಡರು ಒಳ್ಳೆ ಭೋಜನವನ್ನು ಏರ್ಪಡಿಸಿದರು.

ಸಮಾರಂಭ ಬಹಳ ಜೋಕ್ಕಾಗಿ, ವೈಭವಪೂರ್ಣವಾಗಿ ನೆರವೇರಿತು.

ಆದರೆ ಇಡೀದಿನ ಕಾಂತಾಬಾಯಿ ಮಾತ್ರ ಮುಸುಮುಸು ಮಾಡುತ್ತಲೇ ಇದ್ದಳು.

ಭೀಮರಾಯನು ಇದನ್ನು ನೋಡಿದರೂ ಆಗ ಆ ಬಗ್ಗೆ ಕೇಳುವ ವ್ಯವಧಾನವಿರದ್ದರಿಂದ ಒಮ್ಮೆ ಅವಳನ್ನು ದಿಟ್ಟಿಸಿ ಮಾತ್ರ ನೋಡಿದ್ದನು. ಮೂರೂ ಸಂಜೆಯ ಮುಂದೆ ಹೊರಗಿನ ಪಡಸಾಲೆಯಲ್ಲಿ ಆರತಿ-ಅಕ್ಷತೆಗಳ

ಸಮಾರಂಭವು ನಡೆದಿದ್ದಿತು. ಹಳ್ಳಿಯ ಸುವಾಸಿನಿಯರೆಲ್ಲ ಈ ಕಾರ್ಯಕ್ಕಾಗಿ ಬಂದು ಪಡಸಾಲೆಯಲ್ಲಿ ನೆರೆದಿದ್ದರು. ಮಂಗಳದ ಹಾಡುಗಳು, ಸುಖ ಸಂತಾನದ ಆಶೀರ್ವಾದದ ಪದಗಳು, ಒಳ್ಳೇ ಚುರುಕಾಗಿ ನಡೆದಿದ್ದವು. ಹೆಣ್ಣುಮಕ್ಕಳ ಈ ಸಂಭಾಷಣೆಯನ್ನು ಬಳವಂತರಾಯರ ಕೋಣೆಯಲ್ಲಿ ಕುಳಿತುಕೊಂಡು ಭೀಮರಾಯನು ಕೇಳುತ್ತ ಸಂತೋಷಪಡುತ್ತಿದ್ದನು.

" ನೋಡ್ರಿ, ಕಾಶೀಬಾಯರೆ ! ನಿಮ್ಮ ತಂಗಿ ತನ್ನ ಕುದುರೆಯನ್ನು ಮುಂದೆ ಓಡಿಸಿದಳು. ನೀವು ಇನ್ನುಮೇಲೆ ನಿಮ್ಮ ಕುದುರೆಗೆ ಜೀನು ಹಾಕಲೇಬೇಕು.

ಮುತ್ತೈದೆಯೊಬ್ಬಳು ಅರಿಷಣ–ಕುಂಕುಮ ತೆಗೆದುಕೊಳ್ಳುತ್ತ ನಗೆ ಚಾಟಿಯಾಡಿದಳು.

" ನನ್ನ ಮಾತು ಎಂದೂ ಸುಳ್ಳಾಗೂದಿಲ್ಲ ನೀವೇ ನೋಡೀರೆಂತ. ಮುಂದಿನ ವರುಷ ಕಾಶೀಬಾಯರ ಬಗಲಲ್ಲಿ ಪುಟ್ಟಗೌಡನು ಕುಳಿತುಕೊಂಡೇ ಕುಳಿತುಕೊಳ್ಳುವನು.

ಇನ್ನೊಬ್ಬಳು ಉಡಿ ತುಂಬಿಸಿಕೊಳ್ಳುತ್ತ ಆಶೀರ್ವಾದ ಪರ ಭಾಷಣ ಮಾಡಿದಳು.

" ಅಂದಹಾಗೆ ಕಾಂತಾಗೌಡತಿ ಎಲ್ಲಿದ್ದಾರೆ ಕಾಣುವದೇ ಇಲ್ಲವಲ್ಲ !

ಹಳಬಳಾದ ಮುದುಕಿ ಕೇಳಿದಳು.

" ಸಾವಿರ ಕೆಲಸ ಅವಳ ಪಾಲಿಗೆ !

ಕಾಶೀಬಾಯಿ ಗೌಡರ ಮನೆಯ ಗೌರವದ ದಾರವನ್ನು ಕೈಯಲ್ಲಿ ಗಟ್ಟಿಯಾಗಿ ಹಿಡಿದು ಹೇಳಿದಳು.

" ಎಷ್ಟು ಕೆಲಸವಿದ್ದರೇನು ಕಾಶೀಬಾಯಿ ! ಈ ಸಡಗರವನ್ನು ಮುಂದೆ ನೋಡಲಿಕ್ಕೆ ಬರತದ ಏನು ? ಅವರೇನು ಕಾಳಜಿ ಮಾಡುವ ಕಾರಣವಿಲ್ಲ. ಅವರಿಗೂ ದೇವರು ಫಲವನ್ನು ಕೊಟ್ಟೇಕೊಡುತ್ತಾನೆ. ಯಾರಾದರೂ ಹೋಗಿ ಕರೆದುಕೊಂಡು ಬರ್ರಿ. ಛಂದದ ಕೆಲಸದಲ್ಲಿ ಮನೆಯವರೆಲ್ಲರೂ ನಕ್ಕು ಕಲಿಯಬೇಕು. ಇದೇನು ದಿನಾಲು ಬರುವ ಪ್ರಸಂಗಗಳೇನು ?

ಈ ಮಾತುಗಳು ಭೀಮರಾಯನ ಕಿವಿಯ ಮೇಲೆ ಬಿದ್ದವು. ತನ್ನ ಹೆಂಡತಿ ಅಲ್ಲಿ ಇಲ್ಲವೆಂಬ ಅರಿವಾಗಿ ಅವನ ಹುಬ್ಬುಗಳು ಗಂಟಿಕ್ಕಿದವು.

ಬಳವಂತಗೌಡನು ತಮ್ಮನನ್ನು ಪ್ರಶ್ನಾರ್ಥಕ ನೋಟದಲ್ಲಿ ನೋಡಿದನು.

ಭೀಮರಾಯನು ಚಟ್ಟನೇ ಎದ್ದವನೇ ಹೆಂಡತಿಯ ಕೋಣೆಯ ಕಡೆಗೆ ಬೀಸುಹೆಜ್ಜೆಗಳನ್ನು ಹಾಕುತ್ತಾ ನಡೆದನು.

ಕೋಣೆಯ ಬರಿಯ ನೆಲದ ಮೇಲೆ ಕಾಂತಾಬಾಯಿ ಗಲ್ಲದ ಮೇಲೆ ಕೈ ಇಟ್ಟುಕೊಂಡು ಮುಳುಮುಳು ಅಳುತ್ತಿದ್ದಳು. ಮಂದವಾಗಿ ರೋದನ ವನ್ನೇ ಮಾಡುತ್ತಿದ್ದಳು. ಅತ್ತು ಅತ್ತು ಅವಳ ಕಣ್ಣುಗಳು ಕೆಂಪಗಾ ಗಿದ್ದವು. ಗಲ್ಲದ ಮೇಲೆ ನೀರು ಹರಿಯುತ್ತಿರುವ ಚಿಹ್ನೆ ಆಗಲೂ ಕಾಣುತ್ತಿತ್ತು.

ಈ ದೃಶ್ಯವನ್ನು ನೋಡಿ ಭೀಮರಾಯನು ಚಕಿತನಾದನು. ಹೆಂಡತಿಯ ಹಟದ ಸ್ವಭಾವವನ್ನು ಅವನು ಅರಿತವನಾಗಿದ್ದನು. ಆದರೆ ನಾಲ್ಕು ಜನರೆಲ್ಲ ಮನೆಯಲ್ಲಿ ಒಂದು ಮಂಗಲ ಸುಪ್ರಸಂಗದಲ್ಲಿ ನೆರೆದಿರುವಾಗ ಮನೆಯ ಯಜಮಾನಿತಿಯಾದವಳು ಹೀಗೆ ಅಳುತ್ತ ಕುಳಿತುಕೊಳ್ಳುವದು ಅಗೌರವವೆನ್ನಿಸಿದ್ದರಿಂದ ಅವನು ಕ್ಷುದ್ರನಾಗಿಯೇ ಹೆಂಡತಿಯನ್ನು ಗದ್ದರಿಸಿ ಕೇಳಿದನು.

" ಕೋಣೆಯಲ್ಲಿ ಕುಳಿತುಕೊಂಡು ಇದನ್ನೇನು ನಡೆಸಿದ್ದೀಯೆ? ಹಳ್ಳಿಯ ಸಮಸ್ತ ಮುತ್ತೈದೆಯರೆಲ್ಲ ಆರತಿ-ಅಕ್ಷತೆಗಳಿಗಾಗಿ ಬಂದಿರುವಾಗ ನೀನು ಕೋಣೆಯಲ್ಲಿ ಕುಳಿತು ಮುಸುಮುಸು ಯಾಕೆ ಮಾಡಹತ್ತಿದ್ದೀ. ಹೋಗು. ಆರತಿ-ಅಕ್ಷತೆಯ ಸಮಾರಂಭದಲ್ಲಿ ಅತ್ತಿಗೆಗೆ ನೆರವಾಗು ಹೋಗು. ಎಲ್ಲರೂ ನಿನ್ನನ್ನು ಕೇಳತೊಡಗಿದ್ದಾರೆ. ಹೂಂ! ಏಳು.

ಕಾಂತಾಬಾಯಿ ಗಂಡನ ಕಡೆಗೊಮ್ಮೆ ನೋಡಿ ಬಿಕ್ಕಿಬಿಕ್ಕಿಸಿ ಅಳ ತೊಡಗಿದಳು.

ಭೀಮರಾಯನಿಗೆ ತಡೆಯದಾಯಿತು.

" ನಿನಗೇನು ಧಾಡಿಯಾಯಿತೆ? ಕೋಣೆಯಲ್ಲಿ ಕುಳಿತು ಯಾವ ಹೆಣಕ್ಕಾಗಿ ಕಣ್ಣೀರು ಹಾಕತೊಡಗಿದ್ದೀ. ನಿನಗೆ ನಾಚಿಕೆಯಾದರೂ ಇದೆಯೆ? ಮಂಗಳ ಸಮಯದಲ್ಲಿ ಅಮಂಗಳದ ದನಿಯನ್ನು ತೆಗೆದು ಸುಟ್ಟ ಮುಸುಡಿಯನ್ನು ಮಾಡಿಕೊಳ್ಳಲು ನಿನಗೇನು ಬಂದಿತೇ ದರಿದ್ರಳೆ!

ಕಾಂತಾಬಾಯಿಯಲ್ಲಿ ತುಸು ಅಕ್ಕಸಪ್ರವೃತ್ತಿಯೇ ಬಂದಿತು. ಅವಳು ಸರಾಗವಾಗಿ ಅಳುತ್ತ,

" ನನ್ನ ಹಣೇಬರಾ ನೋಡಿರಿ! ಒಂದು ಕುಬಸ ಇಲ್ಲ. ಒಂದು ಖಣಾ ಇಲ್ಲ. ಎಲ್ಲಾರೂ ಅವಳ ಹೆಣಕ್ಕೆ ಬಡೀತಾರ! ಏನು ದೇವರೋ ಇದರ ಹೆಣಾ ಎತ್ಲಿ. ನನ್ನ ನೈವೇದ್ಯಾ ತಿಂದು ಇನ್ನೊಬ್ಬರಿಗೆ ಮಕ್ಕಳನ್ನ ಕೊಟ್ಟಿತು. ಇನ್ನು ನಾ ನಾಲ್ಕುಮಂದ್ಯಾಗ ಮುಖ ಹ್ಯಾಂಗತೋರಿಸಲಿ? ನನ್ನ ಎಲ್ಲಾರೂ ಬಂಜೀ ಬಂಜೀ ಅಂತಾರ! ಏನು ಮಾಡಲಿ. ಇತೀ ಹೆಣಾ ಛಂದಾಗಲಿ! ಯಾವ ಮಾರಿ ಮಾಡಿಕೊಂಡು ಈ ಮನೆ ಸೇರಿದಳೋ ಎಲ್ಲಾ ಅವಳದೇ ಆಗೇದ.

ನೆಲಕ್ಕೆ ಕೈ ಹೊಸೆಹೊಸೆದು ಕಾಂತಾಬಾಯಿ ರೋದಿಸತೊಡಗಿದಳು.

ಭೀಮರಾಯನು ಕೋಣೆಯ ಬಾಗಿಲನ್ನು ಭದ್ರವಾಗಿ ಇಕ್ಕಿಕೊಂಡು ಒಳಕ್ಕೆ ಬಂದು ಹೆಂಡತಿಯನ್ನು ಅಲುಗಾಡಿಸುತ್ತ ಅಬ್ಬರಿಸಿದನು.

" ಇದು ಹೊಟ್ಟೇಕಿಚ್ಚಿನ ಪರಮಾವಧಿ! ಎಂತಹ ಮತ್ಸರವೇ ನಿನಗೆ! ವಿಠ್ಠಲನ ಮಗನಾಗಿ ಬರುವ ಕೂಸು ನಮ್ಮದೇ ಅಲ್ಲವೇ. ಈ ಔದಾರ್ಯ ನಿನ್ನದಾಗಿರಬೇಕು. ನಿನ್ನ ದೈವ ಚೆನ್ನಾಗಿದ್ದರೆ ನಿನಗೂ ಈ ಭಾಗ್ಯ ಸಿಕ್ಕೀತು. ಈಗೇನು ನೀನು ಮುಪ್ಪಿನ ಮುದಿಕಿಯಾದೆಯಾ? ಇದೆಲ್ಲ ಹುಚ್ಚುತನ. ಕೇಳಿದವರು ನಿನ್ನನ್ನು ಹುಚ್ಚಿಯೇ ಅಂದಾರು. ಸುಮ್ಮನೆ ನಾನು ಹೇಳಿದಂತೆ ಕೇಳಿ ಹೊರಗೆ ಹೋಗು. ಅದು ಮರ್ಯಾದೆ. ಇಲ್ಲಿ ಕುಳಿತು ಲಟಿಕು ಮುರಿಯುವದು ನಿನ್ನ ದುರದೃಷ್ಟವಾಗಬಾರದು.

" ಆ ಹೊಯ್ಮಾಲಿಯ ಆರತಿ ಯಾರಿಗೆ ಬೇಕು? ಅವಳ ಅಕ್ಷತೆಯಿಂದ ನನಗೇನು? ಹಾಳಾಗಿ ಹೋಗಲಿ!

" ಇದು ಅಸಭ್ಯವರ್ತನೆಯಾಗಿದೆ. ನಾಲ್ಕು ಜನ ಏನೆಂದಾರೆಂಬ ಅಂಜಿಕೆಯಾದರೂ ನಿನಗೆ ಬೇಡವೆ?

" ನಾಲ್ಕು ಜನರಿಂದ ನಗಿಸಿಕೊಳ್ಳಲು ನಾಮರ್‍ಯೇ ಹೋಗುವದಿಲ್ಲ. ಏನಾರೆ ಅಂದುಕೊಳ್ಳಲಿ.

" ಜನರೇಕೆ ನಗುತ್ತಾರೆ ಹೋಗು!

" ಬಂಜೆಯನ್ನು ನೋಡಿ....

" ನೀನು ಬಂಜೆಯೆಂದು ಏಕೆ ತಿಳಿದುಕೊಳ್ಳುತ್ತೀ?

" ನನ್ನ ಹಿಂದೆ ಬಂದವಳು....ದೇವರೇ....

" ಇಲ್ಲಿ ಕೇಳು. ಈ ಮತ್ಸರದ ಪ್ರದರ್ಶನವನ್ನು ನಾನು ನಡೆಯ ಗೊಡುವದಿಲ್ಲ. ಗೌಡರ ಸಂತಾನ ಯಾರದಾದರೇನು? ಈ ಮನೆಯ

ಬೆಳಕಾಗಿ ಮೂಡುತ್ತದೆ. ನೀನೇದರೂ ಈಗ ಅಪಸ್ವರ ತೆಗೆದರೆ ನಾನು-ಎದ್ದು ಹೋಗಿಬಿಡುತ್ತೇನೆ. ಈಗ ತಿಂಗಳಿಗೆ ಒಮ್ಮೆಯಾದರೂ ಮನೆಗೆ ಬರುತ್ತೇನೆ. ನೀನು ಹೀಗೆಮಾಡಿದರೆ ಈ ಮನೆಗೆಯೇ ಬರುವದಿಲ್ಲ.

ಭೀಮರಾಯನು ಕಟುವಾಗಿ ಹೇಳಿದನು.

ಗಂಡನ ನಿರ್ಧಾರದ ಸ್ವರವನ್ನು ಕೇಳಿ ಕಾಂತಾಬಾಯಿ ಬೆದರಿದಳು.

ಅವಳ ಮತ್ಸರ ಒಳಗೆ ಚೀರುತ್ತಿತ್ತು. ಅವಮಾನದ ದನಿ ಬುಸುಗುಡುತ್ತಿತ್ತು. ಆದರೂ ಗಂಡನ ಮಾತು ಮೀರಲಾರದೆ ಕಾಂತಾಬಾಯಿ ಎದ್ದು ಹೊರಗೆ ನಡೆದಳು.

ಅವಳನ್ನು ಕಾಣುತ್ತಲೇ ಪುರೋಹಿತಗಿತ್ತಿ ಕೇಳಿದಳು.

" ಆರತಿ ಸಮಯಕ್ಕೆ ಸರಿಯಾಗಿ ಬಂದಿರಿ. ಇಷ್ಟು ಹೊತ್ತು ಎಲ್ಲಿ ಮಟಾಮಾಯವಾಗಿದ್ದಿರೇ ?

" ಮುಂಜಾವಿನಿಂದ ಒಂದೇ ಸವನೇ ತಲೆ ನೋಯತೊಡಗಿದೆ. ಕಣ್ಣು ಭಗಭಗ ಉರಿಯುತ್ತವೆ. ಏನು ಮಾಡಲಿ ಹೇಳಿರಿ.

ಕಾಂತಾಬಾಯಿ ವ್ಯರ್ಥ ಮುಗುಳುನಗೆಯನ್ನು ಎಳೆದು ತಂದು ಹೇಳಿದಳು.

ಸರಳಾನಿಗೆ ಈ ಮಾತು ಕೇಳಿ ಸಂತಾಪವಾಯಿತು. ಅವಳು ರುಕ್ಷವಾದ ಸ್ವರದಲ್ಲಿ ಆಡಿದಳು.

" ಅಂದಹಾಗೆ ಇತ್ತೀಚೆಗೆ ಅಕ್ಕನಿಗೆ ಪ್ರತಿದಿನ ತಲೆಸೂಲಿ ಏಳತೊಡಗಿದೆ. ಒಂದೊಂದು ದಿನ ಅದು ಭಯಂಕರವಾಗುತ್ತದೆ. ಪಾಪ! ಅವರಾದರೂ ಏನು ಮಾಡಿಯಾರು ?

" ಈ ತಲೆಸೂಲಿಗೆ ಒಂದು ಔಷಧವಿದೆ." ಜೋಯಿಸರ ವೇಣೂ ನಗುತ್ತ ಹೇಳಿದಳು." ಅವಳ ಬಗಲಲ್ಲಿ ಒಂದು ಕೂಸು ಏರಬೇಕು. ತಲೆಸೂಲಿ ತನ್ನ ತಾನೇ ಮಾಯವಾಗುತ್ತದೆ.

ಎಲ್ಲರೂ ಖೊಳ್ಳನೆ ನಕ್ಕರು.

ಈ ನಗೆಗಡಲಿನ ಮಧ್ಯದಲ್ಲಿ ಕಾಂತಾಬಾಯಿಯ ದನಿಯನ್ನು ಯಾರು ಕೇಳಬೇಕು ?

ಆರತಿ ಅಕ್ಷತೆಗಳಾದವು. ಉಡಿತುಂಬಿಸಿಕೊಂಡ ಸುವಾಸಿನಿಯರು ಮನೆಗಳಿಗೆ ಹೋಗಹತ್ತಿದರು. ಹೋಗುವ ಮುಂದೆ ಎಲ್ಲರೂ " ಗಂಡು ಮಗನ ತಾಯಾಗಿ ಬರಬೇಕು ಸರಳಕ್ಕ " ಎಂದು ಬಾಯತುಂಬ ಹರಸಿದರು.

ಸರಳಾ ಹಿರಿಯ ಭಾವನಿಗೆ ಮಣಿದಾಗ ಬಳವಂತಗೌಡನು " ಅಷ್ಟ ಪುತ್ರ ಸೌಭಾಗ್ಯವತಿಯಾಗು " ಎಂದು ಆಶೀರ್ವದಿಸಿದನು.

ಯೋಚನಾಮಗ್ನನಾದ ಭೀಮರಾಯನು, ತಮ್ಮನ ಹೆಂಡತಿಗೆ ಒಳ್ಳೆಯ ಮಾತುಗಳನ್ನಾಡಿ,

" ಇವಳ ಸ್ವಭಾವ ಒಂದು ರೀತಿಯದು ಸರಳಾ! ನೀನು ಅವಳ ಮಾತುಗಳನ್ನು ಹಚ್ಚಿಕೊಳ್ಳಬೇಡ " ಎಂದನು.

" ಅವರೇನು ಅಂದಿದ್ದಾರೆ ಬಿಡಿರಿ. ಎಷ್ಟಾದರು ಅವರು ಹಿರಿಯರೇ ಅಲ್ಲವೇನು ?

ಮರುದಿನ ಕೇಶವರಾಯರು ಒಂದು ಕಾರನ್ನು ಮಾಡಿಕೊಂಡು ಬಂದು ಮಗಳನ್ನು ಕರೆದುಕೊಂಡು ಹೋಗಿಬಿಟ್ಟರು.

ವಿಠ್ಠಲನು ಹೆಂಡತಿಯನ್ನು ಕಳಿಸಲು ಅವಳ ತೌರೂರಿನ ವರೆಗೂ ಹೋದನು.

ಅಲ್ಲಿಂದ ಬಂದ ಬಳಿಕ ಕೂಡ ವಿಠ್ಠಲನು ಮನೆಯಲ್ಲಿ ಯಾವ ಆಸ್ಥೆ ಯನ್ನೂ ವಹಿಸುತ್ತಿರಲಿಲ್ಲ.

ಹೆಂಡತಿ ಇಲ್ಲದ ಮನೆ ಅವನಿಗೆ ತನ್ನ ಮನೆಯಂತೆ ಕಾಣದಾಯಿತು. ಅವನು ಎಷ್ಟು ಬೇಕೋ ಅಷ್ಟು ಮಾತುಗಳನ್ನು ಆಡುತ್ತ ಕಾಲದೂಡ ತೊಡಗಿದನು.

ಮನೆಯಲ್ಲಿ ಹೆಂಡತಿ ಇರುವಾಗ ಅತ್ತಿಗೆಯರು ಅವಳನ್ನು ಅನೇಕ ರೀತಿಯಿಂದ ಕಾಡಿದರೆಂಬ ಮಾತು ಅವನಲ್ಲಿ ಕುದಿಯುತ್ತಿತ್ತು. ಒಂದೆರಡು ಸಲ ಈ ಬಗ್ಗೆ ದೂರಿದಾಗ ಅಣ್ಣಂದಿರು ಕೂಡ ತಮ್ಮತಮ್ಮ ಹೆಂಡಂದಿರ ಪಕ್ಷವನ್ನೇ ಹಿಡಿದು ಮಾತಾಡಿದರೆಂದು ಇವನ ತಿಳುವಳಿಕೆಯಾಗಿದ್ದರಿಂದ ಆಮೇಲೆ ಹೇಳುವದನ್ನೇ ಅವನಿಗೆ ಬಿಡಬೇಕಾಯಿತು.

ಈ ಎಲ್ಲ ಸಂಗತಿಗಳನ್ನು ಉಲ್ಲೇಖಿಸಿ ರಾಜಣ್ಣನಿಗೆ ಅವನೊಂದು ದೀರ್ಘಪತ್ರ ಬರೆದುಬಿಟ್ಟನು. ತನ್ನ ಶೋಭನ – ಶ್ರೀಮಂತ ಸಮಾರಾಧನೆ ಗಳಲ್ಲಿ ಅತ್ತಿಗೆಯರು ಅದೆಷ್ಟು ಮತ್ಸರದಿಂದ ವರ್ತಿಸಿದರೆಂಬುದನ್ನು ಯಥಾ ವತ್ತಾಗಿ ಬಣ್ಣಿಸಿ ಬರೆದನು.

" ಗೌಡರ ಮನೆತನದಲ್ಲಿ ಏಕಸೂತ್ರತೆ ಇದ್ದುದರಿಂದಲೇ ಅದಕ್ಕೆ ಈ ಬೆಲೆ ಇದೆ. ಈಗ ಈ ಸೂತ್ರದೊಳಗಿನ ಮಣಿಗಳು ಸಡಿಲಾಗತೊಡಗಿ ದಂತೆ ನನಗೆ ಭಾಸವಾಗತೊಡಗಿದೆ. ' ಬೇಸರೇ ನಮ್ಮ ಮನೆತನವನ್ನು

ಕಾಪಾಡಬೇಕು ' ಎಂದು ತಿಳಿಸಿದನು.

" ಮನೆಯಲ್ಲಿ ಅಂದಾದುಂದಿ ವಿಪರೀತವಾಗಿರುವದಾಗಿಯೂ, ಅತ್ತಿಗೆಯರು ಮೇಲ್ವಿಚಾರಣೆಯನ್ನು ಬಿಟ್ಟು ತಮ್ಮ ತಮ್ಮ ಸ್ವಾರ್ಥ ಸಾಧಿಸಿಕೊಳ್ಳ ಹತ್ತಿರುವರೆಂದೂ, ಮನೆಯ ಬೆಲೆಯುಳ್ಳ ಸಾಮಾನುಗಳೆಲ್ಲ ಮಟಾಮಾಯವಾಗತೊಡಗಿರುವವೆಂದೂ, ತಿಳಿಸಿ ಇದರ ಅರಿವಿದ್ದರೂ ಅಣ್ಣಂದಿರು ಯಾವ ಲಕ್ಷ್ಯವನ್ನೂ ಹಾಕದಿರುವದು ಶೋಚನೀಯವಾಗಿದೆಯೆಂದು ಗಂಭೀರವಾಗಿ ಬರೆದನು.

" ಬಾಳಣ್ಣನು ಮೊದ್ದೆಂದು ತಿಳಿಯುವದು ತಪ್ಪು. ಅವನು ಪಕ್ಕಾ ಹುಷಾರಿಯಾಗಿದ್ದಾನೆ. ಹಿರಿಯತನದ ಅವಕಾಶವನ್ನು ವಿನಿಯೋಗಿಸಿಕೊಂಡು ಮುಂದಿನ ಯೋಜನೆಯನ್ನು ಈಗಲೇ ಹಾಕಿಕೊಂಡು ಬೇರೆ ಗಂಟುಮಾಡಿಕೊಳ್ಳಹತ್ತಿರುವದಾಗಿ ಸ್ವತಃ ನನ್ನ ಮಾವ ಕೇಶವರಾಯರೇ ಹೇಳಹತ್ತಿದ್ದಾರೆ. ಈ ಬಗ್ಗೆ ಚಿಕ್ಕವರಾದ ನಾವು ಗಂಭೀರವಾಗಿ ವಿಚಾರ ಮಾಡುವ ಪ್ರಸಂಗ ಬಂದಿದೆ. ಭೀಮಣ್ಣನಂತೂ ವಿಚಿತ್ರನಾಗಿದ್ದಾನೆ. ಅವನು ಈಗ ಹೊರಗಿನ ಹಳ್ಳಿಯಲ್ಲಿಯೇ ಬೀಡಾರ ಹಾಕಿ ಯಾವಾಗಾದರೊಮ್ಮೆ ಮನೆಗೆ ಬರುತ್ತಾನೆ. ಅವನ ಹಳ್ಳಿಯ ವಾಸವು ಅಗಮ್ಯವಾಗಿದೆ. ಆದರೂ ಕರ್ಣೋಪಕರ್ಣವಾಗಿ ಬಂದ ಸುದ್ದಿಗಳನ್ನು ನಂಬುವರಾದರೆ ಅವನು ಆ ಹಳ್ಳಿಯಲ್ಲಿ ಬೇರೆ ಒಂದು ಉಪಪ್ರಪಂಚವನ್ನೇ ಹೂಡಿದ್ದಾನೆ ಎಂದು ತಿಳಿಯುತ್ತದೆ. ಆ ಸಂಸಾರವು ಮತ್ತೆ ಯಾರದೂ ಆಗಿರದೆ ನೀಲಿ ಹಾಗೂ ಅವಳ ತಾಯಿಯದೇ ಎಂದು ಕೇಳುತ್ತೇನೆ. ಇದು ನಗೆಗೇಡಲ್ಲವೆ ? ಗೌಡರ ಮನೆತನದಲ್ಲಿ ಇಂಥದೂ ಆಗಬೇಕೆ ?

ಸುಧಾನ ನೆನಪು ಈಗ ಯಾರಿಗೂ ಆಗುವದಿಲ್ಲ. ಅವಳ ಸಲುವಾಗಿ ಸಿಕ್ಕಾಪಟ್ಟೆ ಖರ್ಚಾಯಿತೆಂದೂ, ಅದಕ್ಕಾಗಿ ನಾಲ್ಕು ದೊಡ್ಡ ಹೊಲಗಳನ್ನು ಮಾರುವ ಪ್ರಸಂಗ ಬಂದಿತೆಂದೂ ಭೀಮಣ್ಣ ಒಂದು ದಿನ ಅಣ್ಣನ ಮುಂದೆ ಹೇಳುತ್ತಿರುವದನ್ನು ನಾನು ಕೇಳಿದೆ. ಇದು ವಿಚಿತ್ರವಲ್ಲವೆ ? ತಂದೆ ಸುಧಾನ ಮದುವೆಗಾಗಿ ತೆಗೆದಿಟ್ಟ ಇಪ್ಪತ್ತೈದು ಸಾವಿರ ರೂಪಾಯಿಗಳು ಏನಾದವು ?

ನೀನಂತೂ ಈ ವ್ಯವಹಾರವನ್ನು ತಲೆಯಲ್ಲಿಯೇ ಹಾಕಿಕೊಳ್ಳುವದಿಲ್ಲ. ನಿನ್ನ ಕಾಲೇಜು ಮುಗಿಯುವಂತಿಲ್ಲ, ನಿನ್ನ ಅಭ್ಯಾಸಕ್ಕೆ ಕೊನೆಯಿಲ್ಲ ಎಂತಲೇ ನಿನ್ನಲ್ಲಿ ಜೀವನದ ಬಗ್ಗೆ ಅವ್ಯವಹಾರದ ಕಲ್ಪನೆಯೇ ಇದೆ.

ಪುಸ್ತಕ ಪ್ರಪಂಚದಿಂದ ನೀನು ಎದ್ದುಬಂದಾಗ ಜೀವನದ ಚಿತ್ರ ನಿನಗೆ ಕಂಡುಬಂದೀತು. ಸಧ್ಯ ಇಷ್ಟು ತಿಳಿಸಿದ್ದೇನೆ. ಆಗಾಗ ಬರೆಯುತ್ತಿರುತ್ತೇನೆ. ಸರಳಾ ತವರಿನಲ್ಲಿ ಸುಖವಾಗಿದ್ದಾಳೆ. ಅವಳಿಗೆ ಗಂಡುಸಂತಾನ ಪ್ರಾಪ್ತಿಯಾದ ಶುಭಸಮಾಚಾರವನ್ನು ನಿನಗೆ ಕೂಡಲೇ ತಿಳಿಸುತ್ತೇನೆ.

ಮೊದಲಾಗಿ ವಿಠ್ಠಲನು ರಾಜಣ್ಣನಿಗೆ ಪತ್ರ ಬರೆದನು. ಈ ಮೊದಲು ಇಂತಹ ಪತ್ರವನ್ನು ಅವನು ಎಂದೂ ಬರೆದವನಲ್ಲ. ಈಗ ಬರೆಯಲು ಕೇಶವರಾಯರೇ ಸೂಚಿಸಿದ್ದರು. ಅವರಿಗೆ ರಾಜಣ್ಣನನ್ನು ತಮ್ಮ ಅಳಿಯನ ಪರವಾಗಿ ಇಟ್ಟುಕೊಳ್ಳುವ ಅಭಿಲಾಷೆಯೆ ಇದಕ್ಕೆ ಕಾರಣವಾಗಿತ್ತು.

ಗೌಡರ ಮನೆತನವನ್ನು ಭಾಗಿಸಿ ಅಳಿಯನಿಗೆ ಸ್ವಾತಂತ್ರ್ಯಪ್ರಾಪ್ತಿಯನ್ನು ಮಾಡಿಕೊಡಲು ಅವರ ವತನದಾರೀ ಬುದ್ಧಿ ಸಂಚುಮಾಡತೊಡಗಿತು.

ವಿಠ್ಠಲನು ಈಗ ಅವರ ಕೈಗೊಂಬೆಯಾಗಿಬಿಟ್ಟಿದ್ದರಿಂದ ಅವರಿಗೆ ಇನ್ನಷ್ಟು ಅನುಕೂಲವಾಯಿತು.

ಗೌಡರ ಮನೆಯನ್ನು ಭೇದಿಸಲು ಹೊರಗಿನ ಎರಡು ವ್ಯಕ್ತಿಗಳು ಗೊತ್ತಿಲ್ಲದಂತೆ ಸಂಚುಮಾಡತೊಡಗಿದವು.

ವಿಠ್ಠಲನ ಮಾವನಾದ ಕೇಶವರಾಯನು ಒಬ್ಬ.

ಕಾಶೀಬಾಯಿಯ ಸೋದರಮಾವ ಸೋಮಪ್ಪ ಇನ್ನೊಬ್ಬ.

ಇಬ್ಬರಲ್ಲಿಯೂ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವ ತವಕವಿತ್ತು.

ಒಬ್ಬನು ಅಳಿಯನ ಶ್ರೀಮಂತಿಕೆಗಾಗಿ ಹಾರೈಸಿದರೆ ಇನ್ನೊಬ್ಬ ತನ್ನ ಸ್ವಾರ್ಥಕ್ಕಾಗಿ ಈ ಕೆಲಸವನ್ನು ಕೈಕೊಂಡಿದ್ದ.

ಕೇಶವರಾಯರಲ್ಲಿ ಮಗಳ ಯಶಸ್ಸಲ್ಲದೆ ಇನ್ನಾವ ಭಾವವೂ ಇರಲಿಲ್ಲ.

ಸೋಮಪ್ಪನಲ್ಲಿ ಮಾತ್ರ ಯಾವ ಭಾವವೂ ಇರಲಿಲ್ಲ. ಅವನಿಗೆ ತನ್ನ ಯಶಸ್ಸೇ ಮುಖ್ಯವಾಗಿತ್ತು.

ಸರಳಾ ತವರಿಗೆ ಹೋದಬಳಿಕ ಮನೆಯಲ್ಲಿ ಈ ಹಿರಿಯರಿಬ್ಬರಿಗೂ ಸ್ವಾತಂತ್ರ್ಯವೇ ಸಿಕ್ಕಂತಾಯಿತು. ಸರಳಾ ಚಿಕ್ಕಹುಡುಗಿಯಾದರೂ ನಿಷ್ಠುರ ಸ್ವಭಾವದವಳಾಗಿದ್ದರಿಂದ ಕಾಶೀಬಾಯಿ ಅವಳಿಗೆ ಬೆದರುತ್ತಿದ್ದಳು. ಕಾಂತಾಬಾಯಿ ಕೂಡ ಅವಳ ಯಶಸ್ಸಿಗಾಗಿ ಮತ್ಸರ ತಾಳಿದ್ದಳು.

ಅವಳು ಮನೆಯಲ್ಲಿದ್ದಾಗ ಇವರಿಬ್ಬರಲ್ಲಿ ಮೂಡಿದ ಸ್ನೇಹವು ಅವಳು ಮನೆಯನ್ನು ಬಿಟ್ಟಕೂಡಲೇ ಮಾಯವಾಗಿಬಿಟ್ಟಿತು.

ಇವರಲ್ಲಿ ಮತ್ತೆ ಮರ್ಮಭೇದಕವಾದ ಮಾತುಗಳ ಚಕಮಕಿಯಾಗಿ ಕಿಡಿಗಳುದರತೊಡಗಿದವು.

ಅವರಿಬ್ಬರೂ ಕೂಡ ಊಟ ಮಾಡುವದನ್ನೇ ಬಿಟ್ಟುಬಿಟ್ಟರು. ಭೀಮರಾಯನು ಮನೆಯಲ್ಲಿರುವದೇ ಕಡಿಮೆಯಾಗಿದ್ದರಿಂದ ಕಾಂತಾ ಬಾಯಿಯ ಸ್ಥಿತಿ ಯಾತಕ್ಕೂ ಬಾರದಂತೆ ಆಯಿತು. ಕಾಶೀಬಾಯಿಯ ಅಬ್ಬರ ಮಿಗಿಲಾಗತೊಡಗಿತು.

ಈಗ ಬಳವಂತಗೌಡನು ಕೂಡ ಹೆಂಡತಿಯು ಹೇಳಿದಂತೆ ಕೇಳ ತೊಡಗಿದನು.

ಸೋಮಪ್ಪನ ದರಬಾರು ಮತ್ತೆ ಪ್ರಾರಂಭವಾಗತೊಡಗಿತು. ಭೀಮ ರಾಯನ ನಿರ್ಲಕ್ಷ್ಯತನದ ಅವಕಾಶದ ಸದುಪಯೋಗವನ್ನು ಸೋಮಪ್ಪನು ಧೃಡವಾಗಿ ಮಾಡಿಕೊಳ್ಳಹತ್ತಿದನು.

ಕಾಂತಾಬಾಯಿ ಒಮ್ಮೆ ಎಲ್ಲವನ್ನೂ ಗಂಡನ ಮುಂದೆ ಹೇಳಿಬಿಡ ಬೇಕೆಂದು ಹಾತೊರೆದರೂ ಅವನ ಬರವೇ ದುರ್ಲಭವಾಗತೊಡಗಿತು. ಒಮ್ಮೊಮ್ಮೆ ಬಂದರೂ ಕೂಡ ಮಧ್ಯಾಹ್ನ ಬಂದವನು ಸಂಜೆಗೆ ಹೋಗಿ ಬಿಡುತ್ತಿದ್ದನು.

ಇದರಿಂದ ಕಾಂತಾಬಾಯಿಯ ಕಳವಳ ಹೆಚ್ಚಾಗತೊಡಗಿತು.

ವಿಠ್ಠಲನು ಈಗ ಹೆಂಡತಿಯೊಡನೆ ಮಾವನ ಮನೆಯಲ್ಲಿಯೇ ಇರುತ್ತಿದ್ದನು.

ಹೀಗಾಗಿ ಗೌಡರ ಮನೆಯಲ್ಲಿ ಏಕಸೂತ್ರತೆ ನಷ್ಟವಾಗಿ ಅದರ ಬದಲಾಗಿ ಸ್ವಾರ್ಥವು ಹರಿದಾಡತೊಡಗಿತು. ಆ ಮನೆಯಲ್ಲಿ ಯಾರ ಮಾತೂ ನಡೆಯುತ್ತಿರಲಿಲ್ಲ. ಎಲ್ಲರ ಮಾತೂ ಕಾಲಕ್ಕೆ ಸರಿಯಾಗಿ ಅಷ್ಟಷ್ಟು ಸಾಗುತ್ತಿತ್ತು.

ಇದರ ಉಪಯೋಗವನ್ನು ಕೈಕೆಳಗಿನ ಜನರು, ಆಳುಗಳು ಚೆನ್ನಾಗಿ ಮಾಡಿಕೊಳ್ಳಹತ್ತಿದರು.

ಗೌಡರ ಆಸ್ತಿಯನ್ನು ಕಬಳಿಸಲು, ಅವರ ಧನಧಾನ್ಯಗಳನ್ನು ಎಬ್ಬಿಸಲು ಎಲ್ಲರೂ ತಮ್ಮ ಯೋಗ್ಯತಾನುಸಾರವಾಗಿ ಪ್ರಯತ್ನಿಸತೊಡಗಿದರು.

ಭವ್ಯವಾದ ಗೌಡರ ಮನೆಯ ಭದ್ರವಾದ ಗೋಡೆಗಳಲ್ಲಿ ಅನೇಕ ಬಿಲಗಳು ಉಂಟಾದವು. ಈ ಬಿಲಗಳಲ್ಲಿ ಬೇರೆಬೇರೆ ಜಾತಿಯ ಇಲಿಗಳು ಮನೆ ಮಾಡಿಕೊಂಡು ಸಾಧಿಸಿದಾಗ ಬೇಕಾದ್ದನ್ನು ಕದ್ದು ತಿನ್ನತೊಡಗಿದವು.

ಆದರೂ ಗೌಡರಿಗೆ ತಮ್ಮ ಮನೆ ಅತ್ಯಂತ ಸುಭದ್ರವಾಗಿರುವದೆಂದೇ ಕಲ್ಪನೆಯಾಗಿತ್ತು. ಈ ಕಲ್ಪನೆಯನ್ನು ಅಲ್ಲಗಳೆಯುವ ಯಾವ ಘಟನೆಗಳೂ ಪ್ರತ್ಯಕ್ಷವಾಗಿ ನಡೆದಿರಲಿಲ್ಲವಾದುದರಿಂದ ನಿಜಸ್ಥಿತಿ ಗುಟ್ಟಾಗಿಯೇ ಇದ್ದಿತು.

ಎಲ್ಲರಿಗೂ ಮನೆಯ ಪರಿಸ್ಥಿತಿಯಲ್ಲಿ ಏನೋ ಕೊರತೆಯಾಗಿದೆ ಎಂದು ಎನ್ನಿಸುತ್ತಿದ್ದರೂ ಯಾರೂ ಆ ಬಗ್ಗೆ ಹೆಚ್ಚಿನ ಪ್ರಚ್ಛಾಪ್ರಚ್ಛೆ ಮಾಡುತ್ತಿರಲಿಲ್ಲ.

ಗೌಡರ ಆಸ್ತಿಗೆ ಯಾವ ಧಕ್ಕೆಯೂ ಆಗುವದಿಲ್ಲವೆಂಬುದೇ ಎಲ್ಲರ ಕಲ್ಪನೆಯಾಗಿತ್ತು.

ಮನೆಯ ಹೆಗ್ಗಣಗಳು ಕೇವಲ ಗೋಡೆಗಳಿಗೆ ಮಾತ್ರ ಸುತ್ತು ಪ್ರದಕ್ಷಿಣೆ ಹಾಕುತ್ತಿವೆಯೆಂದು ಇವರು ತಿಳಿದಿದ್ದರು.

ಅವು ಗೌಡರ ಮನೆತನದ ಗಚ್ಚಿನ ಗೋಡೆಗಳಲ್ಲಿ ತೂತು ಸರಿಯ ತೊಡಗಿವೆಯೆಂದು ಯಾರೂ ಭಾವಿಸಲಿಲ್ಲ.

ಬಳವಂತಗೌಡರಿಗೆ ಇದು ತಿಳಿಯುತ್ತಿರಲಿಲ್ಲ.

ಭೀಮರಾಯನಿಗೆ ಇದು ಬೇಕಾಗಿರಲಿಲ್ಲ.

ವಿಠ್ಠಲನಿಗೆ ಹೆಂಡತಿಯ ಹುಚ್ಚು ಹಿಡಿದಿತ್ತು.

ರಾಜಣ್ಣ ಸರಸ್ವತೀ ಭಕ್ತನಾಗಿ ಬಹು ದೂರವಿದ್ದ.

ಗೌಡರ ಮಕ್ಕಳು ಈ ಚರಿ ಭಿನ್ನಭಿನ್ನ ವಾತಾವರಣದಲ್ಲಿ ಬೇರೆಬೇರೆ ಗೋಪುರಗಳಲ್ಲಿಯೇ ವಾಸಿಸುತ್ತಿದ್ದರು.

ಕಾಂತಾಬಾಯಿಗೆ ವೇಳೆಯನ್ನು ಕಳೆಯುವದೇ ದುಸ್ತರವಾಗ ತೊಡಗಿತು.

ರತೀಬಾಯಿ ಇವಳೊಡನೆ ಮನಬಿಚ್ಚಿ ಮಾತಾಡುತ್ತಿರಲಿಲ್ಲ. ಒಂದೊಂದು ದಿನ ಮಾತಿಗೆ ಮಾತು ಬೆಳೆದು ಇಬ್ಬರಲ್ಲಿ ವೈಮನಸ್ಸು ಕಹಿಯಾಗುತ್ತಿತ್ತು.

ಅಂಥ ದಿನ ಕಾಶೀಬಾಯಿ ಗಂಡನಿಗೂ, ಸೋಮಪ್ಪನಿಗೂ ಊಟಕ್ಕೆ ಹಾಕಿ ಆಮೇಲೆ ತಾನು ಒಬ್ಬಳೇ ಊಟಮಾಡಿ ಕೈತೊಳೆದುಕೊಂಡು ಗಂಡನ ಕೋಣೆಯಲ್ಲಿ ಕುಳಿತು ಹರಟೆ ಹೊಡೆಯಲು ಹೋಗಿಬಿಡುತ್ತಿದ್ದಳು.

ಕಾಂತಾಬಾಯಿಯನ್ನು ಉಣ್ಣಲು ಕರೆಯುತ್ತಿರಲಿಲ್ಲ.

ಕಾಂತಾಬಾಯಿ ಒಬ್ಬಳೇ ಎದ್ದು ಕೈತೊಳೆದುಕೊಂಡು ತನ್ನ ಎಡೆಯಲ್ಲಿ ಅನ್ನವನ್ನು ನೀಡಿಕೊಂಡು ಊಟಮಾಡುತ್ತಿದ್ದಳು. ತನ್ನ ತಾಟೊಂದನ್ನೇ ತೊಳೆದುಕೊಂಡು ತಾನು ಉಂಡ ಸ್ಥಳವನ್ನಷ್ಟೇ ಗೋಮಯ

ದಿಂದ ಗೋಮ ಹಚ್ಚಿಕೊಳ್ಳುತ್ತಿದ್ದಳು. ಉಳಿದ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ.

ಸ್ವಸ್ಥವಾಗಿ ಹೋಗಿ ತನ್ನ ಕೋಣೆಯಲ್ಲಿ ಮಲಗಿಬಿಡುತ್ತಿದ್ದಳು.

ಕೆಲ ಸಮಯ ಕಳೆದಮೇಲೆ ಕಾಶೀಬಾಯಿ ಬಂದು ಅಡಿಗೆಯ ಮನೆಯ ಎಂಜಲ ಮುಸುರೆ ಹಾಗೆಯೇ ಇರುವದನ್ನು ಕಂಡು ಕೆರಳುತ್ತಿದ್ದಳು. ಈ ಕೆಲಸವನ್ನು ಕಾಂತಾಬಾಯಿ ಮಾಡಿ ಮುಗಿಸಬೇಕೆಂಬ ಅಪೇಕ್ಷೆಯೇ ಅವಳದಾಗಿರುತ್ತಿತ್ತು.

" ಈ ಮನೆಯಲ್ಲಿ ಯಾರಿಗೂ ಹೇಳುವವರು ಕೇಳುವವರು ಇಲ್ಲವಾಗಿದ್ದಾರೆ. ಕೂಳುತಿಂದು ಕೋಣೆಯಲ್ಲಿ ಬಿದ್ದುಕೊಂಡರೆ ಆಯಿತು. ಈ ಕೆಲಸ ಯಾರು ಮಾಡಬೇಕು ?

ಕಾಶೀಬಾಯಿ ಕಾಂತಾಬಾಯಿಯನ್ನು ಉದ್ದೇಶಿಸಿ ಮಾತಾಡಿದರೂ ಅವಳು ಆ ಮಾತುಗಳನ್ನು ಗೋಡೆಗೆ ಹೇಳುವಂತೆ ಸ್ವಗತಭಾಷಣ ಮಾಡುತ್ತಿದ್ದಳು.

" ಕಾರಭಾರ ಮಾಡಲಿಕ್ಕೆ ಬೇಕು. ಮನೆಯಲ್ಲಿ ಹಿರಿಯತನ ಬೇಕು. ಕೆಲಸಮಾಡುವದು ಬೇಡವೆಂದರೆ ಹೇಗೆ ನಡೆದೀತು. ನನ್ನ ಯಜಮಾನರೇನು ಊಟಮಾಡಿಲ್ಲ. ನಾನೇಕೆ ಎಂಜಲ ಬಳಿಯಬೇಕು. ಕೂಳುತಿಂದು ಕೋಣೆಯಲ್ಲಿ ಬಿದ್ದುಕೊಳ್ಳುವೆನೆಂದು ಅನ್ನಲಿಕ್ಕೆ ನಾನೇನು ಈ ಮನೆಯ ಗೂಳಿಯಲ್ಲ. ಬೇಕಾದರೆ ಕೆಲಸಮಾಡುತ್ತೇನೆ. ಸಾಕಾದರೆ ಬಿಡುತ್ತೇನೆ. ಗಂಡನ ಕೂಡ ಚಕ್ಕಂದಮಾಡುವವರು ಬೇಕಾದರೆ ಸುರಿದುಕೊಳ್ಳಲಿ ಈ ಸಡಗರವನ್ನು.

ಕಾಂತಾಬಾಯಿ ತನ್ನ ಕೋಣೆಯಲ್ಲಿ ಸ್ವಗತಭಾಷಣ ಮಾಡಿದರೂ ಅದು ಕಾಶೀಬಾಯಿಗೆ ಉದ್ದೇಶಿತವಾಗಿರುತ್ತಿತ್ತು.

" ಈ ಮನೆಯಲ್ಲಿ ತಿಂದು ಕೂಡ್ರುವ ಜನರೇ ಬಹಳವಾಗಿದ್ದಾರೆ. ಕಾಶೀಬಾಯಿಯ ಮಾತು.

" ಕುಳಿತು ತಿನ್ನುವವರ ಸಂಖ್ಯೆಯೂ ಇದೆ ಈ ಮನೆಯಲ್ಲಿ. ಕಾಂತಾಬಾಯಿಯ ಮಾತು.

ಇಂತಹ ಮಾತುಗಳು ಬರಬರುತ್ತ ವಾಡಿಕೆಯ ಮಾತುಗಳಾಗಿ ಬಿಟ್ಟದ್ದರಿಂದ ಇಬ್ಬರಿಗೂ ಅದು ರೂಢಿಯಾಯಿತು.

ಗೌಡರ ಮನೆಯ ಹೃದಯದಲ್ಲಿ ಬಿರುಕು ಬಿಡತೊಡಗಿತು. ಅದು

ಸಧ್ಯ ಹೆಣ್ಣುಮಕ್ಕಳಲ್ಲಿ ಮಾತ್ರ ತಲೆದೋರಿದ್ದರೂ ಅದು ಗಂಡಸರಿಗೂ ವ್ಯಾಪಕವಾಗುವ ಚಿಹ್ನೆಗಳು ಕಾಣತೊಡಗಿದವು.

ಅಣ್ಣತಮ್ಮಂದಿರೇನೋ ಅನ್ಯೋನ್ಯವಾಗಿದ್ದರು. ಆದರೆ ಜೀವನದ ಬಗೆಗಿರುವ ನಿರ್ಲಕ್ಷತನ ಅವರ ಸೋದರಿಕೆಯಲ್ಲಿ ಕಹಿರಸವನ್ನು ಸೂಸ ಹತ್ತುವ ಲಕ್ಷಣಗಳು ಅವರಿಗೆ ಅರಿಯದಂತೆ ಕಾಣತೊಡಗಿದವು.

ತೋರಿಕೆಗೆ ಅವರೆಲ್ಲ ಒಂದಾಗಿದ್ದರು.

ಸೋದರಿಕೆಯಲ್ಲಿ ಅವರೆಲ್ಲ ಅಚಲರಾಗಿದ್ದರು.

ಆದರೆ ಸ್ವಾರ್ಥ ಮುಖ ಚಾಚತೊಡಗಿತು.

ಈ ಅಗ್ನಿಗೆ ಹೆಣ್ಣುಮಕ್ಕಳು ಗಾಳಿಹಾಕತೊಡಗಿದರು. ತುಪ್ಪದ ಹವಿಸ್ಸನ್ನು ಕೊಡತೊಡಗಿದರು.

ಅಂದು ಸಂಭ್ರಮದ ದಿನ.

ಬಳವಂತಗೌಡರು ಕೇಶವರಾಯರಿಂದ ಬಂದ ಶುಭವಾರ್ತೆಯನ್ನು ದೊಡ್ಡ ದನಿಯಿಂದ ಎಲ್ಲರಿಗೂ ಜಾಹೀರು ಮಾಡಿದರು. ಆ ವಾರ್ತೆಯನ್ನು ತಂದ ಹಳಬನಿಗೆ ಐದು ರೂಪಾಯಿಗಳ ಭಕ್ಷಿಸು ಕೊಟ್ಟು ಸಿಹಿ ಊಟವನ್ನು ಉಂಡುಹೋಗಲು ತಿಳಿಸಿದರು.

ವಿಠ್ಠಲನಿಗೆ ಗಂಡುಸಂತಾನವಾದ ವಾರ್ತೆಯನ್ನು ಆ ಹಳಬರವನು ತಂದಿದ್ದನು.

ಈ ಸುದ್ದಿಯನ್ನು ಕೇಳಿ ಭೀಮರಾಯನು ಸಂಭ್ರಮದಿಂದ ಕುಣಿದಾಡಿದನು.

ಅದೇ ದಿನ ಊರಿಗೆಲ್ಲ ಸಕ್ಕರೆಯನ್ನು ಹಂಚಲಾಯಿತು, ಎಲ್ಲ ಗುಡಿಗಳಿಗೆ ಎಣ್ಣೆಯನ್ನು ಕಳಿಸಿ ನಂದಾದೀಪವನ್ನು ಉರಿಸಲು ಹೇಳಲಾಯಿತು.

ಭಾವೂರಾಯನಿಗೆ ಮೊಮ್ಮಗ ಹುಟ್ಟಿದ ಸಂಭ್ರಮದಲ್ಲಿ ಈ ಗೌಡರ ಮನೆತನದ ಅಭಿಮಾನಿಗಳು ನಲಿದಾಡಿದರು.

ಆದರೆ ಈ ನಲಿವು, ಈ ಸಂತೋಷ ಮಾತ್ರ ಅಡಿಗೆಯ ಮನೆಯಲ್ಲಿರಲಿಲ್ಲ.

ತಮ್ಮಕಿಂತ ಆಮೇಲೆ ಮನೆತುಂಬಿದ ಸರಳಾ ತಾಯಿಯಾಗಿ ವಂಶದ ಕೀರ್ತಿಯನ್ನು ಮುಂದೆ ತಂದುದು ಇವರಿಗೆ ಮತ್ಸರದ ಮಾತಾಗಿಬಿಟ್ಟಿತು. ಆದರೂ ಜನ ನಿಮಿತ್ಯಕ್ಕಾಗಿ ಎಲ್ಲರೊಡನೆ ತಾವೂ ಸಂತೋಷದ ನಟನೆಯನ್ನು ಮಾಡಿದರು.

ಹೃದಯದಲ್ಲಿ ಹಾಲಾಹಲ ಮೂಡಿತ್ತು.

ತುಟಿಯಲ್ಲಿ ಮಾತ್ರ ಮೃದುಹಾಸ್ಯ ತುಳುಕಿತು.

ಸಂಪ್ರದಾಯವನ್ನು ಬಿಡಲಾರದೆ ಭೀಮರಾಯನು ಹೆಂಡತಿಯನ್ನೂ ಅತ್ತಿಗೆಯನ್ನೂ ಕೇಶವರಾಯರ ಹಳ್ಳಿಗೆ ಮಗುವನ್ನು ತೊಟ್ಟಿಲಲ್ಲಿ ಹಾಕುವ ದಿನ ಕಳುಹಿಸಿಕೊಟ್ಟನು. ಮಗುವಿಗಾಗಿ ಚಿನ್ನದ ಚೈನು, ನಾಲ್ಕು ಎಳೆಗಳ ಚಿನ್ನದ ಉಡದಾರ, ಗುಂಡು, ಬಿಂದಲಿ, ರೇಶಿಮೆಯ ಕುಲಾವಿ, ಬೇಕಾದಷ್ಟು ವಸ್ತ್ರಗಳು ಇವುಗಳನ್ನೆಲ್ಲ ಪೂರೈಸಲಾಯಿತು.

ಈ ಕೆಲಸವನ್ನು ಬಳವಂತಗೌಡರು ಸಂಭ್ರಮದಿಂದಲೇ ಮಾಡಿದರು. ಭೀಮರಾಯನು ಹಿಗ್ಗಿನಿಂದಲೇ ಮಾಡಿದನು.

ಅಣ್ಣಂದಿರ ಈ ನಿರ್ವ್ಯಾಜ್ಯಪ್ರೇಮವನ್ನು ನೋಡಿ ವಿಠ್ಠಲನ ಹೃದಯ ತುಂಬಿತು.

ಅವನ ಎದೆಯಲ್ಲಿ ಈ ಮೊದಲು ಮೂಡಿದ ಕಹಿಯಾದ ವಾತಾವರಣವು ಈ ಸಭ್ಯದ ಮಟ್ಟಿಗಾದರೂ ಮಾಯವಾಗಿ ಆ ಸ್ಥಳದಲ್ಲಿ ಸವಿಜಲದ ಸಂಪ್ರೋಕ್ಷಣೆಯಾಯಿತು.

ಹಿರಿಯ ಅಕ್ಕಂದಿರನ್ನು ಸರಳಾ ಹೃತ್ಪೂರ್ವಕವಾಗಿ ಸ್ವಾಗತಿಸಿದಳು. ಗೆಲವು ಅವಳದಾಗಿತ್ತು.

ಕಾಶೀಬಾಯಿ ಕೂಸನ್ನು ಕೈಗೆ ತೆಗೆದುಕೊಂಡು ಲಟಲಟ ಮುದ್ದಿಸಿ ಕಾಂತಾಬಾಯಿಗೆ ಹೇಳಿದಳು.

"ಥೇಟ ವಿಠ್ಠಲ ಮೈದುನರದೇ ಮುಖ ಕೊರೆದು ಹಚ್ಚಿದ ಹಾಗಾಗಿದೆ ಅಲ್ಲವೇನೋ ಕಳ್ಳಾ" ಎಂದಳು.

ಸರಳಾ ಸಂತೋಷದಿಂದ ಅಂದಳು.

"ಆದರೆ ನಿಮ್ಮ ಕಳ್ಳನ ಬಣ್ಣ ಮಾತ್ರ ಗೌಡರ ಮನೆತನದ್ದಲ್ಲ. ಹೌದಲ್ಲ ಕಾಂತಕ್ಕ ?

"'ಬಣ್ಣಗೆಟ್ಟ ಮನೆತನದಲ್ಲಿ ಬಣ್ಣವೆಲ್ಲಿಂದ ಬರಬೇಕು'? ಎನ್ನಬೇಕೆಂದು ಆಲೋಚಿಸಿದ ಕಾಂತಾಬಾಯಿ ಆ ಮಾತನ್ನು ಕೇಳಿ.

"ಬಣ್ಣ ಮಾತ್ರ ನಿನ್ನದೇ ನೋಡು ಸರಳಾ ?

ಎಂದು ಮೃದುವಾಗಿ ನಕ್ಕಳು.

ಗೌಡರ ಮನೆತನದ ಹೊಸ ಪೀಳಿಗೆಯಲ್ಲಿ ಹೊಸಕಣ್ಣು ತೆರೆಯಿತು. ಇದು ಅತ್ಯಂತ ಶುಭಸೂಚಕವೆಂದು ಬಳವಂತಗೌಡನು ತಿಳಿದನು.

ಆ ದಿನ ಹೆಂಡತಿಗೆ ಏಕಾಂತದಲ್ಲಿ ಅದೇ ಮಾತನ್ನು ಅವನು ಹೇಳಿದನು.

" ಗೌಡರ ನಂದಾದೀಪವೆಂದಿಗೂ ಆರುವದಿಲ್ಲ ನೋಡು.

" ಆದರೆ............

ಕಾಶೀಬಾಯಿಯ ಕಣ್ಣಲ್ಲಿ ನೀರೂರಿತ್ತು.

" ಆದರೆ ಏನು ?

" ಗೌಡರ ಬಾಳ ಹಣತಿಯ ಬತ್ತಿಗೆ ನಾವೂ ಎಣ್ಣೆಯನ್ನು ಪೂರೈಸಿ ದೀಪ ಬೆಳಗುವಂತೆ ಮಾಡಬೇಕಲ್ಲವೆ ?

ಈ ಮಾತನ್ನು ಕೇಳಿ ಬಳವಂತಗೌಡನು ಗಂಭೀರನಾದನು. ಕ್ಷಣ ಹೊತ್ತಿನ ಮೇಲೆ,

" ದೇವರು ಕಣ್ಣು ತೆರೆದರೆ ಯಾವುದು ಅಸಾಧ್ಯ ?

ಎಂದು ಹೇಳಿ ನಸುವೆ ನಕ್ಕನು.

ಆ ನಗೆಯಲ್ಲಿ ಆಶೆ ತುಂಬಿತ್ತು. ಅದರ ಕುಡಿಯನ್ನು ಕಾಶೀಬಾಯಿ ಗ್ರಹಿಸಿದಳು.

ಸುಖದ ಬಯಕೆ ಅವಳದಾಯಿತು.

# ೧೧

ಐದು ವರುಷಗಳ ನಂತರ,

ಗೌಡರ ಮನೆ ಗೋಕುಲವಾಯಿತು.

ಈಗ ವಿಠ್ಠಲನು ಎರಡು ಮಕ್ಕಳ ತಂದೆ, ಹಿರಿಯಗೌಡರು ಗಂಡು ಸಂತಾನವನ್ನು ಪಡೆದಿದ್ದಾರೆ. ಭೀಮರಾಯನ ಮಡದಿ ಗಂಡು – ಹೆಣ್ಣು ಸಂತಾನಗಳನ್ನು ಪಡೆದು ಸಂಸಾರಲೋಲುಪಳಾಗಿದ್ದಾಳೆ.

ಭೀಮರಾಯನ ಹಳ್ಳಿಯ ವಸತಿ ಈಗಲೂ ಇದೆ. ಆದರೆ ಮಕ್ಕಳ ಮೋಹ ಹೆಚ್ಚಾಗಿ ನೀಲಿಯ ಭೆಟ್ಟಿಗಾಗಿ ಅಪರೂಪವಾಗಿ ಆ ಹಳ್ಳಿಗೆ ಹೋಗುತ್ತಾನೆ.

ಆ ಹಳ್ಳಿಯಲ್ಲಿ ಅವಳಿಗಾಗಿ ಒಂದು ಗಚ್ಚಿನ ಮನೆಯನ್ನೂ, ಒಂದು ನದಿ ಮುಳುಗುವ ಹೊಲವನ್ನು ದಯಪಾಲಿಸಿದ್ದಾನೆ ಭೀಮರಾಯ. ಇದು ಎಷ್ಟೋ ದಿನ ಗುಟ್ಟಾಗಿಯೇ ಇತ್ತು. ಆದರೆ ಸೋಮಪ್ಪನು ಇದರ ಪತ್ತೆ ಹಚ್ಚಿ ಅದನ್ನು ಬಳವಂತಗೌಡನಿಗೆ ವರದಿಮಾಡಲು ಅವನು ಮೊದಲು ನಂಬಲೇ ಇಲ್ಲ. ಮನೆಯ ಆಸ್ತಿಯನ್ನು ಹೀಗೆ ಸೂಳೆಯರ ಪಾಲುಮಾಡುವ ಔದ್ಧತ್ಯ ತಮ್ಮನಲ್ಲಿಲ್ಲವೆಂದೇ ಅವನು ಬಗೆದನು. ಆದರೂ ಒಂದು ಮಾತು ಕೇಳಿ ನೋಡೋಣವೆಂದು ಆ ದಿನ ಭೀಮರಾಯನನ್ನು ಕರೆಯಿಸಿ ಕೇಳಿಯೇ ಬಿಟ್ಟನು.

“ ನಾನು ಕೇಳಿದ ಸಂಗತಿ ನಿಜವಲ್ಲವೆಂದು ನಾನು ನಂಬುತ್ತೇನೆ ಭೀಮಣ್ಣ !

“ ಯಾವ ಸಂಗತಿ ?

“ ಮಾಲಹಳ್ಳಿಯಲ್ಲಿ ನೀನು ನೀಲಿಗಾಗಿ ಒಂದು ಗಚ್ಚಿನ ಮನೆಯನ್ನು ಕಟ್ಟಿಸಿಕೊಟ್ಟಿರುವದಾಗಿಯೂ, ನಮ್ಮ ನದೀಬೂಡು ಜಮೀನೊಂದನ್ನು ಅವಳ ಉಪಭೋಗಕ್ಕಾಗಿ ದಯಪಾಲಿಸಿರುವಿಯೆಂದೂ ನಮಗೆ ಸುದ್ದಿ ಬಂದಿದೆ. ಈ ಸುದ್ದಿ ಸುಳ್ಳಾಗಿರಬೇಕು.

ಭೀಮರಾಯನು ಮುಖವನ್ನು ಮೇಲೆತ್ತಿ ಅಣ್ಣನನ್ನೊಮ್ಮೆ ಸಂಪೂರ್ಣ ವಾಗಿ ನೋಡಿ ಹೇಳಿದನು,

“ ನೀನು ಕೇಳಿದ ಸುದ್ದಿ ನಿಜವಾಗಿದೆ ಅಣ್ಣ !

" ಅಂದರೆ ? "

" ನಾನು ನೀಲಿಗಾಗಿ ಮನೆ ಕಟ್ಟಿಸಿಕೊಟ್ಟಿದ್ದೂ ನಿಜ; ಅವಳಿಗಾಗಿ ಹೊಲ ಕೊಟ್ಟಿದ್ದೂ ನಿಜ.

" ಇದು ನಮ್ಮ ಮನೆತನಕ್ಕೆ ಅವಮರ್ಯಾದೆಯಾಗಿದೆ ತಮ್ಮ! ನೀನು ಹೀಗೆ ಮಾಡಬಾರದಾಗಿತ್ತು. ಹೀಗೆ ಮಾಡುವ ಮೊದಲು ನನ್ನ ಕಿವಿಯಮೇಲೆ ಒಂದು ಶಬ್ದವನ್ನಾದರೂ ಇಡಬೇಕಾಗಿತ್ತು.

" ನನಗೆ ಇದು ಅವಶ್ಯವೆಂದು ತೋರಲಿಲ್ಲ. ಅಲ್ಲದೆ ನಾನು ಇದನ್ನು ನಮ್ಮ ಮನೆತನದ ಮರ್ಯಾದೆಯನ್ನು ಕಾಪಾಡಲೆಂದೇ ಮಾಡಿದ್ದೇನೆ.

" ಅರ್ಥವಾಗಲಿಲ್ಲ.

" ಬಹಳ ದಿನಗಳ ಹಿಂದೆ ವಿಠ್ಠಲನ ಬಗ್ಗೆ ನೀನೇ ಹೇಳಿದ ಮಾತನ್ನು ಇಷ್ಟರಲ್ಲಿಯೇ ಮರೆತಿರಲಾರಿಯೆಂದು ಭಾವಿಸುತ್ತೇನೆ. ಪರಿಸ್ಥಿತಿ ಆಗಲೇ ಹದಮೀರಿಹೋಗಿತ್ತು. ನೀಲಿಗಾಗಿ ಈ ಮನೆಯಲ್ಲಿ ಒಂದು ರಾದ್ಧಾಂತವೇ ಏಳಬಹುದಾಗಿತ್ತು. ಅದನ್ನು ತಪ್ಪಿಸಲು ನಾನು ಅವಳನ್ನು ಹಳ್ಳಿಯಲ್ಲಿಡ ಬೇಕಾಯಿತು.

" ಇದಂತೂ ಲಜ್ಜಾಸ್ಪದ ವಿಷಯ. ತಮ್ಮನ ಯಜಮಾನಿಕೆಯನ್ನು ಜಾರಿಸಿ ಅಣ್ಣನಾದ ನೀನು ಅವನ ಹೆಣ್ಣನ್ನು ಹಾರಿಸಿಕೊಂಡು ಈಗ ಇಂತಹ ಮಾತನ್ನು ಹೇಳಬಹುದೆ ?

" ಹಾಗೆ ಮಾಡದೆ ಗತ್ಯಂತರವಿರಲಿಲ್ಲ ಅಣ್ಣ! ನನ್ನ ಪ್ರಶ್ನೆಗಿಂತ ಮದುವೆಯಾಗದ ವಿಠ್ಠಲನ ಪ್ರಶ್ನೆ ಆಗ ನನಗೆ ಮಹತ್ವವಾಗಿತ್ತು. ನೀಲಿ ಅವನ ಹೆಣ್ಣೆಂದು ನೀವು ಹೇಳುವದೇ ಸೋಜಿಗವಾಗಿದೆ. ಅವಳನ್ನು ತಂದು ಮನೆಯಲ್ಲಿ ಇಟ್ಟವರು ಯಾರು ? ವಿಠ್ಠಲನು ಹದ್ದಿನ ಕಣ್ಣಿನಿಂದ ಅವಳನ್ನು ಕಂಡದ್ದೇ ದೊಡ್ಡ ಅಪರಾಧ.

" ಗೌಡರ ಮನೆಯಲ್ಲಿ ಇಂಥ ಕೆಲಸಗಳೂ ನಡೆಯುತ್ತಿರುವದು ದುರ್ದೈವದ ಸಂಗತಿ. ಆದರೆ ಆ ಹೊಲವನ್ನು ಕೊಡುವ ಅಧಿಕಾರವು ನಿನ್ನ ದಾಗಿರಲಿಲ್ಲ. ಅಲ್ಲದೆ ಅವಳಿಗಾಗಿ ಕಟ್ಟಿಸಿದ ಹೊಸಮನೆಗೆ ಬಂದ ವೆಚ್ಚವನ್ನು ಯಾವ ದುಡ್ಡಿನಿಂದ ಬಳಸಿಕೊಂಡೆಯೆಂಬುದನ್ನೂ ನನಗೆ ಕೇಳಬೇಕಾಗಿದೆ. ಈ ಅವ್ಯಾಪಾರೇಷು ವ್ಯಾಪಾರವನ್ನು ನಾನು ಸಹಿಸುವದು ಸಾಧ್ಯವಿಲ್ಲ.

ಬಳವಂತಗೌಡ ಎಡೆಯಾಡಹತ್ತಿದನು.

ಇಡಿಯ ಜೀವಮಾನದಲ್ಲಿ ಅವನು ಹೀಗೆ ಮಾತಾಡಿದ್ದು ಇದೇ ಮೊದಲನೆಯ ಸಲವಾಗಿತ್ತು. ಹೀಗೆ ಅನ್ನಿಸಿಕೊಂಡದ್ದೂ ಭೀಮರಾಯನಿಗೆ ಮೊದಲನೆಯ ಸಲವಾಗಿತ್ತು.

ಅವನು ಗಂಭೀರನಾಗಿ ಹೇಳಿದನು.

" ಪ್ರಸಂಗ ಬಂದಾಗ ಇದರ ಉತ್ತರ ಕೊಡುತ್ತೇನೆ.

" ಬಹಳ ಪಂಡಿತನಂತೆ ಮಾತಾಡಬೇಡ. ನನಗೆ ನಿನ್ನ ಉತ್ತರ ಮುಖ್ಯವಾಗಿಲ್ಲ, ಕಳೆದುಹೋದ ಮರ್ಯಾದೆಯನ್ನು ನೀನು ಹೇಗೆ ತುಂಬಿ ಕೊಡುತ್ತೀ ಹೇಳು. ಗೌಡರ ಮಗನು ಹಳ್ಳಿಯಲ್ಲಿ ಸೂಳೆಯೊಡನೆ ಸಂಸಾರ ಹೂಡಿದ್ದಾನೆಂಬುದು ಈ ಮನೆತನಕ್ಕೆ ಯಾವ ಗೌರವ ತಂದೀತು ಹೇಳು.

" ಈ ಸಂಪ್ರದಾಯ ಈ ಮನೆತನಕ್ಕೆ ಹೊಸದಲ್ಲ. ಗೊತ್ತಿದ್ದ ಮಾತನ್ನು ಸುಮ್ಮನೇ ಕೇಳಬೇಡ.

ಇಂತಹ ಬಿಗಿಯಾದ ವಾತಾವರಣದಲ್ಲಿಯೂ ಭೀಮರಾಯ ಮುಗುಳು ನಗೆಯಿಂದ ಹೇಳಿದ.

" ಹಿರಿಯರು ಹೀಗೆ ಮಾಡುತ್ತಿದ್ದರೆಂದು ಕಿರಿಯರೂ ಮಾಡಬೇಕೆ ? ಅಂದಿನ ಕಾಲ ಇಂದಿಲ್ಲ. ಆ ಕಾಲಕ್ಕೆ ಅದು ಕೂಡ ಗೌರವದ ಮಾತಾಗಿತ್ತು. ಎಂತಲೇ ಉಪಪತ್ನಿಗೆ ಆಗ 'ದೊರೆಸಾನಿ'ಯೆಂದು ನಾಮಕರಣಮಾಡಿದ್ದರು. ದೊರೆಸಾನಿಗಳನ್ನು ಆಳದ ಜಮೀನುದಾರರೇ ಆಗ ವಿರಳವಾಗಿದ್ದರು. ಆದರೆ ಈಗ ಇದು ಗೌಣವೆಂದು ತಿಳಿಯಲ್ಪಟ್ಟಿದೆ. ಇಂತಹ ಸಮಯದಲ್ಲಿ ನೀನು ಹಿರಿಯರ ಹೆಜ್ಜೆಯಲ್ಲಿ ಕಾಲಿಡಬಾರದಾಗಿತ್ತು ಈಗ ಆದದ್ದು ಆಗಿಹೋಯಿತು. ಮುಂದೆಯಾದರೂ ಎಚ್ಚರದಿಂದ ಇರಬೇಕು.

" ಅಣ್ಣ !

" ನೀನು ನನ್ನ ಛಲನೆಗಾಗಿ ಹೀಗೆ ಮಾತಾಡಿದ್ದು ನನಗೆ ಅತ್ಯಂತ ಸೋಜಿಗವಾಗಿದೆ. ಯಾರೋ ನಿನ್ನ ಕಿವಿಯನ್ನು ಬಲವಾಗಿ ಕಚ್ಚಿರಬೇಕು. ಕಚ್ಚುವ ನಾಯಿ ಕಚ್ಚುತ್ತಲೇ ಇರಲಿ. ನಾನೇನು ಅದಕ್ಕೆ ಬೆದರುವದಿಲ್ಲ. ನೀನು ನನ್ನ ವೆಚ್ಚದ ವಿವರವನ್ನು ಕೇಳಿದಿಯಲ್ಲವೆ ? ಅದನ್ನು ನಾನು ನಿನಗೆ ಪೂರೈಸುವ ಮೊದಲು ಡೊಂಬರ ನಾಗಿಯ ಕೊರಳಲ್ಲಿ ಮೆರೆಯುತ್ತಿರುವ ಬಂಗಾರದ ಸರವು ಯಾರದೆಂಬುದನ್ನು ನೀನು ಹೇಳುವಿಯಾ ? ಅವಳ ಚೆಳ ತುಂಬು, ಬಂಗಾರದ ಕೇದಿಗೆ, ಬೆಂಡೋಲೆಗಳು ನಮ್ಮವೇ ಎಂದು ನನಗೆ ಗುರುತು ಸಿಕ್ಕಿದೆ. ಅವನ್ನು ಅವಳಿಗೆ ಕೊಟ್ಟವರು ಯಾರು ? ಮೂರುನೂರು

ರೂಪಾಯಿಗಳ ಎರಡು ಎಮ್ಮೆಗಳನ್ನು ಅವಳಿಗೆ ಕೊಂಡುಕೊಟ್ಟು ಅವುಗಳ ಮೇಲ್ವಿಚಾರಣೆಗಾಗಿ ನಮ್ಮ ಜೀತದ ಆಳನ್ನೇ ಏಕೆ ನಿಯಮಿಸಬೇಕಾಗಿತ್ತು?

ಈ ಸಂಗತಿಗಳು ಮಾತ್ರ ಗೌಡರ ಮನೆತನಕ್ಕೆ ಗೌರವ ಅಲ್ಲವೆ ?

" ಹಿರಿಯ ಗೌಡನಾದ ನಾನು ಬೇಕಾದ್ದು ಮಾಡುತ್ತೇನೆ. ಅದನ್ನು ಕೇಳುವ ಹಕ್ಕು ನಿನ್ನದಲ್ಲ.

" ಡೊಂಬರ ಮನೆಯಲ್ಲಿ ಹಿರಿಯಗೌಡರು ಲಾಗ ಹಾಕುವದು ಹಿರಿಯ ತನದ ಲಕ್ಷಣವೇ ಇರಬೇಕು.

ಬಳವಂತಗೌಡರು ಈಗ ಸಿಟ್ಟಿಗೇಳಲಿಲ್ಲ. ಭೀಮರಾಯನ ಬೆನ್ನು ಚಪ್ಪರಿಸಿ ನುಡಿದರು.

" ಮನೆತನದ ರಕ್ತವೇ ಇಂತಹದಿರಬೇಕು. ಈ ಮಾತು ಗುಟ್ಟಾಗಿರಲಿ.

" ಇದು ಹೇಗೆ ಸಾಧ್ಯವಾದೀತು ಅಣ್ಣ ! ಇದರಲ್ಲಿ ಭಯವಾದರೂ ಏತಕ್ಕೆ ಇರಬೇಕು ?

" ವಿಠ್ಠಲನೂ ನಮ್ಮನ್ನು ಅನುಸರಿಸಬಾರದಷ್ಟೆ.

" ಈ ವಿಷಯದಲ್ಲಿ ತಮ್ಮನು ಅಣ್ಣಂದಿರನ್ನು ಮೀರಿಸಿದ್ದಾನೆ.

ಈ ಮಾತನ್ನು ಕೇಳಿ ಬಳವಂತಗೌಡರು ಖೊಳ್ಳೆಂದು ನಕ್ಕರು.

ಭೀಮರಾಯನೂ ನಕ್ಕನು.

ಅಣ್ಣತಮ್ಮಂದಿರಲ್ಲಿ ಮತ್ತೆ ರಾಜಿಯಾಗಿ ಮೊದಲಿನ ವಿಶ್ವಾಸ ತಲೆ ದೋರಿತು.

ಒಂದೇ ಚಂಚಿಯಿಂದ ಇಬ್ಬರೂ ಎಲೆ ಅಡಿಕೆ ಹಾಕಿಕೊಂಡು ಹೊಗೆ ಸೊಪ್ಪನ್ನು ಸೇವಿಸಿದರು.

ಕವಳರಸದ ತುಂಬು ಗಲ್ಲದ ಮೇಲೆ ಕೈ ಇಟ್ಟುಕೊಂಡ ಭೀಮ ರಾಯನು ಅಣ್ಣನ ಮಾತುಗಳನ್ನು ಯೋಚಿಸುತ್ತಿರುವಂತೆ ಗಂಭೀರನಾದನು.

ಕೋಣೆಯಲ್ಲಿ ನುಗ್ಗಿದ ಕಂದಮ್ಮಗಳು ಈ ಗಂಭೀರ ವಾತಾವರಣ ವನ್ನು ಹಾರಿಸಿದವು.

ಎರಡೂ ಕಿಡಕಿಗಳಿಂದ ದೀರ್ಘ ಪಿಚಕಾರಿಗಳ ಘೋಷಣವಾಗಿ ಆ ಅಣ್ಣತಮ್ಮಂದಿರು ಬಂದ ಮಕ್ಕಳನ್ನು ಬಿಗಿದಪ್ಪಿಕೊಂಡರು.

ವಿಠ್ಠಲನೀಗ ಸ್ವತಂತ್ರನಂತೆಯೇ ವರ್ತಿಸುತ್ತಿದ್ದನು. ಮನೆಯಲ್ಲಿ ಅವನದೇ ಒಂದು ಬೇರೆ ಏರ್ಪಾಟಾಗಿದ್ದಿತು. ಅವನ ಕೋಣೆಯಲ್ಲಿ ಇನ್ನಿತರರಿಗೆ ಪ್ರವೇಶವಿರಲಿಲ್ಲ. ಅಲ್ಲಿ ಹೆಂಡತಿ, ಮಕ್ಕಳು ಮಾತ್ರ

ಇರುತ್ತಿದ್ದರು. ತನಗೆ ಬೇಕುಬೇಕಾದ ಅನುಕೂಲತೆಗಳನ್ನು ಅವನು ಆ ಕೋಣೆಯಲ್ಲಿ ಕಲ್ಪಿಸಿಕೊಂಡಿದ್ದನು.

ಎರಡೂ ಮಕ್ಕಳಿಗೆ ಮಚ್ಛರದಾನಿ ಹಾಕಿದ 'ಕಿರ್ಲೋಸ್ಕರ' ಕಂಪನಿಯ ಪಾಯಿಪಿನ ಕಾಟುಗಳನ್ನು ಹಾಕಿಸಿದ್ದನು. ಹೆಂಡತಿಯ ಪಲ್ಲಂಗವೂ ಭಾರೀ ಕಿಮ್ಮತ್ತಿನದಾಗಿತ್ತು. ಅಲ್ಲಿ ಬೇರೆ ಆಟದ ವಸ್ತುಗಳನ್ನು ಇಟ್ಟು ಸದಾಕಾಲ ಅವನು ಹೆಂಡತಿ ಮಕ್ಕಳೊಡನೆ ಸಲ್ಲಾಪಮಾಡುತ್ತಿದ್ದನು.

ಅವನ ಖರ್ಚು ದಿನದಿನಕ್ಕೂ ಬೆಳೆಯುತ್ತಿದ್ದಿತು. ಕೂಸನ್ನು ಆಡಿಸಲು ಬೇರೆ ಆಳುಗಳನ್ನೇ ಇಟ್ಟುಕೊಂಡ ಅವನ ವೆಚ್ಚದ ಕಲ್ಪನೆಯನ್ನು ಎಲ್ಲರೂ ಮಾಡುವಹಾಗಾಯಿತು.

ಇದು ಉಳಿದವರಲ್ಲಿ ಮತ್ಸರವನ್ನು ತರಹತ್ತಿತು. ಉಳಿದ ಮಕ್ಕಳು ಬೇಕುಬೇಕಾದಹಾಗೆ ಬೆಳೆಯುತ್ತಿದ್ದವು. ವಿಠ್ಠಲನ ಮಕ್ಕಳು ಈ ಹೇಸಿ ಮಕ್ಕಳ ಕಡೆಗೆ ಹೋಗುತ್ತಿರಲಿಲ್ಲ. ಇದಕ್ಕೆ ಸರಳಾ ಕಾರಣಳಾಗಿದ್ದಳು.

ತನ್ನ ಮಕ್ಕಳನ್ನುಳಿದು ಬೇರೆ ಮಕ್ಕಳು ಹೇಸಿ ಗುಂಡಣ್ಣಗಳೆಂದೇ ಅವಳ ಅಭಿಪ್ರಾಯವಾಗಿತ್ತು.

ಇದನ್ನು ನೋಡಿ ಇವಳ ಅಕ್ಕಂದಿರು ಉರಿದು ಉರಿದು ಬೀಳುತ್ತಿದ್ದರು.

ಈಗ ಮನೆಯಲ್ಲಿ ಅಡಿಗಾಗಿ ಒಬ್ಬ ಹೆಣ್ಣುಮಗಳು, ನೀರಿಗಾಗಿ ಆಳುಗಳು, ಮೇಲುಕೆಲಸಕ್ಕಾಗಿ ಊಳಿಗದವರು ಹೀಗೆ ಮನೆತುಂಬ ಕೆಲಸದವರೇ ಆದರು.

ಎಲ್ಲರೂ ಕೂಸಿನ ತಾಯಂದಿರು.

ಅಲ್ಲದೆ ಮಾಡುವವರ ಪಾಲಿಗೇ ಹೆಚ್ಚು ಕೆಲಸ ಬೀಳುವದೆಂದು ತಿಳಿದ ಅವರೆಲ್ಲ ಕೆಲಸಮಾಡುವದನ್ನೇ ಬಿಟ್ಟುಬಿಟ್ಟರು. ಕೇವಲ ಅದನ್ನು ಇದನ್ನು ಹೇಳುವದು, ಮಕ್ಕಳನ್ನು ಮುಂದೆ ಕೂಡಿಸಿಕೊಂಡು ಆಟವಾಡುವದು, ಒಬ್ಬೊಬ್ಬರು ಇನ್ನೊಬ್ಬರ ಬಗ್ಗೆ ಮತ್ಸರ ತೋರುವದು, ನಿಂದೆಯಾಡುವದು ಇವೇ ಮುಖ್ಯ ಕೆಲಸಗಳಾಗಿಬಿಟ್ಟವು.

ಗೌಡರ ಮನೆಯಲ್ಲಿ ಈಗ ಧರ್ಮಸಾಲೆಯ ವಾತಾವರಣವು ಬರತೊಡಗಿತು. ಅಲ್ಲಿ ಯಾರೂ ಕಾರಭಾರ ಮಾಡುತ್ತಿರಲಿಲ್ಲ; ಆದರೆ ಎಲ್ಲರೂ ಕಾರಭಾರ ಮಾಡುತ್ತಿದ್ದರು.

ಸ್ವಾರ್ಥ ಈಗ ತಾಂಡವವಾಡಹತ್ತಿತು. ಪ್ರತಿಯೊಬ್ಬರು ತಮ್ಮ

ತಮ್ಮ ಮಕ್ಕಳ ಭವಿಷ್ಯಜೀವನವನ್ನು ಕುರಿತು ವಿಚಾರಮಾಡಹತ್ತಿದರು.

ಅವರೆಲ್ಲ ಈಗ ಒಟ್ಟಾಗಿದ್ದರೂ ಬೇರೆಯಾದಂತೆಯೇ ಇದ್ದರು.

ಒಟ್ಟಾಗಿ ಅಡಿಗೆಯಾಗುತ್ತಿದ್ದಿತು. ಹೊಲದಿಂದ ಕಾಳುಕಡಿಗಳು ಒಟ್ಟಾಗಿಯೇ ಬರುತ್ತಿದ್ದವು.

ಮನೆಯನ್ನು ಎಲ್ಲರೂ ಕೂಡಿ ಒಟ್ಟಾಗಿಯೇ ಹಾಳುಮಾಡ ತೊಡಗಿದರು.

ಈ ಮನೆ ಈಗ ಎಲ್ಲರ ಮನೆಯಾಗಿರಲಿಲ್ಲ. ಅನೇಕ ವಿಶಿಷ್ಟ ಸಂಬಂಧಗಳ ಕಲಸುಮೇಲೋಗರವಾಗಿ ಮಾರ್ಪಟ್ಟಿತ್ತು. ಆದರೂ ಒಟ್ಟಾಗಿದ್ದು ಗೌರವ ಕಾಯ್ದುಕೊಳ್ಳುವ ಹಟವನ್ನೇ ಅಣ್ಣತಮ್ಮಂದಿರು ತೊಟ್ಟಿದ್ದರು.

ಕೂಡಿ ಕಚ್ಚಾಡುವದೇ ಇಲ್ಲಿ ಪ್ರಿಯವಾದಂತೆ ತೋರುತ್ತಿತ್ತು.

ಭಿನ್ನತೆ ಒಡೆದು ಕಾಣತೊಡಗಿತು. ತಾಯಂದಿರಲ್ಲಿ ತಾರತಮ್ಯ ಭಾವ ಸ್ಪಷ್ಟವಾಗತೊಡಗಿತು. ಅವರವರ ಮಕ್ಕಳನ್ನು ಅವರು ಪ್ರೀತಿಸುತ್ತಿದ್ದರೇ ವಿನಾ ಬೇರೆ ಮಕ್ಕಳನ್ನು ಅಸಹ್ಯವಾಗಿಯೇ ನೋಡುತ್ತಿದ್ದರು.

ಈ ವಿಷದ ವಾತಾವರಣ ಮನೆತುಂಬ ಹಬ್ಬತೊಡಗಿತು.

ಹಿರಿಯ ಗೌಡರು ಕಣ್ಣುಮುಚ್ಚುತ್ತಿದ್ದರು. ಡೊಂಬರ ನಾಗಿ ಅವರನ್ನು ಕುಣಿಸುತ್ತಿದ್ದಳು.

ಭೀಮರಾಯನ ಅಬ್ಬರ ಅಡಗಿತ್ತು. ಯಾಕಂದರೆ ಈಗ ಅವನಲ್ಲಿಯೂ ಸ್ವಾರ್ಥ ತುಂಬಹತ್ತಿತ್ತು.

ವಿಠ್ಠಲನು ಯಾರ ಉಸಾಬರಿಯನ್ನೂ ಮಾಡದೆ ತಾನಾಯಿತು ತನ್ನ ಹೆಂಡತಿ ಮಕ್ಕಳಾಯಿತು ಎನ್ನುವ ಪ್ರತ್ಯೇಕ ಮನೋಭಾವವನ್ನು ತಾಳಿದ್ದನು.

ರಾಜಣ್ಣನಿಗೆ ಈಗ ವಿದ್ಯೆಯ ಹುಚ್ಚು ಬಲವಾಗಿದ್ದರಿಂದ ಅವನು ಹಿಂದುಸ್ತಾನದಲ್ಲಿಯ ಬೇರೆಬೇರೆ ವಿದ್ಯಾಸಂಸ್ಥೆಗಳನ್ನೂ, ಆಶ್ರಮಗಳನ್ನೂ, ಗುರುಕುಲಗಳನ್ನೂ ಸಂದರ್ಶಿಸುವ ಕಾರ್ಯಕ್ರಮವನ್ನಿಟ್ಟುಕೊಂಡು ಬೇಕಾದ ಹಣದ ಬೇಡಿಕೆಯನ್ನು ಕಳಿಸುತ್ತಿದ್ದನು.

ಹೀಗಾಗಿ ಗೌಡರ ಮನೆ ತಾಳತಪ್ಪಿ ಕುಣಿಯತೊಡಗಿತು. ಅವ್ಯವಸ್ಥೆಯ ಆಗರವಾಗಿಬಿಟ್ಟಿತು.

ಮನೆ ಗೋಕುಲವಾಗಿದ್ದರೂ ಸುದಾಮನ ಮನೆಯಂತೆ ಭಣಭಣ ಸುರಿಯತೊಡಗಿತು. ಈ ಮನೆಗಾಗಿ ಯಾರು ಕೆಲಸಮಾಡಬೇಕು?

ತಿನ್ನುವದೊಂದೇ ಎಲ್ಲರ ಕೆಲಸವಾಗಿತ್ತು. ಇದು ಎಲ್ಲಿಂದ ಬರುತ್ತ ದೆಂದು ಯಾರೂ ವಿಚಾರಿಸುತ್ತಿರಲಿಲ್ಲ.

ತಮ್ಮತಮ್ಮ ಮಕ್ಕಳ ಭದ್ರತೆಗಾಗಿ ಎಲ್ಲರೂ ಒಳಗಂಟನ್ನು ಮಾಡ ತೊಡಗಿದರು.

ಕಾಶೀಬಾಯಿ ಕಾಳುಕಡಿಗಳನ್ನು ಗುಟ್ಟಾಗಿ ಮಾರಿ ಹಣ ಸಂಚಯ ಮಾಡತೊಡಗಿದಳು.

ಕಾಂತಾಬಾಯಿ ವಾರಕ್ಕೆ ಒಮ್ಮೆಯಾದರೂ ಗಂಡನ ಬಕ್ಕಣವನ್ನು ಝಡತಿ ಮಾಡಿಬಿಡುತ್ತಿದ್ದಳು.

ಸ್ವಾರ್ಥದ ಹೆಣ್ಣು ಹಣದ ಗೆಜ್ಜೆಯನ್ನು ಕಟ್ಟಿಕೊಂಡು ಅಟ್ಟಹಾಸ ದಿಂದ ಕುಣಿಯತೊಡಗಿದಳು.

ಅವಳ ನೃತ್ಯವಿಲಾಸಕ್ಕೆ ಗೌಡರ ಮನೆಯ ಮುಂಡಿಗೆಯಂತಹ ತೊಲೆಗಳು ಕೂಡ ತತ್ತರಿಸತೊಡಗಿದವು.

ತುಂಬಿದ ಮನೆಯಲ್ಲಿ ಎಲ್ಲವೂ ತುಂಬಿತ್ತು.

ಹೆಚ್ಚಾಗಿ ಸ್ವಾರ್ಥವೇ ತುಂಬಿತ್ತು.

ಮಕ್ಕಳಿಗಾಗಿ ಮಮತೆಯೂ ತುಂಬಿತ್ತು.

ಅದೇ ಸ್ವಾರ್ಥಮೂಲವಾಗಿತ್ತು.

ಆ ದಿನ ಭೀಮರಾಯನು ಹಳ್ಳಿಯಿಂದ ಮನೆಗೆ ಬಂದಾಗ ಮಧ್ಯಾಹ್ನದ ಆರು ತಾಸಾಗಿತ್ತು. ಬಿಸಿಲು ಬಲವಾಗಿ ಕಾದಿದ್ದರಿಂದ ಅವನ ಮೈಯೆಲ್ಲ ಬೆವೆತುಹೋಗಿತ್ತು. ಅದಾವುದೋ ಕ್ರುದ್ರಭಾವನೆಯಿಂದ ತಲ್ಲಣಗೊಂಡಂತೆ ಅವನ ಮುಖ ತುಸು ರೌದ್ರವೇ ಆಗಿತ್ತು.

ಪಡಸಾಲೆಗೆ ಬಂದವನೇ ಅವನು ವಿಠ್ಠಲನನ್ನು ಕೂಗಿ ಕರೆದು ತನ್ನ ಕೋಣೆಯಲ್ಲಿ ಭುಸುಗುಡುತ್ತಲೇ ಹೋದನು.

ಅಣ್ಣನ ಕೂಗನ್ನು ಕೇಳಿ ವಿಠ್ಠಲನು ನೇರವಾಗಿ ಅವನ ಕೋಣೆಗೆ ಹೋದನು.

" ನಿನ್ನ ಕಾರಭಾರವನ್ನು ಕೇಳಿ ಕೇಳಿ ಸಾಕಾಯಿತು. ನಿನ್ನಿಂದ ಗೌಡರ ಮನೆತನಕ್ಕೆ ಉಳಿಗಾಲವೇ ಇಲ್ಲದಂತಾಗಿದೆ.

ಭೀಮರಾಯನು ಹುಬ್ಬುಗಳನ್ನು ಗಂಟಿಕ್ಕಿ ಥಡಥಡ ನುಡಿದು ಬೆವರು ವರಸಿಕೊಳ್ಳಹತ್ತಿದನು.

" ನಾನು ಯಾವ ಕಾರಭಾರವನ್ನೂ ಮಾಡುತ್ತಿರುವದಿಲ್ಲ ಭೀಮಣ್ಣ!

ಇದು ನಿನಗೆ ಗೊತ್ತಿದ್ದರೂ ಏಕೆ ಕೇಳುತ್ತೀ ಎಂಬುದು ನನಗೆ ಅರ್ಥವಾಗಲೊಲ್ಲದು.

"ನೀನು ಮೇಲುಮಟ್ಟ ರೈತರಿಂದ ಮುಂಗಡವಾಗಿ ಹಣ ವಸೂಲ ಮಾಡಿಕೊಂಡು ಬಂದದ್ದು ನಿಜವೋ ಅಲ್ಲವೋ ಹೇಳು ?

"ನೀನು ಇಷ್ಟೇಕೆ ಗದ್ದರಿಸಿ ಈ ಮಾತನ್ನು ಕೇಳತೊಡಗಿರುವಿಯೋ ನನಗೆ ತಿಳಿಯದು. ನಾನು ಆ ರೈತರಿಂದ ಹಣ ತಂದಿದ್ದೇನೆ.

"ಯಾರನ್ನು ಕೇಳಿ ವಸೂಲು ಮಾಡಿದಿ ?

"ಈ ಮನೆತನಕ್ಕೆ ನಾನು ಏನೂ ಅಲ್ಲವೆ ? ನನ್ನ ಖರ್ಚಿಗಾಗಿ ನಾನು ಹಣ ಪಡೆಯಬೇಡವೆ ? ಮಾತುಮಾತಿಗೂ ನಿಮ್ಮನ್ನು ಕೇಳಲು ನಾನೇನು ಸಾಲೆಗೆ ಹೋಗುವ ಅಳದಿಕ್ಕಿ ಹುಡುಗನೇನು ? ಬಟ್ಟುಚೀಪುವ ವಯಸ್ಸೇನು ನನ್ನದು ?

"ನಿನ್ನ ವಯಸ್ಸು ದೊಡ್ಡದಾದರೂ ನಿನ್ನಲ್ಲಿ ವ್ಯವಹಾರವೇ ಬರಲಿಲ್ಲ. ಹಣ ಒಂದು ಮುಖವಾಗಿ ವಸೂಲ ಆಗುತ್ತಿದ್ದರೆ ಅದರ ಲೆಕ್ಕಪತ್ರವನ್ನಾದರು ಇಡಬಹುದು. ಒಂದು ಹಳ್ಳಿಯ ಲಾವಣಿಯನ್ನು ನೀನು ವಸೂಲಮಾಡು, ಇನ್ನೊಂದು ಹಳ್ಳಿಯ ಹಣವನ್ನು ಸೋಮಪ್ಪನು ವಸೂಲಮಾಡಲಿ. ಅಂದರೆ ಕೆಲವು ದಿನಗಳಲ್ಲಿಯೇ 'ಯಾರಿಗೆ ಯಾರೋ ಪುರಂಧರ ವಿಠಲಾ' ಆಗುತ್ತದೆ ನಮ್ಮ ಮನೆ. ನಿನಗೆ ಸಿಕ್ಕಸಿಕ್ಕಹಾಗೆ ಖರ್ಚುಮಾಡಲು ಯಾರು ಹೇಳಿದರು?

"ಖರ್ಚುಮಾಡಲು ನನಗೆ ಉಪದೇಶವೇ ಬೇಡ. ನನ್ನ ಹೆಂಡಿರು, ಮಕ್ಕಳಿಗಾಗಿ ನನಗೆ ಇನ್ನೊಬ್ಬರ ಮುಖ ನೋಡುವದು ಸಾಧ್ಯವಿಲ್ಲ.

"ನಿನಗೆ ಖರ್ಚುಮಾಡಲು ಬೇಡವೆನ್ನುವದಿಲ್ಲವೊ ? ಆದರೆ ಹಣ ಬೇಕಾದಾಗ ಅಣ್ಣನನ್ನು ಕೇಳಿ ಪಡೆದುಕೊಳ್ಳಬಹುದು.

"ಎರಡು ಮಕ್ಕಳ ತಂದೆಯಾಗಿ ನಾನು ಅಣ್ಣನ ಮುಂದೆ ಕೈಯೊಡ್ಡಿ ನಿಲ್ಲಬೇಕೆ ?

"ಮೂರ್ಖನಂತೆ ಮಾತಾಡಬೇಡ. ನೀನು ಹತ್ತು ಮಕ್ಕಳ ತಂದೆ ಯಾದರೂ ಅಣ್ಣನಿಗೆ ತಮ್ಮನೇ ಸರಿ.

"ನಾನು ಹಣಕ್ಕಾಗಿ ಬಾಯಿ ತೆಗೆಯುವದಿಲ್ಲ.

"ಹಾಗಾದರೆ ಈ ಮನೆತನದ ಮೇಲ್ವಿಚಾರಣೆಯನ್ನು ಮಾಡಲು ನನ್ನಿಂದ ಸಾಧ್ಯವಿಲ್ಲ. ನಮ್ಮ ಮನೆ ಮೊಗಲಾಯಿ ಆಗಿದೆ. ಅಣ್ಣ ತಮ್ಮಂದಿರೆಲ್ಲ ನವಾಬರಾಗಿದ್ದಾರೆ. ಹೀಗಾದರೆ ಹೇಗೆ ನಡೆದೀತು ?

“ ನಾನೇನು ನವಾಬನಂತೆ ಇರುತ್ತಿರುವದಿಲ್ಲ.

“ ನನಗೆಲ್ಲಾ ಗೊತ್ತಾಗಿದೆ ಸುಮ್ಮನಿರು.

“ ನನಗೂ ಗೊತ್ತಾಗಿದೆ.

“ ಏನು ಗೊತ್ತಾಗಿದೆ ನಿನ್ನ ತಲೆ.

“ ನವಾಬೀ ಪದ್ಧತಿಯನ್ನು ಯಾರು ಇಟ್ಟುಕೊಂಡಿದ್ದಾರೆಂಬುದನ್ನು ಈ ಹಳ್ಳಿಯೇ ಬಲ್ಲದು.

“ ಎದುರು ವಾದಿಸಬೇಡ ಹೋಗು.

“ ಜನಾನಖಾನೆಯನ್ನು ಪೋಷಿಸುವವರು ಇದನ್ನು ವಿಚಾರಿಸಬೇಕು.”

ಎನ್ನುತ್ತ ವಿಠ್ಠಲನು ಅವಸರದ ಹೆಜ್ಜೆಗಳನ್ನು ಹಾಕುತ್ತ ತನ್ನ ಕೋಣೆಯ ಕಡೆಗೆ ನಡೆಯತೊಡಗಿದನು.

ಅಣ್ಣತಮ್ಮಂದಿರ ಬಿರುಸು ಮಾತುಗಳನ್ನು ಹೆಂಗಸರು ಕುಳಿತಲ್ಲಿಯೇ ಕೇಳತೊಡಗಿದ್ದರು. ಮಾತು ಅಷ್ಟಕ್ಕೆ ಮೊಟಕವಾದದ್ದು ಅವರಲ್ಲಿ ನಿರಾಶೆಯನ್ನೇ ತಂದಿರಬೇಕು.

ಅವರೆಲ್ಲ ಚಟಕ್ಕನೆ ಎದ್ದು ತಮ್ಮತಮ್ಮ ಕೋಣೆಗಳನ್ನು ಸೇರಿದರು.

ಆ ದಿನ ಸಂಜೆ ಭೀಮರಾಯನು ಬಳವಂತ ಅಣ್ಣನೊಡನೆ ಈ ಸಂಬಂಧವಾಗಿ ದೀರ್ಘವಿಚಾರ ಮಾಡಿದನು. ವಿಠ್ಠಲನನ್ನು ಸಿಟ್ಟಿನಲ್ಲಿಯೇ ಬಿಡುವದು ಇಬ್ಬರಿಗೂ ಸಮ್ಮತವಾಗದ್ದರಿಂದ ಅವನನ್ನು ಕರೆಯಕಳಿಸಿದರು.

ವಿಠ್ಠಲನು ಬಂದು ಅಪರಾಧಿಯಂತೆ ನಿಂತುಕೊಂಡನು.

ಭೀಮರಾಯನು ಅವನ ಕಡೆ ನೋಡುತ್ತ ಮುಖದಲ್ಲಿ ಮುಗುಳು ನಗೆಯನ್ನು ತೋರುತ್ತ

“ ನಿನ್ನ ಸಿಟ್ಟು ಇನ್ನೂ ಇಳಿದಿದೆಯೋ ಇಲ್ಲವೋ ? ಅಲ್ಲೇಕೆ ನಿಂತೆ. ಇಲ್ಲಿ ಹತ್ತಿರ ಬಂದು ಕುಳಿತುಕೋ ಹುಚ್ಚನ ಹಾಗೆ ಮಾಡಬೇಡ ಅನ್ನಲಿಕ್ಕೆ ನಾನಾದರೂ ಏನು ಅಂದಿದ್ದೇನೆ ಹೇಳು.

“ ನೀನು ಏನೂ ಅನ್ನಲಿಲ್ಲ ಮಾರಾಯಾ ! ಕಪಾಳಗೆಡ್ಡಿಗೆ ಒಂದು ಕೊಡುವದೊಂದು ಬಾಕಿ ಉಳಿದಿತ್ತು. ಈಗ ಬಾಳಣ್ಣನ ಮುಂದೆ ಅದೂ ನಡೆಯಲಿ.

ವಿಠ್ಠಲ ಕ್ರುದ್ಧನಾಗಿಯೇ ಹೇಳಿದ.

“ ಇಲ್ಲಿ ಕೇಳು ವಿಠ್ಠಲ ! ” ಬಾಳಣ್ಣ ನಡುವೆ ಬಾಯಿಹಾಕಿ ಹೇಳಿದ.

“ ಭೀಮಣ್ಣನು ಇದನ್ನೆಲ್ಲ ಯಾಕೆ ಅನ್ನಬೇಕಾಯಿತು. ಇದನ್ನು ವಿಚಾರಿಸು. ಸಧ್ಯ ನಮ್ಮ ಪರಿಸ್ಥಿತಿ ಮೊದಲಿನಹಾಗಿಲ್ಲ. ಬರುವದು ಚೆನ್ನಾಗಿ ಬರುವದಿಲ್ಲ. ಮನೆಯ ವೆಚ್ಚ ಮಾತ್ರ ಏರಿಕೆಯ ಸ್ಥಿತಿಯಲ್ಲಿಯೇ ಇದೆ. ಇಂತಹ ಪ್ರಸಂಗದಲ್ಲಿ ಬರುವದೆಂದು ತಿಳಿದ ಹಣ ಬರದೇಹೋದಾಗ ಸ್ವಾಭಾವಿಕವಾಗಿ ಯಾರಿಗಾದರೂ ಸಿಟ್ಟುಬರುತ್ತದೆ.

“ ಆ ಹಣ ನನಗೆ ಬಂದಿದೆಯಲ್ಲ.

“ ಇದು ನೀತಿಯೂ ಅಲ್ಲ. ಇದನ್ನು ನಡೆಯಗೊಡುವದೂ ಸಾಧ್ಯವಿಲ್ಲ. ಅಣ್ಣತಮ್ಮಂದಿರಾದ ನಾವು ಒಂದೇ ಸೂತ್ರದ ಮಣಿಗಳಾಗಿ ಏಕಸೂತ್ರತೆಯಲ್ಲಿ ಬಾಳಿದರೆ ಮಾತ್ರ ನಮ್ಮ ಬಾಳುವಿಗೆ ಒಂದು ಬೆಲೆ ಇದೆ. ಭೀಮಣ್ಣನಿಗೂ ಬೇಸರ ಬಂದಿದೆ. ಈ ಹಣದ ವ್ಯವಹಾರವನ್ನೆಲ್ಲ ನೀನೇ ನೋಡಿಕೋ. ನಾಳೆಯಿಂದಲೇ ಈ ಕೆಲಸವನ್ನು ಪ್ರಾರಂಭಿಸು. ಒಪ್ಪಿಗೆಯೆ ?

“ ಇದು ನನಗೆ ಸಾಧ್ಯವಿಲ್ಲ.

“ ಇಂದಿಲ್ಲ ನಾಳೆ ಇದು ನಿನ್ನ ಕೊರಳಿಗೆ ಬೀಳತಕ್ಕುದೇ ವಿಠ್ಠಲ. ಭೀಮರಾಯ ಗಂಭೀರನಾಗಿ ಹೇಳಿದ.

“ ಸಧ್ಯಕ್ಕಂತೂ ನಾನು ಇದನ್ನು ಮಾಡುವದಿಲ್ಲ.

“ ಆದರೆ ಕೆಲಸಮಾಡದೇ ನಿನಗೆ ಹಣಬೇಕು ?

“ ಜಮೀನುದಾರರು ಕೆಲಸಮಾಡುವ ಕಾರಣವಿಲ್ಲ. ಹಿರಿಯರು ಗಳಿಸಿಟ್ಟ ಆಸ್ತಿ ಸಾಕಷ್ಟು ಇದೆ.

“ ಆ ಆಸ್ತಿಯನ್ನು ಉಳಿಸಿಕೊಳ್ಳುವ ಕೆಲಸವನ್ನಾದರೂ ಮಾಡ ಬೇಡವೆ ?

“ ಆ ಕೆಲಸವನ್ನು ನಾನೇ ಮಾಡಬೇಕೆಂಬ ನಿಯಮವಿಲ್ಲ.

“ ಹಾಗಾದರೆ ನೀನು ಇನ್ನುಮೇಲೆ ಮುಂಗಡವಾಗಿ ಯಾವ ರೈತ ರಿಂದಲೂ ಹಣ ಪಡೆದುಕೊಳ್ಳಬೇಡ.

“ ಹೆಂಡಿರುಮಕ್ಕಳ ಮುಂದೆ ನಿಂತು ನಾನು ತಂತೀ ಬಾರಿಸಬೇಕೇನು?

“ ನಾನು ಹಾಗೆ ಹೇಳಲಿಲ್ಲ ತಮ್ಮ ! ನಿನಗೆಷ್ಟುಬೇಕು ಅಷ್ಟನ್ನು ಈ ಖಜಾನೆಯಿಂದ ತೆಗೆದುಕೊ.

“ ನಾನು ಪೋಟಿಗೆಯ ಆಸಾಮಿಯೇನು ?

“ ಹಿರಿಯರ ಮಾತನ್ನು ಮೀರುವದು ಧರ್ಮವಲ್ಲ. ನಾವು ಹೇಳು ವದೆಲ್ಲ ಮನೆತನದ ಒಳಿತಿಗಾಗಿಯೇ ಇದೆ.

"ನನಗೆ ಪ್ರತಿ ತಿಂಗಳ ಏನಿಲ್ಲೆಂದರೂ ನನ್ನ ಮೇಲುಖರ್ಚಿಗಾಗಿ ಮೂರುನೂರು ರೂಪಾಯಿಗಳು ಬೇಕು.

"ಅಷ್ಟನ್ನು ಪ್ರತಿ ತಿಂಗಳು ಬಂದು ತೆಗೆದುಕೊಂಡು ಹೋಗು. ಈ ಖಜಾನೆ ನಿನ್ನದೇ ಆಗಿದೆ. ಈ ಹಣ ಯಾರದು ಹೇಳು ? ಈ ಮನೆತನದ ಆಸ್ತಿ ನಮ್ಮದೇ ಅಲ್ಲವೆ ? ನಾವು ಏಕೊಂತಿಯಾಗಿ ಬಾಳಬೇಕು.

ಜಮೀನುದಾರರ ಗುಟ್ಟು ಅವರ ಏಕಸೂತ್ರತೆಯಲ್ಲಿದೆ. ನಾವು ಒಡೆದೆವೋ ಸಾಯುತ್ತೇವೆ ; ಒಗ್ಗಟ್ಟಾಗಿ ಬಾಳಿದೆವೋ ಬದುಕುತ್ತೇವೆ. ಈ ಸೂತ್ರವು ನಮ್ಮ ದಾರಿದೀಪವಾಗಬೇಕು.

ಭೀಮಣ್ಣ ನಿಧಾನವಾಗಿ ಈ ಮಾತುಗಳನ್ನು ಹೇಳಿದ.

ವಿಠ್ಠಲನಿಗೆ ತನ್ನ ನಡತೆಗಾಗಿ ಪಶ್ಚಾತ್ತಾಪವಾಯಿತು.

"ನನ್ನನ್ನು ಕ್ಷಮಿಸು ಭೀಮಣ್ಣ !

ಎಂದು ವಿಠ್ಠಲ ಅಣ್ಣನ ಹತ್ತಿರ ಹೋದ.

"ಹುಚ್ಚಪ್ಪ !

ಎಂದು ಭೀಮರಾಯ ಖಜಾನೆಯನ್ನು ತೆರೆದು ಅವನ ಕೈಯಲ್ಲಿ ಹತ್ತು ರೂಪಾಯಿಗಳ ಮೂವತ್ತು ನೋಟುಗಳನ್ನಿಟ್ಟ.

ವಿಠ್ಠಲನಿಗೆ ಅತ್ಯಂತ ತೃಪ್ತಿಯಾಯಿತು. ಅಣ್ಣನೆಂದರೆ ಭೀಮಣ್ಣನೇ ಎನ್ನುವಂತಾಯಿತು ಅವನಿಗೆ.

# ೧೨

ವಿಠ್ಠಲನು ಅತ್ಯಂತ ಉತ್ಸಾಹದಿಂದಲೇ ಕೋಣೆಗೆ ಹೋದಾಗ ಸರಳಾ ಅದೇ ಮಗುವನ್ನು ಮಲಗಿಸಿ ಮೈಮುರಿದುಕೊಳ್ಳುತ್ತಿದ್ದಳು. ಹಿರಿಯ ಭಾವನವರು ಪತಿಯನ್ನು ಕರೆಯಕಳಿಸಿದುದರಲ್ಲಿ ಏನೋ ವಿಶೇಷ ವಿದೆ ಎಂದು ತಿಳಿದುಕೊಂಡ ಅವಳಿಗೆ ವಿಠ್ಠಲನ ಮುಖವನ್ನು ನೋಡಿದ ಕೂಡಲೇ ಸಮಸ್ಯೆಯೇ ತಲೆದೋರಿತು. ಅವಳ ಅಪೇಕ್ಷೆಯಂತೆ ಆ ಮುಖದಲ್ಲಿ ರೌದ್ರತೆ ಇರಲಿಲ್ಲ. ಬದಲಾಗಿ ಅಲ್ಲಿ ಉತ್ಸಾಹ ತುಂಬಿ ತುಳುಕುತ್ತಿತ್ತು.

“ ಏನು ವಿಶೇಷ ?

ಆತುರದಿಂದಲೇ ಕೇಳಿದಳು ಸರಳಾ.

“ ಪ್ರತಿತಿಂಗಳು ಮೂರುನೂರು ರೂಪಾಯಿಗಳು ”

ಎನ್ನುತ್ತ ವಿಠ್ಠಲನು ನೋಟಿನ ಮಡಿಕೆಗಳನ್ನು ಹೆಂಡತಿಯ ಕೈಗೆ ಕೊಟ್ಟನು.

“ ಇದರ ಅರ್ಥವೇನು ?

ವಿಠ್ಠಲನು ಹೆಂಡತಿಯ ಮುಂದೆ ಕೋಣೆಯಲ್ಲಿ ನಡೆದ ಸಮಗ್ರ ವೃತ್ತಾಂತದ ವರದಿಯನ್ನು ಒಪ್ಪಿಸಿದನು. ಹೆಂಡತಿಯಿಂದ ಮೆಚ್ಚುಗೆ ಪಡೆಯುವ ಆತುರ ಅವನದಾಗಿತ್ತು.

“ ನಿಮಗೆ ಬುದ್ಧಿ ಇಲ್ಲವೆಂಬ ಮಾತಿನ ಪ್ರದರ್ಶನವನ್ನು ಮತ್ತೆ ಮಾಡಿಕೊಟ್ಟಿರಿ. ಈ ಹಣವನ್ನು ನೀವೇಕೆ ಸ್ವೀಕರಿಸಿದಿರಿ ?

ಸರಳಾ ಕಟುವಾಗಿ ನುಡಿದಳು.

“ ಹಣವನ್ನು ಸ್ವೀಕರಿಸುವದು ಬುದ್ಧಿಗೇಡಿತನವೇ ಸರಳಾ ? ನಿನ್ನ ದೊಂಬು ವಿಚಿತ್ರಮಾತು

“ ಬುದ್ಧಿ ಇದ್ದವರು ಅಲ್ಪಸಂತುಷ್ಟರಾಗುವದಿಲ್ಲ.

“ ಕೇವಲ ಮೇಲುಖರ್ಚಿಗಾಗಿ ಮೂರುನೂರು ರೂಪಾಯಿಗಳನ್ನು ಪಡೆಯುವದು ಅಲ್ಪ ಹಣವೆ ?

“ ಇದರೊಳಗಿನ ಗುಟ್ಟನ್ನು ನೀವು ಅರಿಯಲಿಲ್ಲ. ನಿಮ್ಮ ಬಾಯಿಗಿಷ್ಟು ಬೆಣ್ಣೆ ಸವರಿ ಮನೆಯ ವ್ಯವಹಾರದಿಂದ ನಿಮ್ಮನ್ನು ದೂರವಿಡುವದೇ ಇದರ ಉದ್ದೇಶವಾಗಿದೆ.

" ಹಾಗೇನಿಲ್ಲ. ನನಗೆಯೇ ಮನೆತನದ ವ್ಯವಹಾರವನ್ನು ಒಪ್ಪಿಸಿ ಕೊಡಲು ಅಣ್ಣ ಸಿದ್ಧನೇ ಇದ್ದನು.

"ಹೀಗೆನ್ನುತ್ತಲೇ ನಿಮಗೆ ಪೋಟಗೇ ಹಣವನ್ನು ಗೊತ್ತುಮಾಡಿದನು. ಇದು ಗತ್ತುಗಾರಿಕೆಯಾಗಿದೆ.

" ಅಣ್ಣತಮ್ಮಂದಿರಲ್ಲಿ ಗತ್ತುಗಾರಿಕೆ ಎಂದರೇನು ?

" ನಾಳೆ ಮಕ್ಕಳ ಕೈಯಲ್ಲಿ ಪರಟಿಬಂದಾಗ ಇದರ ಅರ್ಥ ನಿಮಗೆ ಗೊತ್ತಾದೀತು. ವಿದ್ಯೆಯನ್ನು ಕಲಿಯಲು ರಾಜಣ್ಣನವರನ್ನು ಉಬ್ಬಿಸಿ ಅವರನ್ನು ದೂರವಿಟ್ಟದ್ದು ಇದನ್ನೇ ಸೂಚಿಸುತ್ತದೆ. ಅವರಿಗೆ ಮನೆತನದ ಸ್ಥಿತಿ ಗೊತ್ತಾಗದಂತೆ ಮಾಡಿ ಅಜ್ಞಾನದ ಸ್ಥಿತಿಯಲ್ಲಿಟ್ಟು ಅವರದೆಲ್ಲವನ್ನೂ ಕಬಳಿಸುವದು ಗತ್ತುಗಾರಿಕೆಯಲ್ಲವೆ ? ಈಗ ನಿಮ್ಮ ಅವಸ್ಥೆಯೂ ಅದೇ ಆಯಿತು. ಇಷ್ಟು ಕೂಡ ನಿಮಗೆ ತಿಳಿಯಬಾರದೆ ?

" ನನಗೆ ನನ್ನ ಅಣ್ಣಂದಿರಲ್ಲಿ ವಿಶ್ವಾಸವಿದೆ.

" ಸಾಕು ಬಿಡಿರಿ. ಈ ವಿಶ್ವಾಸವೇ ನಮ್ಮನ್ನು ಘಾತಿಸುತ್ತದೆ.

" ನನ್ನ ಅಣ್ಣಂದಿರು ವಿಶ್ವಾಸಘಾತುಕರಲ್ಲ ಸರಳಾ !

ಕೂದಲ ಎಳೆಯಿಂದ ಕುತ್ತಿಗೆ ಕೊಯ್ಯುವ ಜನರಿಗೆ ಯಾವ ಹೆಸರು ಮತ್ತೆ ?

" ಇಂಥ ಹೇಸಿ ಕೆಲಸವು ಈ ಮನೆತನದಲ್ಲಿ ಎಂದಿಗೂ ಸಾಧ್ಯವಿಲ್ಲ. ನೀನು ಸುಮ್ಮನೆ ತಪ್ಪಾಗಿ ತಿಳಿದುಕೊಳ್ಳಹತ್ತಿರುವಿ. ನಾವೆಲ್ಲ ಒಂದು ಸರಳಾ ! ಒಂದಾಗಿ ಬಾಳುವದು ನಮಗೆ ಶ್ರೇಯಸ್ಕರವಾಗಿದೆ. ನಾವೆಲ್ಲ ಇಡಿಗಾಳು. ಅವು ಹೊಂದಿಕೊಂಡಿರುವದೇ ಬಲವಾಗಿದೆ. ಹಾಳು ಬಿಚ್ಚಿದರೆ ಇಡಿಗಾಳೇ ಹೋಳಾಗುವದು. ಸುಮ್ಮನೆ ಇಲ್ಲದ ವಿಚಾರ ಮಾಡಬೇಡ."

ಭೀಮಣ್ಣನ ಉಪದೇಶಾಮೃತದ ಪ್ರಭಾವಲಯದಲ್ಲಿ ಇನ್ನೂ ಸುತ್ತುತ್ತಿದ್ದ ವಿಠ್ಠಲನು ಅವನ ಮಾತುಗಳನ್ನೇ ಸಾಲೆಯ ವಿದ್ಯಾರ್ಥಿಯಂತೆ ಒಪ್ಪಿಸಿದನು.

" ಅಣ್ಣತಮ್ಮಂದಿರಲ್ಲಿ ಭೇದಹುಟ್ಟಿಸಬೇಕೆಂದು ನಾನು ಈ ಮಾತನ್ನು ಆಡುತ್ತಿರುವದಿಲ್ಲ. ಆದರೆ ಮನೆಯಲ್ಲಿ ಏನು ನಡೆದಿದೆ ಎಂಬುದನ್ನು ಮಾತ್ರ ನನಗೆ ಹೇಳಬೇಕಾಗಿದೆ. ನಿಮ್ಮದು ಹಾಲಿನಂತಹ ಮನಸ್ಸು. ನಿಮಗೆ ಜಗತ್ತಿನ ರಾಡಿನೀರೆಲ್ಲವೂ ಹಾಲುಹೊಳೆಯಂತೆ ಕಾಣುವುದು ಸ್ವಾಭಾವಿಕ. ಆದರೆ..............

" ಆದರೆ ಏನು ?

" ಈ ಮಕ್ಕಳ ಪರಿಸ್ಥಿತಿಗಾಗಿ ಜೀವ ಚುರ್ರೆನ್ನುತ್ತದೆ.

" ಈಗ ಅಂತಹದು ಆಗಿರುವದಾದರೂ ಏನು ?

" ಮನೆ ಮೂರಾಬಟ್ಟೆಯಾಗತೊಡಗಿದೆ ಏನು ಹೇಳಲಿ ? ಮನೆಯ ಚಿನ್ನವನ್ನು ಒಬ್ಬರು ತವರುಮನೆಗೆ ಸಾಗಿಸುತ್ತಾರೆ. ಇನ್ನೊಬ್ಬರು ಹಣ ಸಂಗ್ರಹಮಾಡಿ ಟ್ರಂಕು ತುಂಬಿಕೊಳ್ಳುತ್ತಾರೆ. ಕಾಳುಕಡಿಗಳ ಮಾರಾಟವೂ ನಡೆದಿದೆ ಗುಪ್ತವಾಗಿ. ಡೊಂಬರ ನಾಗಮ್ಮನ ಮೈಮೇಲೆ ಗೌಡರ ಮನೆಯ ಚಿನ್ನದ ಆಭರಣಗಳು ಮೆರೆಯುತ್ತವೆ. ಸೀಲಿಯ ಮನೆಯ ಗೋಡೆಗಳಿಗೆಲ್ಲ ಮುತ್ತಿನ ಸಾರಣೆ ನಡೆದಿದೆ. ಇದು ನಿಮ್ಮ ಅಣ್ಣಂದಿರು ಅವರ ಹೆಂಡಂದಿರು ಮಾಡುತ್ತಿರುವ ವಿಶ್ವಾಸದ ಕೆಲಸ. ಇದು ಹೀಗೆಯೇ ನಡೆದರೆ ನಾವು ಬಯಲಿನಲ್ಲಿಯೇ ನಿಲ್ಲಬೇಕಾದೀತು. ಇದನ್ನು ನೀವು ವಿಚಾರ ಮಾಡಿದಿರಾ ? ನಾಲ್ಕು ರೂಪಾಯಿಗಳನ್ನು ಕೈಮೇಲೆ ಹಾಕಿದ ಕೂಡಲೇ ಹಿಗ್ಗಿ ಹಿರೇಕಾಯಿಯಾದಿರಿ. ಅಪ್ಪನು ನಿಮಗೆ ಹೇಳಿದ ಮಾತುಗಳನ್ನು ಮರೆತುಬಿಟ್ಟಿರಿ. ನನಗೆ ಹೇಳಿ ಹೇಳಿ ಸಾಕಾಗಿಹೋಯಿತು."

ಹೆಂಡತಿಯ ಮಾತುಗಳನ್ನು ಕೇಳಿ ವಿಠ್ಠಲನು ಗಂಭೀರನಾದ. ಆ ಮಾತುಗಳಲ್ಲಿ ಸತ್ಯತೆ ಇರುವದಾಗಿ ಅವನಿಗೆ ಕಂಡುಬಂದಿತು. ಅಣ್ಣಂದಿರ ವೆಚ್ಚದ ಬಗ್ಗೆ ಅವನಿಗೆ ಮೊದಲಿನಿಂದಲೂ ಕಣ್ಣು ಇತ್ತು. ಈಗ ಹೆಂಡತಿಯ ಮಾತುಗಳಿಂದ ಅವನ ಕಣ್ಣುಗಳು ಇನ್ನೂ ನಿಚ್ಚಳವಾದವು.

" ಈಗಲಾದರೂ ಏನಾಯಿತು ಬಿಡು. ಈ ಹಣವನ್ನು ತೆಗೆದುಕೊಂಡ ಮಾತ್ರಕ್ಕೆ ರೈತರಿಂದ ಹಣವನ್ನು ಪಡೆಯಬಾರದೆಂದೇನಿಲ್ಲ.

" ಏನು ಮಾಡುತ್ತೀರೋ ಮಾಡಿಕೊಳ್ಳಿರಿ. ಹೆಣ್ಣು ಹೆಂಗಸಾದ ನಾನೇಕೆ ಹೇಳಲಿ ?

ಸರಳಾನ ಮಾತಿನ ಬಾಣದ ಮೊನೆ ವಿಠ್ಠಲನ ಹೃದಯವನ್ನು ತಾಕದೇ ಇರಲಿಲ್ಲ. ಮಾವ ಕೇಶವರಾಯರು ಹೇಳಿದ 'ಬೇರೆಯಾಗಿ ಅಂತಃಕರಣ'ವನ್ನು ಉಳಿಸಿಕೊಳ್ಳುವ ಮಾತು. ಈಗ ಮತ್ತೆ ಅವನ ಕಿವಿಯಲ್ಲಿ ಗುಡುಗಾಡತೊಡಗಿತು.

ಅಂದಿನಿಂದ ವಿಠ್ಠಲನು ಅಣ್ಣಂದಿರ ಪ್ರತಿಯೊಂದು ವ್ಯವಹಾರವನ್ನು ಸೂಕ್ಷ್ಮವಾಗಿ ನೋಡತೊಡಗಿದನು. ಆಗಾಗ ಒಂದೊಂದು ಪ್ರತಿಭಟನೆಯ ಮಾತನ್ನೂ ಆಡತೊಡಗಿದನು.

ಈ ಮಾತುಗಳಿಗೆ ಯಾವ ಬೆಲೆಯೂ ಇರುತ್ತಿರಲಿಲ್ಲ.

ಆ ರಾತ್ರಿ ಭೀಮರಾಯನು ಕಾಗದಪತ್ರಗಳನ್ನು ನೋಡುತ್ತ ಮಧ್ಯ ರಾತ್ರಿಯ ವರೆಗೂ ಕುಳಿತೇ ಇದ್ದನು. ಗಂಡನಿಗೆ ಏನೋ ಹೇಳಲು ಕಾತರಳಾದ ಕಾಂತಾಬಾಯಿ ಕಣ್ಣು ಪಿಳಕಿಸುತ್ತ ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಳು.

ಭೀಮರಾಯನೊಮ್ಮೆ ಮೈಮುರಿದುಕೊಂಡು ಆಕಳಿಸಿದನು.

" ಕೆಲಸ ಮುಗಿಯಲೇ ಇಲ್ಲವೆ ? ಯಾರಿಗಾಗಿ ಇದನ್ನೆಲ್ಲ ಮಾಡುತ್ತೀರೋ ತಿಳಿಯದು ತಾಯಿ ? ನನಗಂತೂ ತಲೆ ಚಿಟ್ಟೆದ್ದು ಹೋಗಿದೆ.

ಕಾಂತಾಬಾಯಿ ಎದ್ದು ಕುಳಿತು ಹೇಳಿದಳು

" ಹೆಂಗಸರ ಮಾತುಗಳನ್ನು ಕೇಳಿ ಕೇಳಿ ನನ್ನ ತಲೆಯೂ ಮೊಸರು ಗಡಿಗೆಯಾಗಿದೆ. ಮತ್ತೇನಾಯಿತು ?

ಭೀಮರಾಯ ನಿರ್ಲಕ್ಷ್ಯದಿಂದಲೇ ಕೇಳಿದನು.

" ಈ ಮನೆಯಲ್ಲಿ ಹಿರಿಯತನವೇ ಹಾಳಾಗಿಹೋಗಿದೆ. ಇದು ಹಿರಿಯರಿಲ್ಲದ ಮನೆಯಾಗಿದೆ.

" ಸರಳಾನ ಬಗ್ಗೆ ಈ ಮಾತು ಅಲ್ಲವೆ ?

" ಸ್ವತಂತ್ರದಿಂದ ನಡೆಯುವದಕ್ಕೆ ಒಂದು ಇತಿಮಿತಿ ಬೇಡವೆ ? ಏಕತ್ರ ಕುಟುಂಬದಲ್ಲಿ ಒಂದು ಕಟ್ಟು ಒಂದು ನಿಟ್ಟು ಬೇಕು. ಇವಳಿಗೆ ತನ್ನ ಮಕ್ಕಳಿಗೆ ಏನು ತಿನ್ನಿಸಿದರೂ ಸಾಲದು. ಏನು ಕೊಟ್ಟರೂ ನಾಲದು. ನಮ್ಮ ಮಕ್ಕಳು ಮಕ್ಕಳೇ ಅಲ್ಲ. ಈ ಮನೆಯಲ್ಲಿ ಎಲ್ಲವೂ ಅವಳಂತೆ ನಡೆಯಬೇಕು. ಹೀಗಾದರೆ ಬಾಳುವೆ ಹೇಗೆ ನಾಗೀತು ?

" ಈ ಮಾತನ್ನು ನೀನೊಬ್ಬಳೇ ಏಕೆ ಆಡುತ್ತಿ ?

" ಅಕ್ಕನ ಗತ್ತೇ ಬೇರೆ. ಇವರು ಏನೂ ಅನ್ನುವದಿಲ್ಲ. ಆದರೆ ಎಲ್ಲವನ್ನೂ ಕಬಳಿಸುತ್ತಾರೆ. ಸರಳಾ ಅರ್ಧ ಹಾಳುಮಾಡುತ್ತಾಳೆ, ಅಕ್ಕ ಅರ್ಧ ನೆಗವುತ್ತಾಳೆ. ನನ್ನ ಮಕ್ಕಳು ಮಾತ್ರ ಭಿಕಾರಿಗಳಾಗಿವೆ.

" ನೀನು ಅವರ ಹಾಗೆ ಏಕೆ ಮಾಡಬಾರದು. ಈ ದಿನಗಳಲ್ಲಿ ಮುಂದೆ ಬಿದ್ದವರದೇ ಬಾಳುವೆಯಾಗಿದೆ.

" ಆದರೆ ನೀವೊಂದು ಕೇಳಬೇಕಲ್ಲ.

ಭೀಮರಾಯನು ಗಂಭೀರವಾಗಿ ಹೇಳಿದನು.

" ಗೌಡರ ಮನೆಯ ಪುಣ್ಯ ತೀರಿತೇನೊ ?

“ ಇದು ಹೀಗೆಯೇ ನಡೆದರೆ........

“ ಈ ಮನೆಯನ್ನು ಒಡೆಯುವದು ಸಾಧ್ಯವಿಲ್ಲ. ನಾವು ಬೇರೆಯಾಗುವದು ಅಶಕ್ಯವಾದ ಮಾತು. ನಾವು ಒಂದಾಗಿಯೇ ಬಾಳುತ್ತೇವೆ. ಇದರಲ್ಲಿ ಹೆಂಗಸರು ತಲೆಹಾಕುವ ಕಾರಣವಿಲ್ಲ.

ಭೀಮರಾಯನು ಗದ್ದರಿಸಿ ನುಡಿದನು.

“ ನಾನೇಕೆ ತಲೆಹಾಕಲಿ ಸುಟ್ಟುಹೋಗಲಿ. ಈ ರೌರವ ನರಕವನ್ನು ಅನುಭೋಗಿಸಲಿಕ್ಕೆ ತಲೆಕೊಟ್ಟೇ ನಿಂತಿದ್ದೇನೆ.

“ ಈ ಮನೆ ನಿನ್ನಪಾಲಿಗೆ ನರಕವಾಗಬಾರದಾಗಿತ್ತು.

“ ನಾಲ್ಕು ದಿನ ಅಡಿಗೆಯ ಮನೆಯಲ್ಲಿ ಕೆಲಸಮಾಡಿದರೆ ನಿಮಗೂ ಗೊತ್ತಾಗುತ್ತದೆ. ಇದು ನರಕವೋ ಸ್ವರ್ಗವೋ ಎಂಬುವದು. ಮಾತು ಮಾತಿಗೆ ಜಗಳ. ನಾನೆಂದರೆ ತೀರಿತು ಹಿರಿಯವಳು ಕಿರಿಯವಳು ಕೂಡಿಯೇ ಈದ ಹುಲಿಯಾಗುತ್ತಾರೆ. ನನ್ನದೇ ಕರಮ. ಯಾರೇನು ಮಾಡುವದು ?

ಭೀಮರಾಯನು ಹೆಂಡತಿಯನ್ನೊಮ್ಮೆ ನೇರವಾಗಿ ನೋಡಿಹೇಳಿದ.

“ ಇಂತಹ ಮಾತುಗಳಿಂದ ನೀನಾಗಿಯೇ ಕುಳಿತು ವಾತಾವರಣವನ್ನು ಹದಗೆಡಿಸಬೇಡ. ಕಾಲ ಬಂದೇಬರುತ್ತದೆ. ಅಲ್ಲಿಯ ವರೆಗೆ ಹೇಗಾದರೂ ಕಾಲಹಾಕುತ್ತಿರು.

ಕಾಂತಾಬಾಯಿಗೆ ಈ ಮಟ್ಟಿಗೆ ಸಮಾಧಾನವಾಯಿತು. ಒಂದಿಲ್ಲ ಒಂದು ದಿನ ಈ ಮನೆಯಲ್ಲಿ ತನ್ನದೇ ಒಂದು ಮನೆಯಾಗುವದಿದೆ ಎಂಬ ಭರವಶೆಯಲ್ಲಿ ಅವಳು ಹೆಚ್ಚಿನ ಸಮಾಧಾನವನ್ನೇ ತಾಳಿದಳು.

ಮರುದಿನದಿಂದಲೇ ಅವಳಲ್ಲಿ ಮಾರ್ಪಾಟು ತಲೆದೋರಿತು. ಕಾಶೀಬಾಯಿಯ ಮಾತುಗಳನ್ನು ಅವಳು ಮುಗುಳುನಗೆಯಿಂದಲೇ ಸ್ವೀಕರಿಸ ತೊಡಗಿದಳು. ಸರಳಾನೊಡನೆ ಅವಳು ನಡೆದುಕೊಳ್ಳುವ ರೀತಿಯಲ್ಲಿ ಸಹಾನುಭೂತಿ ಒಡೆದು ಕಾಣಹತ್ತಿತು.

ಕಾಶೀಬಾಯಿಯಲ್ಲಿಯೂ ಇಂತಹದೇ ಮಾರ್ಪಾಟು ಮೂಡಿಬಿಟ್ಟಿತು. ಇದಕ್ಕೂ ಕಾರಣವಿಲ್ಲದಿರಲಿಲ್ಲ.

ಆ ದಿನ ಸೋಮಪ್ಪನನ್ನು ಮುಂದಿಟ್ಟುಕೊಂಡು ಅವಳು ಗಂಡನಿಗೆ ಹೇಳಿದ್ದಳು,

“ ನಿಮಗೇನು ಕಡಿಮೆಯಾಗಿದೆಯೆಂದು ನೀವು ಹೀಗೆ ಮೂಗು ಕೆಳಗೆ

ಮಾಡುತ್ತಿದ್ದೀರಿ ? ನಮ್ಮ ಕಾರ್ಯವೆಲ್ಲವೂ ಸಾಕಷ್ಟು ಸಾಧಿಸಿದೆ. ಇನ್ನು ಮೇಲಾದರೂ ನಾವೇಕೆ....?........

" ಸೋಮಪ್ಪ ಇವಳಿಗೆ ನೀನಾದರೂ ಬುದ್ಧಿಹೇಳು. ಈ ಮನೆಗೆ ನಾನೇ ಹಿರಿಯ. ನಾನೇ ಕುಳಿತು ಒಡಕಿನ ಮಾತುಗಳನ್ನಾಡುವದು ಶೋಭಿಸುವದಿಲ್ಲ. ಅಲ್ಲದೆ ನಾವು ಈಗ ಎತ್ತಿಹಾಕಿದ ಸಂಗತಿಯ ಬಗ್ಗೆ ಸಂದೇಹವೂ ಬರಬಹುದು.

" ಇದು ಎಷ್ಟು ದಿನ ನಡೆಯಬೇಕು ಹೇಳಿರಿ ? ನನ್ನ ಮಗುವಿಗೆ ಮಾಡಲು ನನಗೆಯೇ ಸ್ವತಂತ್ರವಿಲ್ಲದಾಗಿದೆ. ಅದಕ್ಕೆ ಒಳ್ಳೆಯ ಬಟ್ಟೆ ಹೊಲಿಸಲಿಕ್ಕಿಲ್ಲ. ಆಭರಣಗಳನ್ನು ತೊಡಿಸಲಿಕ್ಕಿಲ್ಲ. ಅಂಜಿ ಅಂಜಿ ನಡೆದು ಸಾಕಾಗಿಹೋಗಿದೆ. ಎಂದಿಲ್ಲ ಒಂದು ದಿನ ಬರುವದು ಇಂದೇ ಏಕೆ ಬರಬಾರದು ?

" ಹೆಂಗಸರಿಗೆ ವ್ಯವಹಾರ ತಿಳಿಯುವದಿಲ್ಲ. ಈ ಮಾತು ನನ್ನಿಂದ ಬರಲು ಸಾಧ್ಯವಿಲ್ಲ. ಇದು ಅವರಿಂದಲೇ ಬರಬೇಕು. ನಾನು ಬೇಡಬೇಡ ವೆನ್ನುತ್ತ ಬೇರೆಯಾಗಿ ಅವರ ಮೇಲೆ ಉಪಕಾರ ಮಾಡಿದಂತೆ ಮಾಡಬೇಕು. ಅಹುದೋ ಅಲ್ಲವೋ ಸೋಮಪ್ಪ ನೀನಾದರೂ ಹೇಳು.

ಸೋಮಪ್ಪ ಗೋಣು ಅಲ್ಲಾಡಿಸಿದ.

ಕಾಶೀಬಾಯಿಯ ಪರಿವರ್ತನೆಗೆ ಗಂಡನ ಅಶ್ವಾಸನವೇ ಕಾರಣ ವಾಗಿತ್ತು. ಅಂದಿನಿಂದ ಅವಳು ಕಾಂತಾಬಾಯಿಯೊಡನೆ ಪ್ರೀತಿಯ ಮಾತಾಡತೊಡಗಿದಳು. ಸರಳಾ ಹೇಳಿದಂತೆ ಕೇಳತೊಡಗಿದಳು.

ಅವರಿಂದಲೇ ಮಾತು ಬರುವಹಾಗೆ ಏನಾದರೂ ಮಾಡಬೇಕೆನ್ನುವ ವಿಚಾರ ಮಾತ್ರ ಅವಳಲ್ಲಿ ಜಾಗ್ರತವಾಗಿಯೇ ಇದ್ದಿತು.

ಈ ಕಾರಣದಿಂದಾಗಿ ಮನೆಯಲ್ಲಿ ಶಾಂತತೆ ಕೆಲಮಟ್ಟಿಗಾದರೂ ಸ್ಥಾಪಿಸಲ್ಪಟ್ಟಿತು.

ಬಿರುಗಾಳಿ ಬೀಸುವ ಮೊದಲು ಮೂಡುತ್ತಿರುವ ಶಾಂತತೆಯೇ ಅದಾಗಿತ್ತು.

ಎಲ್ಲರೂ ತಮ್ಮತಮ್ಮ ಕಾರ್ಯಸಾಧನೆಗಾಗಿ ಶಾಂತತೆಯ ಸೋಗು ಹಾಕಿಕೊಂಡಿದ್ದರು.

ಈಗ ಮನೆಯ ಮಕ್ಕಳಲ್ಲಿಯೂ ಒಂದು ತರದ ವ್ಯವಸ್ಥಿತ ರೀತಿ ಕಾಣಹತ್ತಿತು.

ಪರಸ್ಪರರು ಪರಸ್ಪರರ ಮಕ್ಕಳ ಸ್ನಾನಪಾನಗಳ ಬಗ್ಗೆ ವಿಚಾರಿಸ ತೊಡಗಿದರು.

ಹೊರಗಿನಿಂದ ನೋಡುವ ಜನರಿಗೆ ಇದೊಂದು ಆದರ್ಶ ಮನೆತನ ವೆನ್ನುವಂತೆ ಕಾಣಹತ್ತಿತು.

" ಅಕ್ಕ ಇದನ್ನು ಮಾಡಲಾ ?

ಎಂದು ಕಾಂತಾಬಾಯಿ ಕೇಳಿದರೆ,

" ಮಾಡು ಕಾಂತಾ! ಇಷ್ಟಕ್ಕೆಲ್ಲ ನೀನು ನನ್ನ ಅಪ್ಪಣೆ ಕೇಳಬೇಕೆ?

ಎಂದು ಕಾಶೀಬಾಯಿ ನಕ್ಕು ಹೇಳುವಳು.

" ಸರಳಾ! ನಿನ್ನ ಕುಮಾರ ಕಂಠೀರವನು ಹಾಲಿನ ಗಡಿಗೆಯನ್ನು ಒಡೆಯುತ್ತಾನೇನು ನೋಡು"

ಎಂದು ಕಾಂತಾಬಾಯಿ ನಗುತ್ತಲೇ ಆ ಹುಡುಗನನ್ನು ಎತ್ತಿ ಮುದ್ದಿಸುವಳು.

ದಪ್ಪವಾದ ಕೆನೆಯನ್ನು ಬಸಿಯಲ್ಲಿ ಹಾಕಿಕೊಂಡು ಅದರಲ್ಲಿ ಸಕ್ಕರೆ ಬೆರೆಸಿ ಎಲ್ಲ ಮಕ್ಕಳಿಗೂ ಹಂಚುವಳು.

ಇದನ್ನು ನೋಡಿದ ಸರಳಾ ತನ್ನ ಕೋಣೆಗೆ ಹೋಗಿ 'ಕ್ರೀಮ ಕ್ರ್ಯಾಕರ್' ಬಿಸ್ಕೀಟಿನ ಪೊಟ್ಟಣವನ್ನು ಬಿಚ್ಚಿ ಎಲ್ಲ ಮಕ್ಕಳಿಗೂ ಹಂಚುವಳು.

ಎಲ್ಲ ಮಕ್ಕಳು ಕೇಕೆ ಹಾಕಿ ನಗುವಾಗ ಆ ಮನೆ ಗೋಕುಲದಂತೆ ಕಾಣಿಸತೊಡಗಿತು.

ಆ ಮಕ್ಕಳೆಲ್ಲ ಬಾಲಗೋಪಾಲರಂತೆ ಕುಣಿಯುತ್ತಿದ್ದರು.

ಇದನ್ನು ನೋಡುತ್ತಲಿದ್ದ ಬಳವಂತರಾಯನಿಗೆ ತೃಪ್ತಿಯಾಗುತ್ತಿತ್ತು.

ಅವನ ಒಳಗಿನ ಕಲ್ಮಷವು ಕೂಡ ಆ ಮಟ್ಟಿಗೆ ಸರಿದು ಮಕ್ಕಳೊಡನೆ ಅವನು ಆಟವಾಡತೊಡಗಿದನು.

ತಮ್ಮಂದಿರ ಮಕ್ಕಳಿಗೆಲ್ಲ 'ದೊಡ್ಡಪ್ಪ'ನು 'ಜೂಜೂ ಕುದುರೆ' ಯಾಗುವದೂ ಉಂಟು.

ಗೌಡರ ಮನೆಯನ್ನು ನೋಡುತ್ತಿದ್ದ ಜನ ಅಚ್ಚರಿಬಡುತ್ತಿದ್ದರು.

ಈಗಾಗಲೇ ಈ ಮನೆ ನಾಲ್ಕು ಮನೆಗಳಾಗಿರಬೇಕಾಗಿತ್ತೆಂಬ ಭಾವ ಅವರಲ್ಲಿ ನಷ್ಟವಾಗತೊಡಗಿತು.

ಜನಕ್ಕೆ ಮೋಜಿನ ಆಶೆಯಿತ್ತು.

ಆದರೆ ಸಧ್ಯ ಗೌಡರ ಮನೆಯವರು ಈ ಆಶೆಯನ್ನು ಬುಡಮೇಲು ಮಾಡಿದರು.

ಇದು ಅನೇಕರಿಗೆ ಬಿಡಿಸಲಾರದ ಒಗಟಾಯಿತು.

ಭಾವೂರಾಯರ ಪುಣ್ಯವೇ ಇದಕ್ಕೆ ಕಾರಣವಾಗಿರಬೇಕೆಂದು ಅನ್ನುವವರೂ ಇದ್ದರು.

ಅವರ ಮಾತು ಅರ್ಧ ಸತ್ಯವಾಗಿತ್ತು.

೧೩

ಕಾಶೀಬಾಯಿ ಒಂದು ದೃಶ್ಯವನ್ನೇ ಉಂಟುಮಾಡಿದಳು.

ಅವಳ ಕುಮಾರನ ಕೊರಳೊಳಗಿನ ಚಿನ್ನದ ಚೈನು ಕಳವಾಗಿ ಹೋದದ್ದೇ ಈ ರಂಬಾಟಕ್ಕೆ ಕಾರಣವಾಯಿತು.

"ಎಡಗೈಯಿಂದ ಎಲ್ಲಿಯಾದರೂ ತೆಗೆದಿಟ್ಟಿರಬಹುದು ನೋಡಿರಿ. ಸುಮ್ಮನೆ ಏಕೆ ಬೊಬ್ಬಾಟ ಮಾಡುವಿರಿ."

ಕಾಂತಾಬಾಯಿ ಸಲಹೆ ನೀಡಿದಳು.

"ಇದು ಎಡಗೈಯಿಂದ ತೆಗೆದಿಟ್ಟು ಹೋಗಿಲ್ಲ. ಇದನ್ನು ಬಲಗೈಯಿಂದಲೇ ಹಾರಿಸಿದ್ದಾರೆ. ನನಗೆಲ್ಲಾ ಗೊತ್ತಾಗಿದೆ.

ಕಾಶೀಬಾಯಿ ಅಕ್ಕಸದಿಂದಲೇ ನುಡಿದಳು.

"ಏನು ಗೊತ್ತಾಗಿದೆ ಮಣ್ಣು. ತುಂಬಿದ ಮನೆಯಲ್ಲಿ ಹೀಗೆಲ್ಲಾ ಮಾತಾಡಿದರೆ ಇಲಿಗೆ ಬಡಿಯಲು ಹೋಗಿ ಗಣೇಶನಿಗೆ ಪೆಟ್ಟುಕೊಟ್ಟಂತಾದೀತು. ಇದ್ದ ಮೂವರಲ್ಲಿ ಕದ್ದವರಾರು? ಎಂಬ ಪ್ರಶ್ನೆ ಬರಬಹುದು. ಇನ್ನೊಮ್ಮೆ ಎಲ್ಲಾ ಕಡೆಗೆ ಹುಡುಕಾಡಿರಿ."

ಕಾಂತಾಬಾಯಿಯ ಈ ಮಾತುಗಳನ್ನು ಕೇಳಿ ಕಾಶೀಬಾಯಿ ಹುಡುಕುವ ನಟನೆ ಮಾಡತೊಡಗಿದಳು. ಇಂಗಿನ ಡಬ್ಬಿಯನ್ನು ತಿರುವಿಹಾಕಿದಳು. ಜೀರಿಗೆ, ಸಾಸಿವೆಗಳ ಪರಡಿಗಳನ್ನು ಬುಡಮೇಲುಮಾಡಿ ನೋಡಿದಳು. ವಲೆಯ ಮಗ್ಗಲಿನ ಮಾಡವನ್ನು ಕಸಬರಿಗೆಯಿಂದ ಬಳಿದುನೋಡಿದಳು. ಆದರೆ ಕಳೆದ ವಸ್ತು ಎಲ್ಲಿಯೂ ಸಿಗಲಿಲ್ಲ.

"ಅಥೆಂಗ ಮಟಾಮಾಯ ಆಗಿದ್ದೀತು ತಾಯಿ"

ಕಾಂತಾಬಾಯಿ ಚಿಂತೆಯನ್ನು ನಟಿಸುತ್ತ ಉದ್ಗರಿಸಿದಳು.

"ಅದು ಕಳೆದಿರಲಿಕ್ಕಿಲ್ಲ ಬಿಡಿರಿ. ಕಳೆದ ಮಾಲು ಸಿಗಬಹುದು. ತೆಗೆದಿಟ್ಟ ಮಾಲು ಹೇಗೆ ಸಿಕ್ಕೀತು."

ಸರಳಾ ಈ ಮಾತನ್ನು ಆಡಿ ನಾಲಿಗೆ ಕಚ್ಚಿಕೊಂಡಳು.

"ಕಳೆಯದೇ ಕಳೆದಿದೆಯೆಂದು ಕೂಗಾಡಲು ನಾನೇನು ಕಲಿತ ಹೆಂಗಸಲ್ಲ ನಿನ್ನ ಹಾಗೆ. ಆ ಚೈನು ಎಲ್ಲಿದೆ ಎಂದು ನನಗೆ ಗೊತ್ತಿದೆ.

" ಗೊತ್ತಿದ್ದರೆ ಹೇಳಿಬಿಡಿರಲ್ಲ! ಸುಮ್ಮನೆ ಅತ್ತ ಇತ್ತ ಹುಡುಕು ತ್ತೀರಿ ಯಾಕೆ?

ಸರಳಾ ಹುಬ್ಬು ಗಂಟುಹಾಕಿ ಹೇಳಿದಳು.

" ಮುಂಜಾನೆ ಆ ಚೈನು ಕೂಸಿನ ಕೊರಳೊಳಗೆಯೇ ಇತ್ತು.

" ಅಂದಬಳಿಕ ಅದು ಹೋಹಿತಾದರೂ ಎಲ್ಲಿ ?

" ಚೀನನ್ನು ಹಾಕಿಕೊಂಡು ಮಗು ಸರಳಾನ ಕೋಣೆಗೆ ಹೋಯಿತು ತಿರುಗಿ ಯಾವಾಗ ಬಂದಿತೋ ನನಗೆ ಗೊತ್ತಿಲ್ಲ. ನಾನು ಮಧ್ಯಾಹ್ನ ನೋಡು ವಾಗ ಕೂಸಿನ ಕೊರಳಲ್ಲಿ ಚೈನು ಇಲ್ಲವೇ ಇಲ್ಲ.

" ಅವ್ವಯ್ಯಾ! ಇದು ವಿಲಕ್ಷಣವಾಗಿದೆ ಬಿಡಿರಿ. ಅಂತೂ ಸರಳಾನ ಕೋಣೆಗೆ ಹೋಗುವಾಗ ಕೂಸಿನ ಕೊರಳಲ್ಲಿ ಚೈನು ಇತ್ತು. ತಿರುಗಿ ಬಂದಾಗ ಇರಲಿಲ್ಲ. ಇದು ಬಹಳ ವಿಚಿತ್ರ!

ಕಾಂತಾಬಾಯಿ ಹೋಮಕುಂಡದಲ್ಲಿ ಘೃತಸಿಂಚನ ಮಾಡತೊಡ ಗಿದಳು.

ಸರಳಾ ಗಂಭೀರಳಾಗಿ ಹೇಳಿದಳು.

" ಈ ದಿನ ನಿಮ್ಮ ಮಗು ಮುಂಜಾನೆ ನನ್ನ ಕೋಣೆಗೆ ಬಂದೇ ಇಲ್ಲ.

" ಅಧೆಂಗ ಬಂದೀತವ್ವಾ! ಹಾಂಗಾರ ನಾ ಏನ ಸುಳ್ಳು ಹೇಳತೀನೇನ! ನನ್ನ ಮಗು ನಿನ್ನ ಕೋಣೆ ಹೊಕ್ಕದ್ದು ನಾನು ಪ್ರತ್ಯಕ್ಷ ನೋಡಿನಿ. ಸುಳ್ಳು ಹೇಳಿ ನಾ ಯಾವ ನರಕಕ್ಕೆ ಹೋಗಲಿ !

" ನಿಮ್ಮ ಕೂಸು ನನ್ನ ಕೋಣೆಗೆ ಬಂದಿಲ್ಲ. ನಾನು ಬೇಕಾದ ಆಣೆಮಾಡಿ ಹೇಳುತ್ತೇನೆ.

" ನೀನು ಪುರಾಣಿಕಾಳಿಗೊಂದು ಆಣೀ ಮಾಡೂವಾಕಿ. ನಿನ್ನ ಆಣಿ, ಚೂರಿ ತಗೊಂಡ ನಾಯೇನ ಬೆಂಕಿ ಹಚ್ಚಲಿ!

" ಹಾಗಾದರೆ ನಾನೇ ಕಳ್ಳಿಯೆಂದು ನಿಮ್ಮ ಅಭಿಪ್ರಾಯವೇ ? ಸ್ಪಷ್ಟ ವಾಗಿ ಹೇಳಿರಲ್ಲ!

ಸರಳಾನ ಕಣ್ಣಲ್ಲಿ ನೀರು ಊರತೊಡಗಿತು.

" ನೀನು ಕದ್ದವಳೆಂದು ಅಕ್ಕನಾದರೂ ಎಲ್ಲಿ ಅನ್ನುತ್ತಾಳೆ. ಮಗು ನಿನ್ನ ಕೋಣೆಯಲ್ಲಿ ಹೋದಾಗ ಚೈನು ಇತ್ತು. ಹೊರಗೆ ಬಂದಾಗ ಇರಲಿಲ್ಲ.

ಕಾಂತಾಬಾಯಿ ತನ್ನ ರೀತಿಯಲ್ಲಿ ಸ್ಪಷ್ಟೀಕರಿಸಿದಳು.

" ಮಗು ಬಂದೇ ಇಲ್ಲವೆಂದು ಹೇಳಿದೆನಲ್ಲ ಕಾಂತಕ್ಕ !

" ಹಾಗಾದರೆ ಗೌಡತಿ ಸುಳ್ಳಿ !

" ಗೊತ್ತಿದೆ. ಇವಳೇ ಕಳ್ಳಿ !

" ಯಾರು ಕಳ್ಳಿ ?

" ಕದ್ದವರು ?

" ನಾನು ಕದ್ದವಳೆ ?

" ಕಳವು ಮಾಡದಿದ್ದರೆ ನಿನ್ನ ಕಣ್ಣಲ್ಲಿ ನೀರೇಕೆ ಬರಬೇಕಾಗಿತ್ತು.

" ಈ ಅಪವಾದವನ್ನು ನಾನು ಸಹಿಸಲಾರೆ.

" ಸತ್ಯ ಸಂಗತಿ ಅಪವಾದ ಹೇಗಾದೀತು ? ಸುಮ್ಮನೇ ಹೇಗೆ ಅದನ್ನು ತೆಗೆದುಕೊಂಡಿರುವಿಯೋ ಹಾಗೆ ಕೊಟ್ಟುಬಿಡು. ಸುಮ್ಮನೆ ಇದು ಗಂಡಸರ ಕಿವಿಯವರೆಗೆ ಹೋಗುವದರಲ್ಲಿ ಅರ್ಥವಿಲ್ಲ.

" ನನ್ನ ಮಕ್ಕಳ ಆಣೆಮಾಡಿ ಹೇಳುತ್ತೇನೆ. ನನಗೆ ಇದು ಗೊತ್ತೇ ಇಲ್ಲ.

ಸರಳಾ ರೋದಿಸುವ ಸ್ವರದಲ್ಲಿ ಹೇಳಿದಳು.

ಈ ರೋದನಸ್ವರವನ್ನು ಕೇಳಿ ಬಳವಂತಗೌಡರು ಹೊರಗೆ ಬಂದು

" ಅಳಲಿಕ್ಕೆ ಈ ಮನೆಯಲ್ಲಿ ಯಾರು ಸತ್ತರು ?

ಚೀರಿ ಕೇಳಿದರು.

" ನನ್ನ ಮೇಲೆ ಸುಮ್ಮಸುಮ್ಮನೆ ಅಪವಾದ ಹೊರೆಸುತ್ತಾರೆ. ನಾನು ಕಳವು ಮಾಡಿರುವೆನಂತೆ ! ನಾನು ಇದನ್ನು ಮಾಡಿಲ್ಲ ಭಾವನವರೆ !

ಸರಳ ಗದ್ಗದಿತಳಾಗಿ ಹೇಳಿದಳು.

" ಅಳುತ್ತೀಯಾಕೆ ಮತ್ತೆ ? ನಿನಗೆ ತುಂಬಿದ ಮನೆಯಲ್ಲಿ ಅಳಲು ವಾಗತ್ಯವೆನಿಸುವದಿಲ್ಲವೇನು ? ಆ ಚೈನು ಹೋಯಿತಾದರೂ ಎಲ್ಲಿಗೆ ? ಈ ಮನೆ ಕಳ್ಳರ ಮನೆಯೇನು ? ಸಾಮಾನುಗಳು ಹೋಗುತ್ತಿವೆ ಏಕೆ ? ಎಲ್ಲ ರಿಗೂ ಹುಡುಗಾಟಿಕೆಯಾಗಿದೆ. ಚೆನ್ನಾಗಿ ಬಾಳುವೆ ಮಾಡುತ್ತಿದ್ದರೆ ಮಾಡಬೇಕು. ಇಲ್ಲವಾದರೆ........ಮನೆಯಲ್ಲಿ ಯಾವಾಗಲೂ ರಣಕತ್ತವೆ. ಸಾಕಾಗಿಹೋಗಿದೆ.

ಬಳವಂತರಾಯ ಗದ್ಗರಿಸುತ್ತ ಸರಳಾನಿಗೆ ಛೀಮಾರಿ ಹಾಕಿ ತೇಕ ತೊಡಗಿದ.

ಅದೇ ಹೊತ್ತಿಗೆ ವಿಠ್ಠಲನು ಬಂದುದನ್ನು ನೋಡಿ ಬಳವಂತಗೌಡನು,

" ತುಂಬಿದ ಮನೆಯಲ್ಲಿ ಅಳಬೇಡವೆಂದು ನಿನ್ನ ಹೆಂಡತಿಗೆ ನೀನಾದರೂ ಹೇಳು ? ಅವಲಕ್ಷಣವೆಂದರೆ ಅವಲಕ್ಷಣ.

ಗಂಡನನ್ನು ನೋಡಿ ಸರಳಾನಿಗೆ ಆವೇಶವೇ ಬಂದಂತಾಯಿತು. ಅವಳು ಧೈರ್ಯದಿಂದ,

" ನಾನೇನು ಚೈನು ತೆಗೆದುಕೊಂಡಿಲ್ಲ. ಇದನ್ನು ಇನ್ನೂ ಹತ್ತು ಸಾರೆ ಹೇಳುತ್ತೇನೆ.

" ಯಾವ ಚೈನು ? ಏನು ಸುದ್ದಿ ?

ವಿಠ್ಠಲ ಗಡಬಡಿಸಿ ಕೇಳಿದ.

" ನಾನು ಚೈನನ್ನು ಕದ್ದಿರುವೆನಂತೆ !

" ಯಾರು ಹೇಳುತ್ತಾರೆ?

" ನಿಮ್ಮ ಹಿರಿಯ ಅತ್ತಿಗೆ ?

" ಇದು ನಿಮಗೆ ಹೇಗೆ ಗೊತ್ತಾಯಿತು ಅತ್ತಿಗೆ ?

" ಕೈಯೊಳಗಿನ ಹುಣ್ಣಿಗೆ ಕನ್ನಡಿ ಯಾಕೆ ಬೇಕು ?

" ಇದು ನನ್ನ ಪ್ರಶ್ನೆಗೆ ಯೋಗ್ಯ ಉತ್ತರವಾಗಲಾರದು.

" ಅಂದರೆ ನನ್ನ ಮಗುವಿನ ಚೈನು ಕಳೆದೇ ಇಲ್ಲವೆಂದು ನಿಮ್ಮ ಅಭಿಪ್ರಾಯವೇನು ?

" ನಾನು ಹಾಗೆ ಅನ್ನುವದಿಲ್ಲ. ನಿಮ್ಮ ಮಗುವಿನ ಚೈನು ಕಳೆದದ್ದು ನಿಜ. ಅದನ್ನು ಕದ್ದದ್ದೂ ನಿಜ. ಆದರೆ ತುಡುಗು ಮಾಡಿದವಳು ಸರಳಾ ಅಲ್ಲವೆಂದು ಮಾತ್ರ ಹೇಳಬಹುದು.

" ಇದನ್ನು ಹೇಗೆ ಹೇಳುವಿರಿ ?

ಶಾಂತಾಬಾಯಿ ನಡುವೆ ಬಾಯಿ ಹಾಕಿದಳು.

" ಗೌಡರ ಮನೆತನದ ಸೊಸೆಯಂದಿರಾಗಿ ನಿಮಗೆ ಇಂಥ ಕೆಲಸ ಮಾಡಲು ನಾಚಿಕೆ ಬರಬೇಕಾಗಿದ್ದಿತು. ನಮ್ಮ ಮರ್ಯಾದೆಯನ್ನು ಚಿನಿವಾಲಗಟ್ಟಿಯಲ್ಲಿ ಮಾರ ಹಚ್ಚಿದ ನಿಮಗೆ ಲಜ್ಜೆಯೇ ಇಲ್ಲ.

" ಬಾಯಿ ತೊಳೆದುಕೊಂಡು ಮಾತಾಡಿರಿ. ಭಾವಜೀ ! ಹೆಂಡತಿಯನ್ನು ಎಲ್ಲದರಲ್ಲಿಯೂ ಮೇಲುಕಟ್ಟಿ ಮಾತಾಡಬಾರದು. ಇವಳು ಹೇಗಿದ್ದಾಳೆ ನಿಮಗೇನು ಗೊತ್ತು ?

" ಈಗ ಅವಳ ಪ್ರಶ್ನೆ ನನಗಿರಲಿ ಬಿಡಿರಿ. ನೀವು ಹೇಗಿದ್ದೀರೆಂಬುದು ಈಗಲೇ ನನಗೆ ಗೊತ್ತಾಗಿದೆ. ಭೀಮಣ್ಣನ ಹೆಂಡತಿಯಾಗಿ

ನೀವು ಹೇಸಿಗೆಯನ್ನು ತುಳಿಯುವದು ಲಾಂಛನಾಸ್ಪದ. ನಿಮ್ಮ ನೆರಳಿನಲ್ಲಿರುವದೂ ನನಗೆ ಗಂಡಾಂತರಮಯವಾಗಿದೆ. ಇಬ್ಬರ ನಡುವೆ ಬೆಂಕಿಹಾಕಿ ಮೋಜುನೋಡುವ ನಿಮ್ಮ ಕುಹಕತನವು ಪಾಪಮಾರಿತವಾಗಿದೆ. ಈ ಚೈನನ್ನು ನೀವು ಗುರುತಿಸುವಿರೇನು ನೋಡಿರಿ ! ”

ವಿಠ್ಠಲನು ಜೇಬಿನೊಳಗಿಂದ ಚಿನ್ನದ ಚೈನನ್ನು ಹೊರಗೆ ತೆಗೆದು ಕಾಂತಾಬಾಯಿಯ ಮುಖದ ಮುಂದೆ ಹಿಡಿದು ಅಬ್ಬರಿಸಿ ಕೇಳಿದನು,

“ ಗುರುತು ಹತ್ತಿತೇ ಅತ್ತಿಗೆ ?

“ ಇದು ನನ್ನ ಕೂಸಿನ ಚೈನು. ಗುರುತು ಹತ್ತದೇನುಮಾಡೀತು ?

ಕಾಶೀಬಾಯಿ ಒಣಗಿದ ತುಟಿಯಮೇಲೆ ಕೈಸವರಿಕೊಂಡು ಹೇಳಿದಳು.

ಕಾಂತಾಬಾಯಿ ಥರಥರ ನಡುಗತೊಡಗಿದಳು.

“ ನನಗೆ ಸವಾಲು ಹಾಕಿ ನಾನೇ ಕಳ್ಳಿಯೆಂದು ಶಾಬೀತುಮಾಡುತ್ತಿದ್ದಿರಲ್ಲ. ಈಗ ನಿಮ್ಮ ಮುಖ ಏಕೆ ಕಪ್ಪಿಟ್ಟಿತು ಹೇಳಬಾರದೆ ?

ಸರಳಾ ಚುಚ್ಚಿ ಮಾತಾಡಿದಳು.

“ ಇದರ ನಿಷ್ಕರ್ಷೆ ಆಗಿಬಿಡಲಿ ಅಣ್ಣ ! ನೀನೂ ಹೆಂಗಸರ ಮಾತನ್ನು ಕೇಳಿ...............

“ ಕಾಂತಾ !

“ ಇದು ನನ್ನೊಬ್ಬಳದೇ ತಪ್ಪು ಅಲ್ಲ. ಭಾವನವರೆ ! ಈ ತಪ್ಪಿನಲ್ಲಿ ಅಕ್ಕನೂ ಪಾಲುಗಾರಳು.

“ ಅರ್ಥವಾಗಲಿಲ್ಲ.

“ ಚೈನನ್ನು ಯಾರೂ ಕಟಿಯಲಿಲ್ಲ. ಇದನ್ನು ಮಾರಿಬಂದ ಹಣವನ್ನು ಇಬ್ಬರೂ ಸರಿಯಾಗಿ ಹಂಚಿಕೊಳ್ಳಬೇಕೆಂದು...............

“ ಇದನ್ನು ಮಾರಲು ತೆಗೆದುಕೊಂಡು ಹೋದವರಾರು ?

“ ಅವಳೂ ಈ ಮನೆಗೆ ಸಂಬಂಧಿಸಿದವಳೆ !

ಲಕ್ಷ್ಮಲ ವ್ಯಂಗ್ಯವಾಗಿ ನುಡಿದನು.

“ ಯಾರು ?

“ ನಿಮ್ಮ ಪ್ರೇಯಸಿ, ಡೊಂಬರ ನಾಗಿ !

ಬಳವಂತಗೌಡರ ಮುಖ ಬಿದ್ದುಹೋಯಿತು.

ಹೆಂಗಸರ ಮುಂದೆ ಈ ಮುಖಭಂಗವಾಗಿದ್ದರಿಂದ ಅದು ಇನ್ನೂ ಕಳೆಗೆಟ್ಟಿತು.

ಅದನ್ನು ತೋರಗೊಡದೆ ಹಿರಿಯಗೌಡನು,

" ಈ ಹೆಂಗಸರ ಚರ್ಮ ಸುಲಿಸಬೇಕು. ಕತ್ತೆಮಕ್ಕಳು ಕಾರಭಾರು ಮ್ಹಾಡುತ್ತಾರೆ. ಮರ್ಯಾದೆಗೆಟ್ಟವರು !

ಎನ್ನುತ್ತ ಸಿಡುಕಿನಲ್ಲಿಯೇ ಕೋಣೆಯನ್ನೂ ಹೊಕ್ಕು ಒಮ್ಮೆ ಡುರುಕೀ ಹಾಕಿದನು.

ಸರಳಾನಿಗೆ ಇದು ತೀರಾ ಅಸಹ್ಯವಾಯಿತು. ಈ ಕುಚೋದ್ಯದ ಹೆಂಗಸರು ತಾವು ಇಲ್ಲದ್ದನ್ನೂ ಮಾಡಿ ಅಪರಾಧವನ್ನು ತನ್ನ ಮೇಲೆ ಹೊರಿಸ ನಿಂತದ್ದು ಅವಳಲ್ಲಿ ಸಿಡುಕನ್ನು ತುಂಬ ಹತ್ತಿತು. ಈ ಜನರೊಡನೆ ಒಂದೇ ಮನೆಯಲ್ಲಿ ಕೂಡಿಬಾಳುವದು ಅವಳಿಗೆ ತೀರಾ ಅಸಹ್ಯವೆನ್ನಿಸಹತ್ತಿತು. ತನ್ನ ಗೋಣನ್ನು ಮುರಿಯಲು ನಿಂತವರೊಡನೆ ಒಂದೇ ಪಂಕ್ತಿಯಲ್ಲಿ ಕುಳಿತು ಹೇಗೆ ಊಟಮಾಡಬೇಕೆಂಬುದು ಅವಳಿಗೆ ತಿಳಿಯದಾಯಿತು. ಕೇಶವರಾಯರ ಮಗಳಾದ ತಾನು ಇಂತಹ ಭಿಕಾರಿಗಳೊಡನೆ ಮಾತನಾಡುವದೂ ತನ್ನ ಯೋಗ್ಯತೆಗೆ ಕಡಿಮೆಯೆಂದು ಅವಳಿಗೆ ತೋರಹತ್ತಿತು.

ಸರಳಾ ತನ್ನ ಕೋಣೆಯ ಪಲ್ಲಂಗದಮೇಲೆ ಕುಳಿತುಕೊಂಡು ದೀರ್ಘ ವಿಚಾರ ಮಾಡತೊಡಗಿದಳು.

ಅವಳ ಮುಖ ಬಾಡಿ ಬಕ್ಕಲಾಗಿತ್ತು.

ಭವಿಷ್ಯದ ಚಿಂತೆಯ ಕೇಷೆಗಳು ಅಲ್ಲಿ ಮೂಡಿದ್ದವು.

ಅವಮಾನಶಲ್ಯದಿಂದ ಅವಳು ಹತಳಾದವಳೂ ಆಗಿದ್ದಳು.

" ಮಾತು ಮುಗಿದು ಹೋದಬಳಿಕ ಮತ್ತೇನು ದೀರ್ಘ ವಿಚಾರ ಮಾಡುತ್ತೀಯೆ ? ಅತ್ತಿಗೆಯರು ತಮ್ಮಿಂದ ತಪ್ಪಾಯಿತೆಂದು ಕಾಲು ಹಿಡಿಯಲು ಬಂದಿದ್ದರು.

" ಗುಟ್ಟು ರಟ್ಟಾಯಿತೆಂದು ಅವರು ಏನು ಬೇಕಾದ್ದೂ ಮಾಡಬಲ್ಲರು. ನನ್ನಿಂದ ಅವರೊಡನೆ ಒಂದೇ ಪಂಕ್ತಿಯಲ್ಲಿ ಕುಳಿತು ಒಂದು ಗುಟುಕು ನೀರು ಕುಡಿಯಲು ಇನ್ನುಮೇಲೆ ಸಾಧ್ಯವಿಲ್ಲ. ಈ ಮನೆ ನನ್ನ ಮನೆಯಾಗುವ ವರೆಗೆ ನಾನು ಇಲ್ಲಿ ಇರುವದೇ ಬೇಡ. ಈ ದಿನ ಈಗಲೇ ನನ್ನನ್ನು ತವರುಮನೆಗೆ ಕಳಿಸಿಬಿಡಿರಿ. ಈ ಮನೆ ನನ್ನದಾದಾಗ ನಾನು ಬರುತ್ತೇನೆ.

ಸರಳಾ ದೃಢನಿರ್ಧಾರದಿಂದ ಹೇಳಿದಳು.

" ನಿನ್ನ ವ್ಯಥೆಯನ್ನು ನಾನು ಅರ್ಥಮಾಡಿಕೊಳ್ಳಬಲ್ಲೆ. ಆದರೆ ಸುಮ್ಮನೆ ಹರವೆಯಾಗಬಾರದಷ್ಟೆ.

" ನಿಮ್ಮ ಅತ್ತಿಗೆಯರ ಪುಣ್ಯದಿಂದ ನಿಮ್ಮ ಮನೆತನದ ಹರವೆಯು ನಾಕಷ್ಟು ಆಗಿದೆ.

" ಮರ್ಯಾದೆಗೆಟ್ಟ ಹೆಂಗಸರು ನಮ್ಮ ಮನೆಯ ಮರ್ಯಾದೆಯನ್ನೇ ಕಳೆದರು.

" ಇಂತಹರ ಜತೆಯಲ್ಲಿ ನಾನು ಸರ್ವಥಾ ಇರಲಾರೆ. ಇವತ್ತು ಕಳ್ಳಿಯಾದ ನನ್ನನ್ನು ನಾಳೆ ಕೊಲೆಗಡತಿಯನ್ನಾಗಿ ಮಾಡಲೂ ಹೇಸದ ಹೆಂಗಸರು ಇವರು. ನನಗೆ ಇವರ ಪರಲು ಹರಿದುಕೊಳ್ಳಬೇಕಾಗಿದೆ.

" ಇದರಿಂದ ಅಣ್ಣನಿಗೆ ವ್ಯಥೆಯಾಗುತ್ತದೆ ಸರಳಾ!

" ದೊಂಬರ ನಾಗಿಯ ಮನೆಗೆ ಮನೆಯ ಚಿನ್ನವನ್ನು ಸಾಗಿಸುವಾಗ ವ್ಯಥೆಯಾಗದ ನಿಮ್ಮ ಅಣ್ಣಂದಿರಿಗೆ ನಾನು ಹೋದರೆ ಏನೂ ವ್ಯಥೆಯಾಗುವದಿಲ್ಲ. ಆದರೂ ಅದರ ಪರಿವೆಯನ್ನು ನಾನು ಇಡಲಾರೆ. ಈ ಹೊತ್ತು ತಾವು ಮುದಿಗಂಡಸರಾಗಿ ಯೋಗ್ಯವಿಚಾರ ಮಾಡದೆ ನನ್ನ ಮೇಲೆಯೇ ಹರಿಹಾಯ್ದರು. ಇದು ಹಿರಿಯತನದ ಲಕ್ಷಣವೇನು. ನೀವು ಅಣ್ಣ-ತಮ್ಮ ಲೋಲಾಡಿರಿ. ನಾನು ಈ ಮನೆಯಲ್ಲಿ ಒಂದು ಕ್ಷಣ ಸಹ ನಿಲ್ಲಲಾರೆ."

ಸರಳಾ ಚಟ್ಟನೆ ಎದ್ದು ಮಕ್ಕಳನ್ನು ಕೂಗಿ ಕರೆದಳು.

ಅತ್ಯಂತ ಸಮೃದ್ಧಿಯೂ, ಸಮೀಚೀನವೂ ಆದ ಅತ್ತೆಯ ತುಂಬಿದ ಮನೆಯನ್ನು ಸರಳಾ ನಿಂತ ಕಾಲಮೇಲೆ ಬಿಡಲು ಸಿದ್ಧಳಾದಳು.

ವಿಠ್ಠಲನು ಅವಳನ್ನು ತಡೆಯಲಿಲ್ಲ.

ಅವಳು ನೇರವಾಗಿ ದೇವರ ಮನೆಗೆ ಹೋಗಿ ನಮಸ್ಕಾರ ಮಾಡಿದಳು. ಅಲ್ಲಿಯೇ ಇದ್ದ ಕರಡಗಿಯೊಳಗಿಂದ ಕುಂಕುಮ-ಅರಿಷಣಗಳನ್ನು ದೇವರಿಗೆ ಏರಿಸಿ ತಾನೂ ಒಂದು ಬಟ್ಟು ಇಟ್ಟುಕೊಂಡು ಹೊರಬಿದ್ದಳು.

ಹೊರಗೆ ಗಾಡಿ ಸಿದ್ಧವಾಗಿ ನಿಂತಿತ್ತು.

ಸರಳಾ ಯಾರನ್ನೂ ಮಾತಾಡಿಸಲಿಲ್ಲ. ಕಾಶೀಬಾಯಿ ಅವಳ ಅವತಾರವನ್ನು ನೋಡಿ,

" ಎಲ್ಲಿಗೆ ಹೊರಟೆಯೆ ? " ಎಂದು ಕೇಳಿದಳು.

" ಹೊರಡುವಾಗ ಎಲ್ಲಿಗೆ ಎಂದು ಕೇಳಿದರೆ ಹೊರಟ ಕೆಲಸವಾಗು

ವದಿಲ್ಲ. ನಾನು ಎಲ್ಲಿಬೇಕಾದಲ್ಲಿ ಹೋಗುತ್ತೇನೆ. ಗೌಡರ ಮರ್ಯಾದೆಯ ಮಹಲಿನಲ್ಲಿ ಕಳ್ಳ-ಕಾಕರರು ಇರಬಾರದಷ್ಟೆ!

ಕಾಶೀಬಾಯಿ ತುಟಿ ಕಚ್ಚಿಕೊಂಡಳು.

ಕಾಂತಾಬಾಯಿ ಕೋಣೆಯಲ್ಲಿ ಕುಳಿತು ಇದೆಲ್ಲವನ್ನೂ ನೋಡುತ್ತಿದ್ದಳು.

ಭೀಮರಾಯನಿಗೆ ಇದು ಗೊತ್ತಾದರೆ ತನ್ನ ಹೆಣವೇ ಮಲಗುವದೆಂಬ ಚಿಂತೆಯಲ್ಲಿ ಅವಳ ಮೈ ಜೋರಾಗಿ ಬೆವರತೊಡಗಿತ್ತು.

ನಾಲಿಗೆ ಒಣಗಿಹೋಗಿತ್ತು.

ಸರಳಾ ನಿರ್ಧಾರದ ಹೆಜ್ಜೆಯನ್ನು ಚಕ್ಕಡಿಯಲ್ಲಿಟ್ಟು ಗಂಡನಿಗೆ ಹೇಳಿದಳು,

"ನಾನು ಬರುವವರೆಗೆ ನನ್ನ ಕೋಣೆಯಲ್ಲಿ ಯಾರನ್ನೂ ಬಿಡಬೇಡಿರಿ. ಬಂಗಾರದ ಚೈನನ್ನು ಮಾರಿದವರು ನನ್ನ ನಾಲ್ಕು ಸೀರೆಗಳನ್ನು ಮಾರದೇ ಬಿಟ್ಟಾರೆ?

ಕಾಶೀಬಾಯಿಗೆ ಈ ಮಾತು ಕೇಳಿಸಿತು.

ಅವಳು ಲಟಿಕು ಮುರಿದಳು.

## ೧೪

ಗೌಡರ ಮನೆಯಲ್ಲಿ ಭಾರೀ ಪ್ರಮಾಣದ ಬಡಿದಾಟವಾಯಿತೆಂದೂ, ವಿಠ್ಠಲಗೌಡನು ಹಿರಿಯ ಅಣ್ಣನ ಮೇಲೇ ಕೈಮಾಡಿದನೆಂದೂ, ಇದರ ಪರಿಣಾಮವಾಗಿ ಕಿರಿಯ ಸೊಸೆ ಮನೆಬಿಟ್ಟು ಕೂಡಲೇ ಹೊರಟುಹೋಗ ಬೇಕಾಯಿತೆಂದೂ ಹಳ್ಳಿಗೆ ಹಳ್ಳಿಯೇ ಪಿಸುಪಿಸು ಮಾತಾಡತೊಡಗಿತು.

ಇನ್ನು ಸ್ವಲ್ಪ ದಿನಗಳಲ್ಲಿಯೇ ತುಂಬಿದ ಮನೆ ತುಣುಕಾಗುವದು, ಕಟ್ಟಿಟ್ಟ ಮಾತೆಂದು ಎಲ್ಲರೂ ಊಹಿಸತೊಡಗಿದರು.

ಸರಳಾ ಮನೆಬಿಟ್ಟು ಹೋದ ದಿನ ಆ ಮನೆಯಲ್ಲಿ ಗಂಭೀರ ವಾತಾವರಣವೇ ನೆಲಸಿತು. ಅವಳ ನಿರ್ಣಯಕ್ಕಾಗಿ ಎಲ್ಲರಿಗೂ ಖೇದವೆನ್ನಿಸ ತೊಡಗಿತು.

ಮನೆ ಭಣಭಣ ಸುರಿಯತೊಡಗಿತು.

ಬಳವಂತಗೌಡ ಕೋಣೆಯಲ್ಲಿ ಕುಳಿತುಕೊಂಡವನು ಅಲ್ಲಿಯೇ ಸ್ಥಾಪಿತವಾಗಿಬಿಟ್ಟನು.

ಅವನ ಮುಂದೆ ಹಿಂದಿನ ದಿನಗಳ ಸ್ಮರಣೆಯ ಸುಳಿಯೊಂದು ತೇಲಿ ಬಂದಿತು. ಅಣ್ಣತಮ್ಮಂದಿರಲ್ಲಿ ಹರಿಯುತ್ತಿರುವ ಶುದ್ಧ ರಕ್ತದ ಪರಿಶುದ್ಧತೆಯ ಹಿಂದಿನ ಸ್ಮರಣೆ ಇಂದಿನದನ್ನು ನೆನೆದು ಪರಿತಪಿಸಹತ್ತಿತು.

ಅಂದು,

ಅಣ್ಣತಮ್ಮಂದಿರು ಜೀವಪ್ರಾಣವಾಗಿದ್ದರು. ಜೀವನದ ಹೊಸ್ತಿಲಲ್ಲಿ ಪ್ರೀತಿಯ ಮೂರ್ತಿಗಳಾಗಿದ್ದರು. ಒಬ್ಬರನ್ನೊಬ್ಬರು ಬಿಟ್ಟು ಎಲ್ಲಿಗೂ ಹೋಗುತ್ತಿರಲಿಲ್ಲ. ಏನೂ ತಿನ್ನುತ್ತಿರಲಿಲ್ಲ. ಒಂದೇ ಹಾಸಿಗೆಯಲ್ಲಿ ಮಲಗುತ್ತಿದ್ದರು.

ತಿಂದು ಆಡುವದು, ನಕ್ಕು ನಲಿಯುವದು ಸಾಮೂಹಿಕವಾಗಿಯೇ ನಡೆಯುತ್ತಿತ್ತು.

ಹಳ್ಳಿಯಿಂದ ಒಂದು ಅರ್ಧಮೈಲಿನಲ್ಲಿಯೇ ಇರುವ ಸಿದ್ಧೇಶ್ವರ ಜಾತ್ರೆಗೆ ಇದೇ ಹಳ್ಳಿಂ ೀ ಶ್ರಾವಣದ ಕೊನೆಯ ದಿನ ಹೋಗುವದು ಆ ಹಳ್ಳಿಯ ಪರಿಪಾಠ. ಆ ದಿನ ವಿಠ್ಠಲನಿಗೆ ತುಸು ದೇಹಾಲಶ್ಯವಾಗಿದ್ದರಿಂದ ಅವನು ಮನೆಯಲ್ಲಿಯೇ ಉಳಿಯಬೇಕಾಯಿತು. ಭಾವೂರಾಯರು ಉಳಿದ

ವರಿಗೆಲ್ಲ ದುಡ್ಡು ಕೊಟ್ಟು ಜಾತ್ರೆಗೆ ಕಳುಹಿದರು.

ತಮ್ಮನು ಜಾತ್ರೆಗೆ ಬರುವಂತಿಲ್ಲವೆಂಬ ಕಳವಳ ಎಲ್ಲರನ್ನೂ ಭಾದಿಸುತ್ತಿತ್ತು. "ನಾನು ಬರತೀನಿ ಅಣ್ಣಾ ! ನನ್ನನ್ನೂ ಕರೆದುಕೊಂಡು ಹೋಗು! ಎಂದ ಅವನ ದನಿ ಬಾಳಣ್ಣನ ಅಂತರಾಳವನ್ನೇ ಕೊರೆದಿತ್ತು. ಆದರೇನು ಜಡ್ಡಿನ ತಮ್ಮನನ್ನು ಹೇಗೆ ಕರೆದುಕೊಂಡು ಹೋಗುವದು ?

ಇವರು ಹೋದ ಅರ್ಧತಾಸಿನಲ್ಲಿ ವಿಠ್ಠಲನು ಹಾಸಿಗೆಯ ಮೇಲೆ ಇಲ್ಲವೆಂದು ಭಾವೂರಾಯರಿಗೆ ತಿಳಿದುಬಂದದ್ದರಿಂದ ಅವರು ಗಡಬಡಿಸಿದರು. ಕೂಡಲೇ ಆಳುಮಗನನ್ನು ಕೂಗಿ ವಿಠ್ಠಲನು ಕಣ್ಣು ತಪ್ಪಿಸಿಕೊಂಡು ಜಾತ್ರೆಗೆ ಹೋಗಿರುವನೆಂದು, ಬಳವಂತನಿಗೆ ಈ ಸಂಗತಿಯನ್ನು ಹೇಳಿ ಇಬ್ಬರನ್ನೂ ಕರೆದುಕೊಂಡು ಬರಬೇಕೆಂದೂ ತಾಕೀತುಮಾಡಿ ಆಳನ್ನು ಅಟ್ಟಿದರು.

ಬಣ್ಣಬಣ್ಣದ ಬುಗುರೆಗಳ ರಾಶಿಯನ್ನೂ, ನುತ್ತುಜೋಕಾಲಿಯ ಸೌಂದರ್ಯವನ್ನೂ ಅನುಭವಿಸುತ್ತ ಬಾಳಣ್ಣ ಜಾತ್ರೆಯ ಗದ್ದಲದಲ್ಲಿ ನಿರತನಾಗಿದ್ದನು. ಆ ಮಟ್ಟಿಗೆ ಅವನು ತಮ್ಮ ವಿಠ್ಠಲನನ್ನು ಮರೆತಿದ್ದನು. ಭೀಮಣ್ಣನೊಡನೆ ನಗಚಾಟಿಕೆಯನ್ನು ಆಡುತ್ತ ವಿನೋದದಿಂದ ಕಾಲ ಕಳೆಯತೊಡಗಿದನು.

ಆ ವೇಳೆಗೆ ಆಳುಮಗನು ಬಂದು,

"ವಿಠ್ಠಲಗೌಡರು ಎಲ್ಲಿದ್ದಾರೆ ?" ಎಂದು ಕೇಳಿದನು.

"ನಿನ್ನ ತಲೆಯೇನು ಹೀಗೆ ಕೇಳಿದರೆ. ತಮ್ಮನಿಗೆ ಜಡ್ಡು ಆದದ್ದರಿಂದ ಅವನು ಮನೆಯಲ್ಲಿಯೇ ಉಳಿದಿದ್ದಾನೆ.

"ಅವರು ಮನೆಯಲ್ಲಿ ಇಲ್ಲ ಗೌಡರೆ ?

"ಏನು ! ತಮ್ಮನು ಹಾಸಿಗೆ' ಮೇಲೆ ಇಲ್ಲವೆ ?

"ದಣಿಯರು ನಿಮ್ಮನ್ನು ನೋಡಿಕೊಂಡುಬರಲು ಅಟ್ಟಿದ್ದಾರೆ. ನೀವು ಮನೆಯಿಂದ ಹೊರಬಿದ್ದ ಅರ್ಧತಾಸಿನಲ್ಲಿ ಚಿಕ್ಕಗೌಡರು ಮಾಯವಾಗಿದ್ದಾರೆ.

"ಇನ್ನೇನು ಗತಿ ಭೀಮಣ್ಣಾ ! ವಿಠ್ಠಲನನ್ನು ಹೇಗೆ ಹುಡುಕುವದು ?

"ಎಲ್ಲ ಅಂಗಡಿಯ ಬೀದಿಗಳನ್ನೂ, ಜೂಜಾಡುವ ನಾಲನ್ನೂ, ಮಿಠಾಯಿಯ ರಸ್ತೆಯನ್ನೂ ಹುಡುಕಾಡಿ ದೇವರ ಗುಡಿಯನ್ನೂ ನೋಡೋಣ ಇಲ್ಲಿ ಎಲ್ಲಿಯಾದರೂ ನಮ್ಮನ್ನು ಹುಡುಕುತ್ತ ನಿಂತಿದ್ದಾನಾದೀತು ?

ಭೀಮಣ್ಣ ಧೈರ್ಯ ಹೇಳಿದ.

ಎಲ್ಲರೂ ಬೇರೆಬೇರೆ ದಿಕ್ಕುಗಳಲ್ಲಿ ಹುಡುಕಾಡಲು ಹೊರಟರು.

ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ತೇರುಹೊರಡಲು ಸಿದ್ಧವಾಗಿತ್ತು. ಅಲ್ಲಿ ಕರಡೆಯ ಮಜಲು ಕೇಸರಿಟ್ಟು ಸಾವಿರಾರು ಜನರನ್ನು ಆರ್ಕಷಿಸತೊಡಗಿತ್ತು. ತಲೆಯಮೇಲೆ ಬಣ್ಣದ ಟೊಪ್ಪಿಗಳನ್ನು ಹಾಕಿಕೊಂಡ ಅಳ್ಳೊಳ್ಳಿಯ ಅಡ್ಡ ಸೋಗುಗಳು ಟೊಂಕಕ್ಕೆ ಕಟ್ಟಿಕೊಂಡ ಗಂಟೆಗಳನ್ನು ಗಿಣಿಗಿಣಿಮಾಡಿ ನೆರೆದವರನ್ನೆಲ್ಲ ನಗಿಸುತ್ತಿದ್ದರು.

ಬಾಳಣ್ಣನಿಗಾಗಲಿ, ಭೀಮಣ್ಣನಿಗಾಗಲಿ ಈ ಕಡೆಗೆ ಮನಸ್ಸು ಹರಿಯ ದಾಯಿತು. ಅವರು ಹುಡುಕಿ ಹುಡುಕಿ ಬೇಸತ್ತರು. ನಿರಾಶರಾದರು. ತಮ್ಮನು ಕಳೆದುಹೋದನೆಂದು ಅವರು ಭಾವಿಸಿದಾಗ ಅವರ ಕಣ್ಣಲ್ಲಿ ನೀರು ತುಂಬಿದವು. ಅವರ ಎದೆ ಡುಬುಡುಬು ಹಾರತೊಡಗಿತು.

ಒಂದೇಸವನೇ ಈ ಅಣ್ಣತಮ್ಮಂದಿರು ಮನೆಯ ಕಡೆಗೆ ಓಡತೊಡ ಗಿದರು.

ಊರಲ್ಲಿಯ ಜನ ಕಾಯಿಕಪ್ಪುರಗಳನ್ನು ಹಿಡಿದುಕೊಂಡು ರಥದ ದರ್ಶನಕ್ಕೆ ಹೊರಟಿರುವಾಗ ಇವರು ಮನೆಯ ಕಡೆಗೆ ಧಾವಿಸ ಹತ್ತಿದರು.

" ಅಪ್ಪಾ ! ವಿಠ್ಯಾ ಜಾತ್ರೆಯಲ್ಲಿ ಇಲ್ಲವೇ ಇಲ್ಲ !

ಎನ್ನುತ್ತ ಪಡಸಾಲೆಗೆ ಬಂದಾಗ ವಿಠ್ಠಲ ಅಲ್ಲಿಯೇ ಕುಳಿತು ಹಣ್ಣನ್ನು ತಿನ್ನುತ್ತಿದ್ದನು.

ವಿಠ್ಠಲ ನೆರೆಮನೆಯಲ್ಲಿ ಸೆಡವಿನಿಂದ ಕುಳಿತಿದ್ದೇ ಈ ಗೊಂದಲಕ್ಕೆ ಕಾರಣವಾಗಿತ್ತು.

ಮಕ್ಕಳು ಹೀಗೆ ಕೂಡಲೇ ತಮ್ಮನಿಗಾಗಿ ಹೊರಟುಬರಬಹುದೆಂಬ ಕಲ್ಪನೆ ಗೌಡರಿಗೆ ಬರಲಿಲ್ಲ.

ಹಾಗೆ ಅನ್ನಿಸಿದ್ದರೆ ಅವರು ಇನ್ನೊಂದು ಆಳನ್ನು ವಿಠ್ಠಲನು ಮನೆ ಯಲ್ಲಿಯೇ ಇರುವನೆಂದು ಹೇಳಿಕಳಿಸಬಹುದಾಗಿತ್ತು,

ಅಣ್ಣತಮ್ಮಂದಿರಲ್ಲಿ ಮೂಡಿನಿಂತ ಈ ಅಪ್ರತಿಮ ಪ್ರೀತಿಯನ್ನು ನೋಡಿದ ಭಾವೂರಾಯರ ಕಣ್ಣುಗಳು ತೇವವಾದವು. ಅವರು ಭರದಿಂದ ಅವರನ್ನು ಅಪ್ಪಿಕೊಂಡು,

" ಜಾತ್ರೆಯನ್ನು ಅರ್ಧಕ್ಕೆ ಬಿಟ್ಟುಬಂದಿರಾ ? " ಎಂದರು.

" ಈ ಮಾರಾಯ ಎಲ್ಲಿಯೂ ಸಿಗಲಿಲ್ಲ.

" ಇಲ್ಲಿಯೇ ಇದ್ದವನು ಅಲ್ಲಿ ಹೇಗೆ ಸಿಗಬೇಕು.

ಭಾವೂರಾಯರು ನಕ್ಕು ಕೇಳಿದರು.

“ಅಂದಿನ ವಿಠ್ಠಲನೇ ಇಂದಿಗೂ ಇರುವನು. ಅಂದಿನ ನಾನೇ ಅವನಿಗೆ ಇಂದಿಗೂ ಅಣ್ಣನಾಗಿಯೇ ಇರುವೆನು ?

ಆದರೆ,

ಎಷ್ಟು ಭೇದ ?

ದೇವರೆ! ಗೌಡರ ಮನೆಯಲ್ಲಿ ಇದು ಹೇಗೆ ಉಂಟಾಯಿತು ? ಇದು ಹೀಗೆಯೇ ಸಾಗುವದು ಎಷ್ಟು ದಿನ ? ಎಲ್ಲರೂ ಸ್ವಾರ್ಥಿಗಳಾಗಿರುವಾಗ ಯಾರಿಗು ಏನು ಅನ್ನುವದಿದೆ ? ತಮ್ಮನನ್ನು ವಂಚಿಸಲು ನಾನು ಸಿದ್ಧ ನಾಗಿದ್ದೇನೆ. ಅಣ್ಣನಿಂದ ದೂರಸಿಡಿಯಲು ಅವನು ಆತುರನಾಗಿದ್ದಾನೆ. ಇದಕ್ಕೆಲ್ಲ ಯಾರು ಕಾರಣರು ? ಹೆಂಗಸರು ! ಕವಡೆಯ ಕಿಮ್ಮತ್ತಿನ ಹೆಂಗಸರೇ ನಮ್ಮ ಅಂತಃಕರಣವನ್ನು ಕೆಡಿಸಲು ಕಾರಣರು. ನಾವು ಇವರ ಕೈಯಲ್ಲಿ ಸೋಲಬೇಕೆ ? ಹೆಂಗಸರ ಸೂತ್ರದ ಗೊಂಬೆಗಳಾಗಿ ಮನೆತನವನ್ನು ತುಂಡುಮಾಡಬೇಕೆ ? ಇದು ಶುದ್ಧ ಅಪಕೀರ್ತಿ, ಅನ್ಯಾಯ.

ಈ ಮಾತನ್ನು ತಮ್ಮಂದಿರಿಗೆ ನಾನು ಬಿಂಬಿಸಲಿಕ್ಕೆ ಬೇಕು. ಈ ಹೆಂಗಸರನ್ನು ಅಂಕಿತದಲ್ಲಿಟ್ಟು ಎಲ್ಲರೂ ಪ್ರೀತಿಯಿಂದ ಒಂದೇ ಮನೆಯಲ್ಲಿ ಬಾಳುವೆ ಸಾಗಿಸಬೇಕು.

ಇದು ಸಾಧ್ಯವಿದೆ. ನಾನೇ ಹೋಗಿ ಸರಳಾನನ್ನು ಕರೆತರುತ್ತೇನೆ. ಅವಳ ಕಾಲುಹಿಡಿದು ಕರೆತರುತ್ತೇನೆ. ನಾಲ್ಕು ಪ್ರತಿಷ್ಠಿತರಲ್ಲಿ ಅವಮಾನ ವಾಗುವದು ಬೇಡ.

ಈ ಭಾವದ ಸುಳಿ ಬರುತ್ತಲೇ ಅವನು ವಿಠ್ಠಲನನ್ನು ಕೂಗಿದ.

ವಿಠ್ಠಲನಲ್ಲಿಯೂ ಆಗಲೇ ಪಶ್ಚಾತ್ತಾಪ ಮೂಡಿತ್ತು. ಅತ್ತಿಗೆಯರು ಮಾಡಿದ್ದು ಅಕ್ಷಮ್ಯ ಅಪರಾಧವೆಂದು ಅರಿವಾದರೂ ಅವಗನ್ನು ಹಾಗೆ ತೆಗಳಬೇಕಾಗಿರಲಿಲ್ಲ ಎಂಬ ಭಾವನೆ ಅವನಲ್ಲಿ ಬಂದಿತು. ಅಲ್ಲದೆ ಹೆಂಡತಿ ಹೀಗೆ ಒಮ್ಮೆಲೇ ಎದ್ದುಹೋದದ್ದು ಸರಿಯಾದ ನಡತೆಯಾಗಲಿಲ್ಲವೆಂದು ಅವನ ಅಂತರಂಗ ಕೂಗಿ ಕೂಗಿ ಹೇಳಹತ್ತಿತು.

ಅವನಿಗೆ ಏನಾದರೂ ಮಾಡಿ ಅಣ್ಣನೊಡನೆ ಮಾತಾಡಿ ಅವನ ಕ್ಷಮೆ ಕೇಳಿಕೊಳ್ಳಬೇಕೆಂಬ ತವಕವು ಮೂಡತೊಡಗಿತ್ತು. ಅದೇ ವೇಳೆಯಲ್ಲಿ ಅಣ್ಣನು ಕರೆದದ್ದು ಅವನಿಗೆ ಬೇಕಾದ ಮಾತೇ ಆಯಿತು.

“ನಾನು ಅತ್ತಿಗೆಯರಿಗೆ ಹೀಗೆ ಅನ್ನಬಾರದಾಗಿತ್ತು ಅಣ್ಣ! ನನ್ನಿಂದ

ತಪ್ಪಾಯಿತು. ಅವರು ನನಗೆ ತಾಯಿಯ ಸಮಾನರು. ನೀನು ನನ್ನನ್ನು ಕ್ಷಮಿಸಬೇಕು.

ವಿಠ್ಠಲ ಗದ್ಗದಿತನಾಗಿ ಹೇಳಿದ.

" ಈ ಹೆಂಗಸರಿಂದ ಈ ಮನೆಗೆ ಅನರ್ಥ ತಪ್ಪಿದ್ದಲ್ಲ ತಮ್ಮ. ಇವರನ್ನು ಮಣಿಸಲು ನಾವು ಗಟ್ಟಿಗರಾಗಬೇಕು. ಇವರು ಮಾಡಿದ್ದು ಸಾಮಾನ್ಯ ಅಪರಾಧವಲ್ಲ. ತಪ್ಪು ತಾವು ಮಾಡಿ ಪಾಪ! ಸರಳಾನನ್ನು ಓಡಿಸಿದರು. ಇದರಿಂದ ಕೇಶವರಾಯರು ಏನು ತಿಳಿದುಕೊಳ್ಳಬಹುದು ನೋಡು? ನಾವು ಅವರ ಮುಂದೆ ತಲೆ ತಗ್ಗಿಸಬೇಕಾಯಿತು.

" ಅದಕ್ಕೆ ಅವಳೂ ಹೊಣೆಯಾಗಿದ್ದಾಳೆ ಬಿಡು.

" ಸುಮ್ಮಸುಮ್ಮನೆ ಕಳ್ಳತನದ ಅಪರಾಧವನ್ನು ಯಾರು ಹೊತ್ತು ಕೊಂಡಾರು ಬಿಡು.

" ಆ ಮಾತು ಹೋಗಲಿ ಬಿಡು. ಅಣ್ಣ!

" ಆದರೆ ಸರಳಾ ಬರಬೇಕಲ್ಲ.

" ಬಂದೇಬರುತ್ತಾಳೆ ಅದಕ್ಕೇನು?

" ಅವಳನ್ನು ಕರೆಯಲು ನಾನೇ ಹೋಗುತ್ತೇನೆ.

" ಪತ್ರವನ್ನು ಕೊಟ್ಟು ಆಳುಮಗನನ್ನು ಕಳಿಸಿದರಾಯಿತು.

" ಬೇಡ. ವಿಷಯ ಸೂಕ್ಷ್ಮವಾಗಿದೆ. ಕೇಶವರಾಯರ ಮುಂದೆ ನಾನು ಎಲ್ಲವನ್ನೂ ಹೇಳಿ ಅವರ ಮನಸ್ಸಿನ ದುಗುಡವನ್ನು ಕಳೆಯುವದು ನನ್ನ ಕರ್ತವ್ಯವಾಗಿದೆ.

" ಆಗಲಿ ಹಾಗಾದರೆ! ನಾಳೆ ಹೋದರಾಯಿತು.

" ನಾಳೆ ಬೇಡ ತಮ್ಮ! ಈಗಲೇ ಹೊರಡುತ್ತೇನೆ, ಇಂತಹ ಮಾತು ಗಳಲ್ಲಿ ಕಾಲವಿಳಂಬವಾಗಕೂಡದು.

" ನಿನ್ನ ಇಷ್ಟ. ಈಗಲೇ ಗಾಡಿಗೆ ಸವಾರಿ ಹಾಕಿಸುತ್ತೇನೆ.

ಇಷ್ಟು ಹೇಳಿ ವಿಠ್ಠಲನು ಕೋಣೆಯಿಂದ ಬರುವ ಹೊತ್ತಿಗೆ ತಲೆ ಬಾಗಿಲಿನ ಮುಂದೆ ಸುತ್ತಲೂ ಗುಡಾರವನ್ನು ಕಟ್ಟಿದ ಸವಾರಿಯ ಎತ್ತಿನ ಬಂಡಿಯೊಂದು ಬಂದು ನಿಂತಿತು.

ವಿಠ್ಠಲನಿಗೆ ಎತ್ತುಗಳ ಪರಿಚಯ ಸಿಕ್ಕಿತು. ಹಳ್ಳಿಯ ಬೀಡಾರದ ಅವರ ಆಸ್ತಿಗಳೇ ಅವಾಗಿದ್ದವು.

ಗಾಡಿಯ ಮೂಕಿಯ ಮೇಲೆ ಕುಳಿತ ಬೀರನ ಪರಿಚಯವೂ ವಿಠ್ಠಲನಿಗೂ ಹತ್ತಿತು.

ಅವನ ಮುಖ ಸಪ್ಪಗಾಗಿತ್ತು.

" ಭೀಮಣ್ಣ ಬಂದನೇನೋ ಬೀರಾ !

ವಿಠ್ಠಲ ಕೂಗಿ ಕೇಳಿದನು.

" ಒಳಗೆ ಮಲಗಿದ್ದಾರೆ ದಣಿ ! ಜರಾ ಅವರ್ನ ಹಣ್ಣಹಣ್ಣುಮಾಡಿದೆ. ಕೆಂಡಕೆಂಡ ಆಗಿದೆ ಮೈ.

ವಿಠ್ಠಲ ಒಂದೇ ನೆಗತಕ್ಕೆ ಎಲ್ಲ ಪಾವಟಿಗೆಗಳನ್ನೂ ದಾಟಿ ಗಾಡಿಯ ಹತ್ತಿರ ಧಾವಿಸಿ ಹೋದ.

ಗಾಡಿಯಲ್ಲಿ ಭೀಮಣ್ಣ ನರಳುತ್ತ ತೇಕುತ್ತಿದ್ದ. ಮೈ ಕಾದು ಕೆಂಡ ವಾಗಿತ್ತು. ಕಣ್ಣು ಕೆಂಪಗಾಗಿದ್ದವು. ತಲೆ ಒಂದೇ ಸವನೆ ಸಿಡಿಯುತ್ತಿದೆ ಎಂದು ಭೀಮಣ್ಣ ಸನ್ನೆಮಾಡಿ ಹೇಳಿದ.

ಆಯುಷ್ಯದಲ್ಲಿ ಭೀಮಣ್ಣನಿಗೆ ಇದು ಮೊದಲನೆಯ ದೇಹಾಲಸ್ಯ ವಾಗಿತ್ತು.

ಅವನು ಭಯಂಕರವಾಗಿ ನರಳುತ್ತಿದ್ದನು.

ಎಲ್ಲರೂ ಕೂಡಿ ಭೀಮಣ್ಣನನ್ನು ಸಾವಧಾನದಿಂದ ಕೆಳಗಿಳಿಸಿ ಕೋಣೆ ಯಲ್ಲಿ ಮಲಗಿಸಿದರು.

ಭೀಮಣ್ಣನಿಗೆ ಕೂಡಲೇ ಮೂರ್ಛೆ ಬಂದಿತು.

ಎಲ್ಲರೂ ಗಾಬರಿಯಾದರು. ಹೌಹಾರಿದರು. ಹಳ್ಳಿಯ ವೈದ್ಯನು ಬಂದು ಏನೋ ಔಷಧಕೊಟ್ಟು ಹೇಳಿದನು. 'ಏನೇ ಆಗಲಿ ಪಟ್ಟಣದ ಡಾಕ್ಟರರನ್ನು ಕರೆತನ್ನಿರಿ ! ಇದು ವಿಷಮಶೀತವೆಂದು ಕಾಣುತ್ತದೆ.

ಹೆಣ್ಣುಮಕ್ಕಳು ಕಂಗೆಟ್ಟರು. ಕಾಂತಾಬಾಯಿ ಒಂದೇ ಸವನೇ ಅಳ ಹತ್ತಿದ್ದಳು.

" ನೀವು ಗಾಬರಿಯಾಗುವ ಕಾರಣವಿಲ್ಲ ಅತ್ತಿಗೆ. ನಾನು ಈಗಲೇ ಹೋಗಿ ಡಾಕ್ಟರರನ್ನು ಕರೆತರುತ್ತೇನೆ.

ವಿಠ್ಠಲ ಕಾಂತಾ ಅತ್ತಿಗೆಯನ್ನು ಸಮಾಧಾನಮಾಡಿದ.

" ನಿಮ್ಮ ಕಾಲು ಬೀಳುತ್ತೇನೆ. ವಿಠ್ಠಲಭಾವಜಿ ! ಹೇಗಾದರೂ ಮಾಡಿ ನನ್ನ ಕುಂಕುಮ ಉಳಿಸಿರಿ !

" ಯಾವ ದೊಡ್ಡ ಬೇನೆಯೆಂದು ಇಂಥ ಮಾತಾಡುವಿರಿ ಬಿಡಿರಿ.

ಪಟ್ಟಣದಲ್ಲಿ ಸತ್ತವರನ್ನು ಬದುಕಿಸುವ ಮಹಾ ಡಾಕ್ಟರುಗಳಿದ್ದಾರೆ. ಯಾವ ಕಾಳಜಿ ಮಾಡಬೇಡಿರಿ.

"ಭಾವಜಿ ! ಭಾವಜಿ ! ನನ್ನನ್ನು ಕ್ಷಮಿಸಿರಿ.

"ಹಳೆಯರಾಡಿಯನ್ನು ತಗೆಯುವ ಸಮಯವಲ್ಲ ಸರಿಯರಿ. ಭೀಮಣ್ಣ ನಿಮ್ಮ ಪತಿಯಾಗಿರುವಂತೆ ನನ್ನ ಪ್ರೀತಿಯ ಅಣ್ಣನಾಗಿದ್ದಾನೆ.

ಕಾಂತಾಬಾಯಿಗೆ ಸಮಾಧಾನವಾಯಿತು. ಅವಳು ಹೋಗಿ ಪತಿಯ ಮಗ್ಗುಲಲ್ಲಿ ಕುಳಿತುಬಿಟ್ಟಳು.

ಮನೆಯಲ್ಲಿ ಆಗಾಗ ನಡೆಯುತ್ತಿದ್ದ ರಂದಿ ರಸಕಸಿಗಳಿಂದ ಏನೋ ಅನರ್ಥವು ಕಾದಿದೆ ಎಂದು ತಿಳಿದ ಬಳವಂತಗೌಡನಿಗೆ ತಮ್ಮನ ಜಡ್ಡು ಅಸಹ್ಯಕರವಾದ ಅಶುಭವನ್ನೇ ಸೂಚಿಸಹತ್ತಿತು. ಮನೆತನದ ಆಧಾರ ಸ್ತಂಭನಾದ ತಮ್ಮನಿಗೆ ಕಾಹಿಲೆ ಬಂದದ್ದು ಹಿರಿಯಗೌಡನನ್ನು ಹೌಹಾರಿಸಿತು. ಅವನು ವಿಠ್ಠಲನ ಕೈಯಲ್ಲಿ ಹಣಕೊಡುತ್ತ ಹೇಳಿದನು.

"ಹಾಗೇ ರಾಜೂವಿಗೆ ತಂತಿ ಮಾಡಿಬಿಡು.

"ಇಷ್ಟಕ್ಕೆಲ್ಲ ಯಾಕೆ ಅಣ್ಣಾ ! ಸುಮ್ಮನೆ ಅವನಿಗೆ ಇಲ್ಲದ ಗಾಬರಿಯಾದೀತು.

"ಅವನೂ ಬರಲಿ ವಿಠ್ಠಲ. ತಂತಿ ಮಾಡಿಬಿಡು.

ಬಳವಂತಗೌಡನ ಕಣ್ಣಲ್ಲಿ ನೀರು ಸೂಸಿತು.

ಅಣ್ಣನ ಕಣ್ಣಹನಿಗಳನ್ನು ಕಂಡು ವಿಠ್ಠಲನಿಗೆ ಕಸವಿಸಿಯಾಯಿತು.

"ಆಗಲಿ ಅಣ್ಣಾ ! ತಂತಿಯನ್ನು ಕಳಿಸುತ್ತೇನೆ. ಆದರೆ ನೀನೇಕೆ ಇಷ್ಟು ಗಾಬರಿಯಾಗಿದ್ದಿ ? ಜ್ವರ ಏರಿದ ಮಾತ್ರಕ್ಕೆ ಇಷ್ಟು ಗಾಬರಿಯಾದರೆ ಮುಂದೇನು ? ನಾಲ್ಕು ದಿನಗಳಲ್ಲಿ ಕಡಿಮೆಯಾಗುತ್ತದೆ.

"ಭೀಮಣ್ಣನಿಗೆ ಎಂದೂ ರೋಗ ಬಂದಿರಲಿಲ್ಲ ತಮ್ಮ!

"ಎಂದೂ ಬರದಿದ್ದ ಮಾತ್ರಕ್ಕೆ ಎಂದೆಂದೂ ಬರಬಾರದೆಂದು ಇದೆಯೇನು ? ಮನುಷ್ಯನಾದವನಿಗೆ ರೋಗ ಬರದೇ ಗಿಡುಗಂಟಿಗಳಿಗೆ ಬರಬೇಕೇನು ?

"ನಿನ್ನ ಧೈರ್ಯ ನನಗಿಲ್ಲ ತಮ್ಮ! ಬೇಕಾದಷ್ಟು ಹಣ ಖರ್ಚಾಗಲಿ ಒಬ್ಬರನ್ನು ಬಿಟ್ಟು, ಹತ್ತು ಡಾಕ್ಟರುಗಳನ್ನು ಕರೆದುಕೊಂಡು ಬಾ.

ವಿಠ್ಠಲನು ಕುದುರೆಯ ಬಂಡಿಯಲ್ಲಿ ಪಟ್ಟಣದ ಕಡೆಗೆ ಧಾವಿಸಿದನು.

ಬಳವಂತಗೌಡನು ಭಯಂಕರವಾಗಿ ನರಳುತ್ತಿದ್ದ ತಮ್ಮನ ಕೋಣೆಯಲ್ಲಿ ಬಂದನು.

" ತಮ್ಮಾ!

" ಭೀಮರಾಯನು ಅದೆಷ್ಟು ಪ್ರಯಾಸಬಟ್ಟರೂ ಕಣ್ಣು ತೆರೆಯುವದು ಅಸಾಧ್ಯವಾಯಿತು. ಅವನು ಮುಖ ಕಿವಿಚ ಹತ್ತಿದನು.

ಬಳವಂತಗೌಡನು ಅವನ ಹತ್ತಿರ ಹೋಗಿ,

" ಏನಾಗುತ್ತಿದೆಯೋ ಭೀಮಣ್ಣ! ಮುಖ ಹೀಗೇಕೆ ಮಾಡುತ್ತೀ! ಎಂದಾಗ ಅವನ ಕಣ್ಣೀರು ಹರಿಯತೊಡಗಿತು.

ಭೀಮರಾಯನು ತನಗೆ ಏನೂ ಆಗಿಲ್ಲವೆಂದೂ, ಜ್ವರದ ತಾಪದಿಂದ ಹೀಗಾಗುತ್ತಿದೆಯೆಂದೂ ಅಣ್ಣನಿಗೆ ಸಮಾಧಾನ ಹೇಳಬೇಕಾಯಿತು.

ಡಾಕ್ಟರರು ಬರುವವರೆಗೆ ಬಳವಂತಗೌಡನಿಗೆ ಸಮಾಧಾನವಾಗುವುದು ಸಾಧ್ಯವಿರಲಿಲ್ಲ.

ಒಂದು ವಾರದವರೆಗೆ ಭೀಮರಾಯನ ಏರಿದ ಜ್ವರ ಇಳಿಯಲೇ ಇಲ್ಲ. ಇವು ಮುದ್ದತಿನ ಜ್ವರವೆಂತಲೂ, ಗಾಬರಿಯಾಗುವ ಕಾರಣವಿಲ್ಲವೆಂದೂ ಪಟ್ಟಣದಿಂದ ಬಂದ ಇಬ್ಬರು ಡಾಕ್ಟರರು ದಿನಾಲು ಹೇಳುತ್ತಿದ್ದರೂ ಬಳವತ ಗೌಡನಿಗೆ ಸಮಾಧಾನವೇ ಇರುತ್ತಿರಲಿಲ್ಲ. ಅವನಿಗೆ ತಮ್ಮನು ಕೂಡಲೇ ಎದ್ದು ಓಡಾಡುವದು ಬೇಕಾಗಿತ್ತು. ಏಳುದಿನದ ಮುದ್ದತು ಹದಿನಾಲ್ಕು ದಿನಗಳವರೆಗೆ ನಾಗಿ ಅದು ಇಪ್ಪತ್ತೊಂದು ದಿನದವರೆಗೆ ಮುಂದುವರೆಯಿತು.

ಕೊಬ್ಬಿದ ಆನೆಯಹಾಗಿದ್ದ ಭೀಮರಾಯನು ಆಡಿನ ಮರಿಯಾದನು. ಎಲುಬಿನ ಹಂದರವಾಗಿಬಿಟ್ಟನು.

ಜ್ವರ ' ನಾರ್ಮಲ 'ಕ್ಕೆ ಬಂದು ಒಂದುವಾರವಾಗುವವರೆಗೆ ಯಾರಿಗೂ ಸಮಾಧಾನವಿರಲಿಲ್ಲ. ಈಗ ಎಲ್ಲರೂ ಹಾಯಾಗಿ ಉಸಿರು ಬಿಡತೊಡಗಿದರು.

ರಾಜಣ್ಣ ಅಣ್ಣನ ಸೇವೆಯಲ್ಲಿ ನಿರತನಾಗಿದ್ದ. ಈ ಇಪ್ಪತ್ತು ದಿನಗಳ ವರೆಗೆ ಅವನು ಒಂದು ದಿನವೂ ಕಣ್ಣುತುಂಬಾ ನಿದ್ದೆಮಾಡಿರಲಿಲ್ಲ. ಇದು ಸಾಮಾನ್ಯವಾಗಿ ಎಲ್ಲರ ಅವಸ್ಥೆಯೂ ಆಗಿತ್ತು. ಬಳವಂತಗೌಡನು ಹೆಸರಿಗೆ ಮಾತ್ರ ತನ್ನ ಕೋಣೆಯಲ್ಲಿ ಮಲಗಿದರೂ ರಾತ್ರಿಯಲ್ಲಿ ಹತ್ತೆಂಟುಸಾರಿ ಬಂದು ತಮ್ಮನ ಕೋಣೆಯಲ್ಲಿ ಇಣಿಕೆ ಹೋಗುತ್ತಿದ್ದ.

ಅಣ್ಣನ ಈ ಅಂತಃಕರಣವನ್ನು ಕಂಡು ರಾಜಣ್ಣನ ಕುತ್ತಿಗೆಯ ನರಗಳು ಬಿಗಿದು ಬರುತ್ತಿದ್ದವು.

ದಕ್ಷನಾದ ಅಣ್ಣನ ಬೇನೆಯ ಸುದ್ದಿಯನ್ನು ಕೇಳಿ ಸುಧಾ ಧಾವಿಸಿ ಬಂದಿದ್ದಳು. ರಾಜಣ್ಣನನ್ನು ಕಾಣದೆ ಅವಳಿಗೆ ಬಹಳ ದಿನಗಳಾಗಿದ್ದವು. ಆದರೆ ಈ ವರೆಗೆ ಅವನೊಡನೆ ಮಾತನಾಡಲು ಅವಕಾಶವೇ ಸಿಕ್ಕಿರಲಿಲ್ಲ.

ಮನೆಯಲ್ಲಿ ಯಾವುದೋ ಒಂದು ಹೊಸ ವಾತಾವರಣ ಬಂದಹಾಗೆ ರಾಜಣ್ಣನಿಗೆ ಅನ್ನಿಸಿತ್ತು. ಅತ್ತಿಗೆಯರಲ್ಲಿ ಪರಸ್ಪರ ಪರಕೀಯ ಭಾವನೆ ತುಳುಕಾಡುತ್ತಿರುವದನ್ನು ಅವನು ಕಂಡಿದ್ದ. ಅಲ್ಲದೆ ಅವನು ವಿಠ್ಠಲನ ಹೆಂಡತಿಯನ್ನು ಎಲ್ಲಿಯೂ ಕಾಣಲಿಲ್ಲ. ಆ ಬಗ್ಗೆ ವಿಠ್ಠಲನನ್ನು ಒಮ್ಮೆ ಕೇಳಿದಾಗ "ಆಮೇಲೆ ಎಲ್ಲವನ್ನೂ ಹೇಳುತ್ತೇನೆಂದು" ಮಾತು ಜಾರಿಸಿದ್ದ.

ರಾಜಣ್ಣನಲ್ಲಿ ಹೊಸಭಾವಬಂದು ಕಾತರ ಉಂಟಾಯಿತು.

ಭೀಮಣ್ಣ ಎದ್ದು ಓಡಾಡುವಂತಾಗಲು ಸುಧಾ ಹೊರಡಲು ಸಿದ್ಧವಾದಳು. ಮುನ್ನಾದಿನ ರಾಜಣ್ಣನನ್ನು ತೋಟದಲ್ಲಿ ಬೇಕೆಂದೆ ಸಂಧಿಸಿ ಕೇಳಿದಳು.

" ಗೌಡರ ಮನೆಯ ಅವಸ್ಥೆಯನ್ನು ನೋಡಿದೆಯಾ ಅಣ್ಣಾ! ಚುಕ್ಕಾಣಿ ಇಲ್ಲದ ಹಡಗದಂತೆ ತೆರೆ ತೂರಿದತ್ತ ತೇಲತೊಡಗಿದೆ. ಅತ್ತಿಗೆಯರಲ್ಲಿ ತಾಳ ಮೇಳವಿಲ್ಲ. ಅಣ್ಣಂದಿರು ಅವರ ತಾಳದಂತೆ ಕುಣಿಯತೊಡಗಿದ್ದಾರೆ. ವಿಠ್ಠಲಣ್ಣನ ಹೆಂಡತಿ ಮನೆಬಿಟ್ಟು ಹೋದದ್ದು ಮನೆತನಕ್ಕೆ ಅವಮರ್ಯಾದೆಯಲ್ಲವೆ ?

" ಅಂದಹಾಗೆ ಸರಳಾ ಅತ್ತಿಗೆ ಒಮ್ಮಿಲೆ ಎದ್ದು ಹೋದಳೇಕೆ ಸುಧಾ!

" ಈ ಅತ್ತಿಗೆಯರು ಅವಳನ್ನು ಇರಗೊಡಲಿಲ್ಲ. ಅವಳನ್ನು ಉರಿಸಿಕೊಳ್ಳುತ್ತ ಏಳು ಕೆರೆಯನೀರು ಕುಡಿಸುತ್ತಿದ್ದರು.

" ಆದರೆ ಅಣ್ಣನ ಬೇನೆಯನ್ನು ಕೇಳಿಯೂ ಅವಳು ಬರಬೇಕಾಗಿತ್ತು. ಅವಳ ತಂದೆ ಕೇಶವರಾಯರಿಗಾದರೂ ಬುದ್ಧಿ ಬರಬೇಕಾಗಿತ್ತು.

" ಆದರೆ ಅವಳಿಗೆ ಸುದ್ದಿಯನ್ನು ಯಾರು ತಿಳಿಸಿದ್ದಾರೆ ?

" ಅವಳಿಗೆ ಇದು ಗೊತ್ತೇಇಲ್ಲವೆ ?

" ಗೊತ್ತಿದ್ದರೆ ಅವಳು ಒಂದು ದಿನದ ಮಟ್ಟಿಗಾದರೂ ಬಂದು ಹೋಗಬಹುದಾಗಿತ್ತು.

" ಇದು ನಿಜವಾಗಿಯೂ ಖೇದದಾಯಕವಾದ ಸುದ್ದಿ ತಂಗಿ. ಆದರೆ

ಈ ಪರಿಸ್ಥಿತಿಯ ಅರಿವಾದರೂ ಇದರ ಸಮಸ್ಯಾಪರಿಹಾರವನ್ನೇಕೆ ಕಂಡು ಹಿಡಿಯಬಾರದು ?

" ಬೇರೆಯಾಗುವದು ಅಣ್ಣಂದಿರ ಮನಸ್ಸಿನಲ್ಲಿ ಇಲ್ಲವೆಂಬಂತೆ ತೋರುತ್ತದೆ.

" ಹೀಗೆಯೇ ಕೂಡಿ ಕಚ್ಚಾಡಿ ಮನೆತನವನ್ನು ಹದಗೆಡಿಸಿದರೆ ಏನು ಬಂದಹಾಗಾಯಿತು.

" ಗೌಡರ ಮನೆತನ ಅನೇಕ ತಲೆಮಾರುಗಳಿಂದ ಏಕತ್ರ ಕುಟುಂಬ ವಾಗಿಯೇ ಬಾಳಿದೆ ಅಣ್ಣಾ !

" ಸಮಾಜದಲ್ಲಿ ಒಂದೇ ನೀತಿ ಕೊನೆಯವರೆಗೂ ಬಾಳಬೇಕೆಂಬ ನಿಯಮವಿಲ್ಲ ತಂಗಿ! ಹಳತು ಹೊಸತಕ್ಕೆ ದಾರಿ ಮಾಡಿಕೊಡುತ್ತಲೇ ಇರುತ್ತದೆ. ಸಮಾಜದಲ್ಲಿ ತ್ರಿಕಾಲಾಬಾಧಿತ ಶಾಶ್ವತ ನಿಯಮುಗಳು ಇರ ಲಾರವು. ಪರಿಸ್ಥಿತಿಗೆ ತಕ್ಕಹಾಗೆ ಮಾರ್ಪಾಟು ಆಗುತ್ತಿರುವದು ನಿಯಮ. ಅಂದು ಒಂದೇ ಕುಟುಂಬದಲ್ಲಿದ್ದವರ ಪರಿಸ್ಥಿತಿಯೇ ಬೇರೆ ಇತ್ತು. ಈಗಿನ ಮಾತೇ ಬೇರೆಯಾಗಿದೆ. ಸುಮ್ಮನೆ ಅಜ್ಜನ ಉಡದಾರವೆಂದು ಕೊರಳಿಗೆ ನೇತುಹಾಕಿಕೊಳ್ಳುವದರಲ್ಲಿ ಯಾವ ಅರ್ಥವೂ ಇಲ್ಲ.

" ಈಗಲಾದರೂ ಅವರು ಕೂಡಿ ಇದ್ದಾರೆಂದು ಹೇಳುವಂತಿಲ್ಲ ರಾಜಣ್ಣಾ! ಮನಸ್ಸು ಮುರಿದುಹೋಗಿವೆ. ಹೃದಯಗಳಲ್ಲಿ ಬಿರುಕು ಬಿಟ್ಟವೆ. ಒಂದೇ ಮನೆಯಲ್ಲಿದ್ದ ಮಾತ್ರಕ್ಕೆ ಅವರಲ್ಲಿ ಒಂದೇ ಮನವಿರುವ ದೆಂದು ಹೇಳಬರುವದಿಲ್ಲ.

" ಇದಕ್ಕೆ ಒತ್ತಾಯದ ಮಾಘಸ್ನಾನವೇ ಕಾರಣವಾಗಿದೆ. ಇದರಿಂದ ಯಾರಿಗೂ ಸುಖವಿಲ್ಲ. ಸುಖವಿಲ್ಲದ ಮನೆ ಕಾರವ ನರಕ. ಆ ಮನೆ ಬಾಳಲಾರದು. ಕೂಡಿ ಕಚ್ಚಾಡುವದಕ್ಕಿಂತ ಬೇರೆಬೇರೆಯಾಗಿ ಅಂತಃಕರಣ ವನ್ನು ಉಳಿಸಿಕೊಳ್ಳುವದು ಸಾಧ್ಯವಿದ್ದರೆ ಹಾಗೇಕೆ ಮಾಡಬಾರದು ?

" ನನಗೂ ಹಾಗೇ ತೋರುತ್ತದೆ. ಆದರೆ ಇದನ್ನು ಭೀಮಣ್ಣನ ಮುಂದೆಯಾಗಲಿ, ಬಾಳಣ್ಣನ ಮುಂದೆಯಾಗಲಿ ಯಾರು ಹೇಳಬೇಕು ?

ನಾನೇ ಹೇಳುತ್ತೇನೆ ಅದಕ್ಕೇನು? ನನ್ನ ಮನೆತನವು ಚೆನ್ನಾಗಿ ಬಾಳಬೇಕು. ಅದಕ್ಕೆ ಈ ತುಂಬಿದ ಮನೆ ಅಡ್ಡ ಬರಹತ್ತಿದೆ. ಛಿದ್ರಛಿದ್ರವಾಗಿ ಬಾಳುವುದಕ್ಕಿಂತ ಚೆನ್ನಾಗಿ ಬಾಳುವದು ನನಗೆ ಬೇಕಾಗಿದೆ. ಪರಸ್ಪರ ಸಂದೇಹ, ಮೋಸ, ವಂಚನೆ, ಗತ್ತುಗಾರಿಕೆ ಇವೆಲ್ಲ ಯಾವ ಮನೆತನವನ್ನೂ

ಮುಂದುತರಲಾರವು. ವಿವಿಧತೆಯಲ್ಲಿ ಒಗ್ಗಟ್ಟನ್ನು ಪಾಲಿಸಿದರೆ ಆ ಒಗ್ಗಟ್ಟಿಗೆ ಒಂದು ಬೆಲೆ ಬರುತ್ತದೆ. ಕೇವಲ ಅಭಿಮಾನಕ್ಕಾಗಿ ಒಗ್ಗಟ್ಟಿನ ಸರೋವರದಲ್ಲಿ ಮೀಯುತ್ತ ಕುಳಿತರೆ ಆ ನೀರು ಕೊಳೆತು ನಾರುತ್ತದೆ. ಇದು ನೀರಿಗೂ ಅಪಾಯ; ಅದರಲ್ಲಿ ಮೀಯುವವರಿಗೂ ಅಪಾಯ.

ಆ ವೇಳೆಗೆ ಇವರನ್ನು ಹುಡುಕುತ್ತ ವಿಠ್ಠಲನೂ ತೋಟಕ್ಕೆ ಬಂದ. ಅವನನ್ನು ನೋಡಿದ ಕೂಡಲೇ ರಾಜಣ್ಣ ನೇರವಾಗಿ ಕೇಳಿದ,

"ಅತ್ತಿಗೆ ಒಮ್ಮೆಲೇ ಎದ್ದು ಹೋದರೇಕೋ ಅಣ್ಣ?

"ಸುಧಾ ನಿನಗೆ ಎಲ್ಲವನ್ನೂ ಹೇಳಿರಬೇಕಲ್ಲ.

"ಆದರೆ ಇದು ಯೋಗ್ಯವೆಂದು ನನಗೆ ತೋರಲಾರದು. ನೀನು ಅತ್ತಿಗೆಗೆ ಬುದ್ಧಿಹೇಳಿ ನಿಲ್ಲಿಸಿಕೊಳ್ಳಬೇಕಾಗಿತ್ತು. ಇದರಿಂದ ಮನೆಯಲ್ಲಿ ವಿರಸದ ವಾತಾವರಣವೇ ಉಂಟಾಯಿತು.

"ಇದಕ್ಕೆ ಪರಿಸ್ಥಿತಿಯೇ ಕಾರಣವಾಗಿದೆ. ತಮ್ಮ! ಕಳ್ಳತನದ ಆರೋಪ ಹೊರಿಸಿಕೊಂಡು ಕೂಡಿಬಾಳುವೆ ಮಾಡುವದು ಸಾಧ್ಯವೇ ಹೇಳು.

"ಸುಳ್ಳು ಆರೋಪವೆಂದಿಗೂ ಸಿದ್ಧವಾಗುತ್ತಿರಲಿಲ್ಲ.

"ಆದರೂ ನನ್ನ ಹೆಂಡತಿ ಅಪಾದಿತಳಂತೆ ಮುಖ ಕೆಳಗೆಮಾಡಿಕೊಂಡು ತಿರುಗಬೇಕಾಗಿತ್ತು ಅಲ್ಲವೆ?

"ಈಗ ನಮ್ಮ ಮನೆತನದ ಮುಖವೇ ಕೆಳಗಾಗಲಿಲ್ಲವೇ? ಅತ್ತೆಯ ಮನೆಯಲ್ಲಿ ಜಗಳಮಾಡಿ ತವರುಮನೆ ಸೇರುವದು ಮರ್ಯಾದೆಯ ಲಕ್ಷಣವೇನು ಹೇಳು?

"ಮನೆಯ ಚಿನ್ನವನ್ನು ಡೊಂಬರ ಮನೆಗೆ ಸಾಗಿಸುವದು ಮಾತ್ರ ಮರ್ಯಾದೆಯ ಲಕ್ಷಣ. ಇದ್ದು ಬಿದ್ದ ಕೈಗೆ ಸಿಕ್ಕ ಬಂಗಾರವನ್ನೂ, ಬೆಳ್ಳಿಯ ಆಭರಣಗಳನ್ನೂ, ಕಾಳುಕಡಿಗಳನ್ನೂ ತವರುಮನೆಗೆ ಸಾಗಿಸುವದು ಮಾತ್ರ ಗೌರವದ ಲಕ್ಷಣ. ಮನೆಯ ರಿಪೇರಿಯಾಗದಿದ್ದರೂ ಸರಿ; ನೀಲಿಯ ಮನೆಯನ್ನು ಗಚ್ಚು-ಸಿಮೆಂಟುಗಳಿಂದ ಭದ್ರಮಾಡಿ ನಾಲ್ಕು ಜನರಲ್ಲಿ ನಗೆಗೇಡಾಗುವುದು ಮಾತ್ರ ಗೌರವದ ಲಕ್ಷಣ. ಸೋಮಪ್ಪನ ಕೈಯಲ್ಲಿ ಕಾರುಭಾರ ಕೊಟ್ಟು ಹೊಲಗಳ ಅಗಾವು ಲಾವಣಿ ವಸೂಲಮಾಡುವದೂ ಒಳ್ಳೆಯ ಲಕ್ಷಣ.

ನಮ್ಮ ಮನೆಯ ಮುಖ ನನ್ನ ಹೆಂಡತಿ ತವರುಮನೆಗೆ ಹೋಗಿದ್ದರಿಂದ ಕೆಳಗಾಗಲಿಲ್ಲ ರಾಜೂ! ನಿನ್ನ ಅಣ್ಣಂದಿರ, ಅತ್ತಿಗೆಯರ ಅಕೃತ್ಯ

ಗಳಿಂದ ಅಧೋವದನವಾಗಿದೆ. ಪುಸ್ತಕದ ವಾತಾವರಣದಲ್ಲಿ ಆದರ್ಶ ಲೋಕವನ್ನು ಸೃಷ್ಟಿಸುತ್ತಿರುವ ನೀನು ಸತ್ಯಲೋಕಕ್ಕೆ ಇಳಿದುಬಂದಾಗ ಎಲ್ಲ ಅರ್ಥವಾದೀತು.

"ಭೀಮಣ್ಣನು ಹೀಗೆ ಮಾಡುವನೆಂದು ನನಗೆ ಅನ್ನಿಸಿರಲಿಲ್ಲ ವಿಠ್ಠಣ್ಣ. ಈ ಡೊಂಬರ ನಾಗಿಯ ಪ್ರಕರಣವನ್ನು ಕೇಳಿ ನಿಜವಾಗಿಯೂ ನನಗೆ ದುಃಖವಾಗಿದೆ.

"ಗೌಡರ ಮನೆಯ ಭೂಮಿ ಬಿರಿತುಹೋಗಿದೆ ರಾಜೂ! ಬಿರುಕು ಬಿಟ್ಟಿದೆ. ಈ ಬಿರುಕುಗಳ ಬಾಯಿಗೆ ಹಾಳುಮಣ್ಣಿನ ರಾಡಿಯನ್ನು ಸವರು ವದರಲ್ಲಿ ಅರ್ಥವಿಲ್ಲ.

"ಸಧ್ಯ ಈ ವಿಚಾರ ಇಷ್ಟಕ್ಕೆ ನಿಲ್ಲಲಿ ಅಣ್ಣ! ನಾನೂ ಈ ಬಗ್ಗೆ ಆಗಲೇ ವಿಚಾರಿಸಿದ್ದೇನೆ. ಸಧ್ಯ ಅಣ್ಣನು ಇನ್ನೂ ತುಂಬಿಕೊಂಡಿಲ್ಲ. ಇಂಥ ಸ್ಥಿತಿಯಲ್ಲಿ ಬಿರುಗಾಳಿಯನ್ನು ಎಬ್ಬಿಸುವದು ತರವಲ್ಲ. ನಾವೆಲ್ಲ ಒಂದೇ ಗಿಡದ ನಾಲ್ಕು ಟೊಂಗೆಗಳಾಗಿದ್ದೇವೆ. ತಾಯಿಬೇರು ಒಂದೇ ಆಗಿದೆ. ಇದನ್ನು ನಾವು ಮರೆಯದೆ ಅಂತಃಕರಣವನ್ನು ಉಳಿಸಿಕೊಳ್ಳೋಣ. ನಮ್ಮ ನಮ್ಮ ವ್ಯವಹಾರಗಳನ್ನು ನಾವು ಸಾಗಿಸಿಕೊಳ್ಳಲು ಅವಕಾಶವನ್ನು ಪಡೆ ಯೋಣ. ಇದರಿಂದ ಎಲ್ಲರಲ್ಲಿಯೂ ಜವಾಬುದಾರಿ ಮೂಡುವುದಲ್ಲದೆ ವ್ಯಕ್ತಿ ವಿಕಾಸಕ್ಕೆ ಅನುವು ದೊರಕುವದು. ಏಕತ್ರಕುಟುಂಬದ ಮಾತು ಅಭಿ ಮಾನದ ಮಾತಾದೀತೇ ವಿನಾ ಆದರ್ಶವಾಗಲಾರದು. ಇದನ್ನು ಎಲ್ಲರೂ ಕೂಡಿ ವಿಚಾರಿಸೋಣ. ಈವರೆಗೆ ನಗುನಗುತ್ತ ಸೋದರರಾಗಿ ಬಾಳಿದ್ದೇವೆ. ಈಗಲೂ ನಗುನಗುತ್ತ ಸೋದರರಾಗಿಯೇ ಒಂದೇ ಬಳ್ಳಿಯ ನಾಲ್ಕು ಹೂವು ಗಳಾಗಿ ಬಾಳೋಣ. ನಾವು ಬೇರೆಯಾದರೂ ಬಂಧುಗಳೇ.

"ಆದರೆ ಈ ಮಾತನ್ನು ಭೀಮಣ್ಣನಾಗಲಿ, ಬಾಳಣ್ಣನಾಗಲಿ ಒಪ್ಪುವ ಸಂಭವವಿಲ್ಲ.

"ಅವರಿಗೆ ಎಲ್ಲರೂ ಕೂಡಿಯೇ ಸಾಯಬೇಕೆಂಬ ಅಪೇಕ್ಷೆ ಇರುವ ದೇನು? ಮನಮುರಿದ ಮನೆಯಲ್ಲಿ ಹೃದಯದ ಬೆಸುಗೆ ಹೇಗೆ ನಿಂತೀತು? ಮನೆಮುರಿದರೆ ಮತ್ತೆ ಕಟ್ಟಬಹುದು; ಮನಮುರಿದರೆ ಹೇಗೆ ಸಾಧ್ಯ ಹೇಳು?

"ಇನ್ನೊಂದು ಮಾತು ರಾಜೂ!

"ಈಗ ಯಾವ ಮಾತೂ ಬೇಡ. ಭೀಮಣ್ಣನೊಡನೆ ನಾನು ಮಾತಾಡುತ್ತೇನೆ. ನಿನ್ನ ಹೆಂಡತಿ ಹೋದ ಸುದ್ದಿ ಅವನಿಗೆ ತಿಳಿದಿದೆಯೇನು?

"ನಾನಾಗಿ ಏನೂ ತಿಳಿಸಿಲ್ಲ. ಆದರೆ ಬಾಳಣ್ಣನು ನಿನ್ನೆ ಅವನೊಡನೆ ಏನೋ ಏಕಾಂತವಾಡುತ್ತಿದ್ದನು. ಬಹುಶಃ ಇದೇ ಮಾತೇ ಇರಬಹುದೆಂದು ನನ್ನ ತರ್ಕವಾಗಿದೆ.

"ಅಣ್ಣ ಅವಸರವನ್ನೇ ಮಾಡಿದನು. ದುರ್ಬಲವಾದ ಹೃದಯದಲ್ಲಿ ಉದ್ವೇಗದ ಮಾತನ್ನು ಬಿಂಬಿಸುವದು ಘಾತುಕವಾಗಿದೆ.

"ಭೀಮಣ್ಣನಲ್ಲಿ ಉದ್ವೇಗ ತುಂಬಬಹುದೆ?

"ಅವನನ್ನು ನೀನು ಚೆನ್ನಾಗಿ ತಿಳಿದುಕೊಂಡಿಲ್ಲ ವಿಠ್ಠಲಣ್ಣ! ಅವನು ಕಠಿಣನಾಗಿರುವಷ್ಟೇ ಹೂವಾಗಿದ್ದಾನೆ. ಅವನ ಅಂತಃಕರಣ ನಿಸ್ಸೀಮವಾಗಿದೆ.

"ಆ ಮಾತಿಗೆ ಯಾರೂ ಇಲ್ಲವೆನ್ನುವದಿಲ್ಲ.

ಸುಧಾ ಹೇಳಿ ಚಟ್ಟನೆ ಎದ್ದಳು.

ಮರುದಿನಾ ಸುಧಾ ಅತ್ತೆಯ ಮನೆಗೆ ಹೊರಟುಹೋದಳು. ಹೋಗುವ ಮುಂದೆ ರಾಜಣ್ಣನನ್ನು ಪಕ್ಕಕ್ಕೆ ಕರೆದು ಹೇಳಿದಳು,

"ರಾಜಣ್ಣ! ನೀನು ಪಟ್ಟಣಕ್ಕೆ ಹೋಗುವ ಮೊದಲು ನಮ್ಮಲ್ಲಿ ಬಂದು ಹೋಗಬಾರದೇಕೆ?

"ಪ್ರಯತ್ನಿಸುತ್ತೇನೆ. ಆದರೆ ಖಂಡಿತ ಹೇಳಲಾರೆ.

"ಈ 'ಗೌಡರ ಮಗಳ' ಕಥೆಯನ್ನು ನೀನು ಕೇಳಬೇಕು ಅಣ್ಣಯ್ಯ.

ಸುಧಾನ ಕಣ್ಣು ತುಂಬಿದವು.

ರಾಜೂ ಅವಳ ಬೆನ್ನು ಸವರುತ್ತ

"ಮೊದಲು 'ಗೌಡರ ಸೊಸೆ'ಯಂದಿನ ಕಥೆಯನ್ನು ಒಂದು ಹದಕ್ಕೆ ತರಬೇಕಾಗಿದೆ ತಂಗಿ! ನಿನ್ನ ಬಾಳು ಭವ್ಯವೇ ಆಗಿದೆ ಬಿಡು.

ರಾಜೂ ಪಿಸುಮಾತಿನಲ್ಲಿ ಹೇಳಿದನು.

"ನನ್ನ ಬಾಳಿನಷ್ಟು ನನ್ನ ಬಾಳಿನ ಕಥೆಯೂ ಭವ್ಯವಾಗಿದೆ" ಎಂದು ಹೇಳಬೇಕೆಂದ ಸುಧಾ ಹೇಳಲಿಲ್ಲ.

ಅವಳ ಕಣ್ಣುಗಳಿಂದ ಅಶ್ರುಗಳು ಮಾತ್ರ ಪಟ ಪಟ ಉದುರಿದವು.

ರಾಜೂನಿಗೆ ಈ ಕಣ್ಣ ಹನಿಗಳ ಅರ್ಥವಾಗಲಿಲ್ಲ.

ಭಾರವಾದ ಹೃದಯದಿಂದ ತಂಗಿಯನ್ನು ಬೀಳ್ಕೊಟ್ಟನು.

# ೧೫

ಆ ದಿನ ಮುಂಜಾವು ಭೀಮಣ್ಣನ ಕೋಣೆಯೊಳಗಿಂದ ಬಿರುಸಾದ ಮಾತುಗಳು ಬರತೊಡಗಿದವು.

ಅವು ಗಂಡಹೆಂಡಿರ ಮಾತುಗಳಾಗಿದ್ದರಿಂದ ಮೊದಮೊದಲು ಯಾರೂ ಲಕ್ಷ್ಯಕೊಡಲಿಲ್ಲ. ಆದರೆ ಬರಬರುತ್ತ ಮಾತುಗಳು ಏರಿಕೆಯ ಸ್ವರವನ್ನು ತಾಳತೊಡಗಿದವು.

" ನನ್ನ ಅಣ್ಣ-ತಮ್ಮಂದಿರು ನನಗೆ ಮಾಡದಿದ್ದರೆ ನಾನು ಆಗಲೇ ಬೀದಿಯ ಹೆಣವಾಗುತ್ತಿದ್ದೆ. ರಾಜೂ ಪಾಪ ! ಸತ್ತು ಸುಣ್ಣವಾಯಿತು. ವಿಠ್ಠೂ ಸೊರಗಿ ಕಡ್ಡಿಯಾಗಿರುವನು. ಅಣ್ಣನಂತೂ ಹೌಹಾರಿಹೋಗಿರುವನು. ಈ ಮಾತನ್ನು ನಿನ್ನಂಥ ಹೇಸಿ ಮುಂಡೆ ತಿಳಿದುಕೊಳ್ಳಬೇಕಾಗಿತ್ತು, ಭೀಮಣ್ಣನ ಮಾತು

" ಸುಮ್ಮನೆ ಏಕೆ ಬಯ್ಯುತ್ತೀರಿ. ಅವರು ನನ್ನ ಕುಂಕುಮವನ್ನು ನನಗೆ ಉಳಿಸಿಕೊಟ್ಟರು. ಅವರ ಉಪಕಾರವನ್ನು ಹೇಗೆ ಮರೆತೇನು ?

" ಈ ಉಪಕಾರಸ್ಮರಣೆಗಾಗಿಯೇ ವಿಠ್ಠಲನ ಹೆಂಡತಿಯನ್ನು ಹೊರಗೆ ಹಾಕಿದಿರಾ ? ಮನೆಯಲ್ಲಿ ರಸಕಸಿಯನ್ನು ಮಾಡಿ ಮನೆಯನ್ನು ಮುಳ್ಳುಹಾಸಿಗೆ ಮಾಡಿದ ನಿಮ್ಮನ್ನು ಸೀಳಿಬಿಡಬೇಕು.

" ಸುಮ್ಮನೆ ಒದರಾಡಿದರೆ ಏನು ಬಂದಹಾಗಾಯಿತು. ಅವಳನ್ನು ನಾನೇಕೆ ಹೊರಗೆ ಹಾಕಲಿ ? ಒಂದೇ ಮನೆಯಲ್ಲಿ ಒಗೆತನವನ್ನು ಮಾಡುವ ಹೆಣ್ಣಲ್ಲ ಆ ಕೇಶವರಾಯನ ಮಗಳು ! ಅವಳಿಗೆ ಸ್ವತಂತ್ರಬೇಕು. ಅದಕ್ಕೆ ಈ ಆಟ ಹೂಡಿದ್ದಾಳೆ.

" ಇದು ನಿನಗೂ ಬೇಕಾಗಿದೆ. ನನ್ನ ಮುಂದೆ ಪಾಟು ಬಡಿಯ ಬೇಡ. ನಾನು ನಿನಗೆ ಈಗ ಕೊನೆಯ ಸಲ ಹೇಳುತ್ತೇನೆ. ಇದು ಎಂದಿಗೂ ಸಾಧ್ಯವಿಲ್ಲ. ನೀನು ಮತ್ತೆ ಬೇರೆಯಾಗುವ ಮಾತು ಎತ್ತಿದರೆ ನಿನ್ನ ಟೊಂಕವನ್ನೇ ಮುರಿಯುತ್ತೇನೆ. ಬಂಗಾರದಂಥ ಸೋದರರನ್ನು ಕಳೆದು ಕೊಳ್ಳಲು ನಾನು ಸಿದ್ಧನಿಲ್ಲ. ಬದಮಾಷ್ ಹೆಂಗಸರು ನೀವು ! ನೀವು ಈ ಮನೆಯನ್ನು ತುಂಬುವ ಮೊದಲೇ ನಾವು ಈ ತುಂಬಿದ ಮನೆಯಲ್ಲಿ ಒಂದೇ ಆತ್ಮದ ನಾಲ್ಕು ದೇಹಗಳಾಗಿ ಬಾಳಿದ್ದೇವೆ. ನೀವು ಈ ಮನೆಯಲ್ಲಿ

ಬಾಳಲಿಕ್ಕೆ ಬಂದವರಲ್ಲ ಬೆಂಕೀ ಹಚ್ಚಲು ಬಂದವರು. ಅಣ್ಣತಮ್ಮಂದಿರ ಹೃದಯವನ್ನು ಸೀಳಲು ಬಂದ ಕೇಡಾಳಿಗಳು ನೀವು. ಗೌಡರ ಮನೆಯ ಶಾಪಗಳಾಗಿ ಮನೆತುಂಬಿದ ನೀವು ಸೊಸೆಯರಲ್ಲ; ರಾಕ್ಷಸಿಯರು.

ಭೀಮಣ್ಣ ತೇಕತೊಡಗಿದ.

"ದೇವರು ನಿಮಗೆ ನಾಲಿಗೆ ಕೊಟ್ಟಿದ್ದಾನೆ. ಬಾಯಿ ಕೊಟ್ಟಿದ್ದಾನೆ. ಬೇಕಾದಷ್ಟು ಅನ್ನಿರಿ ನಾವೇಕೆ ಬೇಡವೆನ್ನಲಿ. ಎಲುಬಿಲ್ಲದ ನಾಲಗೆ ಬೇಕಾದತ್ತ ಹೊರಳುತ್ತದೆ.

"ಸರಳಾನನ್ನು ಹೊರಗೆ ಏಕೆ ಹಾಕಿದೆ ಹೇಳು ಹುಚ್ಚುಮುಂಡೆ !

ಧಾವಣಿ ಹಾರುವಂತೆ ಚೀರಿದನು ಭೀಮಣ್ಣ.

"ಅವಳನ್ನು ನಾನೇನು ಹೊರಗೆ ಹಾಕಿಲ್ಲ, ಅವಳೇ ಎದ್ದು ಹೋಗಿದ್ದಾಳೆಂದು ಎಷ್ಟು ಸಾರೆ ಹೇಳಲಿ. ಬೇಕಾದರೆ ನಿಮ್ಮ ಹಿರಿಯ ಅತ್ತಿಗೆಯವರನ್ನು ಕರೆದು ಕೇಳಿರಿ.

"ಓತೀ ಕಾಟಕ್ಕೆ ಬೇಲೀ ಸಾಕ್ಷಿ. ಇಬ್ಬರೂ ಕೂಡಿ ಈ ಮನೆಯನ್ನು ಮೂರಾಬಟ್ಟಿ ಮಾಡಿದಿರಿ.

"ನಾವೇಕೆ ಮೂರಾಬಟ್ಟಿ ಮಾಡೂಣ. ಮಾಡುವವರು ಮಾಡೇ ಮಾಡುತ್ತಾರೆ.

"ಹೆಚ್ಚು ಬಗುಳಿ ನನ್ನ ನೆತ್ತಿಯನ್ನು ಕಾಯಿಸಬೇಡ, ಹೊರಟು ಹೋಗು.

ಇವರ ಹೆಣಾ ಛಂದಾಮಾಡಲಿ. ಯಾರೋ ನಿಮ್ಮ ನೆತ್ತಿಯನ್ನು ತಿಕ್ಕಿದ್ದಾರೆ. ಅವರ ಮನೆ ಹಾಳಾಗಾ !

"ಏನೆನ್ನುತ್ತೀಯೆ !

ಎಂದ ಭೀಮಣ್ಣನು ಚಟ್ಟನೆ ಎದ್ದು ಗೂಟದ ಮೇಲಿರುವ 'ಹಂಟರ' ವನ್ನು ತೆಗೆದುಕೊಂಡು ರಪ್-ರಪ್ ಎಂದು ಹೆಂಡತಿಯನ್ನು ಸೆಳೆಯ ತೊಡಗಿದನು.

"ಅಯ್ಯಯ್ಯೋ ! ಸತ್ತೆ. ಸತ್ತೆ ! " ಎಂದು ಕಾಂತಾಬಾಯಿ, ಬಾಯಿಬಾಯಿ ಬಡಿದುಕೊಳ್ಳಹತ್ತಿದಳು.

ಈ ಆಕ್ರಂದನವನ್ನು ಕೇಳಿದ ರಾಜಣ್ಣನು ಮುಂದುಮಾಡಿದ ಬಾಗಿಲ ವನ್ನು ಧಡಾರೆಂದು ತೆಗೆದು ಅಣ್ಣನ ಕೈಯಲ್ಲಿಯ ಹಂಟರವನ್ನು ಕಸಿದೊಗೆದು ಅವರು ಮಧ್ಯದಲ್ಲಿ ನಿಂತು ಕೇಳಿದನು.

" ಇದೆಲ್ಲ ಏನು ಭೀಮಣ್ಣ ! ಗೌಡರ ಮನೆಯ ಭಾಗ್ಯಲಕ್ಷ್ಮಿಯನ್ನು ಬಾರಕೋಲಿನಿಂದ ಹೊಡೆಯುವದು ನ್ಯಾಯವೆ ?

" ಇವಳು ಭಾಗ್ಯಲಕ್ಷ್ಮಿಯಾಗಿಲ್ಲ ರಾಜೂ, ಇವಳು ಇದಿಲಕ್ಷ್ಮಿಯಾಗಿದ್ದಾಳೆ.

" ಇರಲಿ ಬಿಡು. ಏ ! ವಿಠ್ಠಲಣ್ಣ ! ಕಾಂತಾ ಅತ್ತಿಗೆಯನ್ನು ಕರೆದುಕೊಂಡು ಹೋಗಲು ಹಿರಿ ಅತ್ತಿಗೆಗೆ ಹೇಳು. ಹೂಂ ! ಇಲ್ಲಿಂದ ಹೊರಬೀಳಿರಿ ಅತ್ತಿಗೆ ! ಅಶಕ್ತನಾದ ಅಣ್ಣನ ಆರೋಗ್ಯದೊಡನೆ ಆಟವಾಡುವದು ತರವಲ್ಲ.

" ನಾನೂ ಏನೂ ಅನ್ನಲಿಲ್ಲ ರಾಜಣ್ಣ ಭಾವಜಿ !

" ಇರಲಿ ಹೋಗರಿ. ಅಂತೀನಿ.

ಮುಳುಮುಳು ಅಳುತ್ತಲೇ ಕಾಂತಾಬಾಯಿ ಹೊರಗೆ ಹೋದಳು.

ಅವಳು ಹೊರಗೆ ಹೋದಕೂಡಲೇ ಬಳವಂತರಾಯ ಒಳಗೆ ಬಂದು

" ಸುಮ್ಮನೆ ಏಕೆ ಮನಸ್ಸಿಗೆ ತ್ರಾಸಮಾಡಿಕೊಳ್ಳಬೇಕಾಗಿತ್ತು. ಕಚ್ಚಾಡುವ ಹುಚ್ಚುನಾಯಿಗಳಿಗೆ ಯಾವ ಬೆಲೆ ಇದೆ ಹೇಳು.

" ನಾಯಿಗಳಿಗೆ ಹುಚ್ಚುಹಿಡಿದಿದೆಯೆಂದು ಸುಮ್ಮನೆ ಬಿಟ್ಟರೆ ಅವು ನಮ್ಮ ಕೆನ್ನೆಗಳನ್ನೇ ಕಚ್ಚಬಹುದು.

ತೇಕುತ್ತಲೇ ಭೀಮಣ್ಣ ಹೇಳಿದ.

" ಇವು ಕಚ್ಚುವ ನಾಯಿಗಳಲ್ಲ ಭೀಮು !

" ಅಣ್ಣಾ ! ನೀನು ತಪ್ಪುಭಾವಿಸದಿದ್ದರೆ ಒಂದು ಮಾತನ್ನು ಕೇಳಬೇಕೆನ್ನುತ್ತೇನೆ.

" ಸರಳಾನನ್ನು ನಾನು ಏಕೆ ಹೋಗಗೊಟ್ಟೆನೆಂಬುದೇ ಅಲ್ಲವೆ ?

" ಇದು ಹಿರಿಯನಾದ ನೀನು ಕಣ್ಣುಮುಚ್ಚಿ ನೋಡುತ್ತ ಕುಳಿತುಕೊಳ್ಳುವ ಕೆಲಸವಾಗಿತ್ತೆ ? ಇದು ನಮ್ಮ ಮನೆತನದ ಮರ್ಯಾದೆಯ ಪ್ರಶ್ನೆಯಾಗಿರಲಿಲ್ಲವೆ ?

" ಅವಳಿಗೆ ತವರುಮನಿಯಲ್ಲಿಯಾದರೂ ಸುಖವಾಗಲೆಂದು ಸುಮ್ಮನಿದ್ದೆ." ನಾಲಿಗೆಯನ್ನು ತಡವರಿಸುತ್ತ ಹಿರಿಯಗೌಡ ಹೇಳಿದ.

" ಇದು ಅವ್ಯವಹಾರದ ಮಾತು.

" ಈಗಾದರೂ ಏನಾಯಿತು ? ಸಂಜೆಯ ಮುಂದೆ ನಾನೇ ಹೋಗಿ ಕರೆದುಕೊಂಡು ಬಂದರಾಯಿತಲ್ಲ.

" ಅವಳು ಸಂಜೆಯ ಮುಂದೆ ನನ್ನೊಡನೆ ಪಂಕ್ತಿಯಲ್ಲಿ ಕುಳಿತು ಊಟಮಾಡದಿದ್ದರೆ ನಾನು ಅನ್ನಪ್ರಾಶನವನ್ನೇ ಮಾಡುವದಿಲ್ಲ. ಇದು ನಿಶ್ಚಯ."

ಭೀಮರಾಯ ಆಯಾಸದಿಂದ ದಿಂಬಿಗೆ ಆತು ದೀರ್ಘವಾದ ಉಸಿರನ್ನು ಸೂಸಿದನು.

ಅಲ್ಲಿಯೇ ನಿಂತ ವಿಠ್ಠಲನು ಏನೋ ಮಾತಾಡಬೇಕೆಂದು ಒಂದು ಹೆಜ್ಜೆ ಮುಂದೆ ಬರುತ್ತಲೂ ರಾಜಣ್ಣನ ಕಣ್ಣುಸನ್ನೆ ಅವನನ್ನು ತಡೆಯಿತು.

ರಾಜಣ್ಣ ಭೀಮಣ್ಣನಿಗೆ ಹೇಳಿದ

" ನಾನೇ ಹೋಗಿ ಕರೆದುಕೊಂಡು ಬರುತ್ತೇನೆ. ಅಣ್ಣ ! ನಿನ್ನ ಮಾತು ಶುಭಸೂಚನೆಯೇ ಆಗಿದೆ.

" ಈಗಲೇ ಹೊರಡು ಹಾಗಾದರೆ. ವಿಠ್ಠಲನನ್ನೂ ಕರೆದುಕೊಂಡು ಹೋಗು.

ಎಂದ ಭೀಮಣ್ಣನು ಒಮ್ಮೆಲೆ ಬಿಕ್ಕಿ ಬಿಕ್ಕಿ ಅಳತೊಡಗಿದನು.

" ಅಣ್ಣ ! ಇದೇನಣ್ಣ !

ಎನ್ನುತ್ತ ರಾಜಣ್ಣ ಭೀಮಣ್ಣನನ್ನು ಅಪ್ಪಿಕೊಂಡನು.

ಭೀಮಣ್ಣನಿಗೆ ಆಗಲೇ ಜ್ವರವೇರಿದ್ದವು.

" ಅಣ್ಣ ! ನಿನಗೆ ಮತ್ತೆ ಜ್ವರಬಂದಿವೆ ಅಣ್ಣ ! ನೀನು ಉದ್ವೇಗ ಮಾಡಿಕೊಳ್ಳಬೇಡ. ನೀನು ನಮ್ಮ ಮನೆತನದ ಶಕ್ತಿ ಅಣ್ಣ. ನೀನು ಅತ್ತರೆ ಮನೆತನವೇ ಕಣ್ಣೀರು ಹಾಕೀತು. ಅಳಬೇಡ ನನ್ನಣ್ಣ. ನಾವು ನಿನಗೆ ಮೀರಿದವರಲ್ಲ.

" ನಿನ್ನ ಮನಸ್ಸಿನ ವಿರುದ್ಧ ನಾನು ಏನೂ ಮಾಡುವದಿಲ್ಲ ಭೀಮಣ್ಣ "

ವಿಠ್ಠಲ ಗದ್ಗದಿತನಾಗಿ ಹೇಳಿದನು.

ಭೀಮರಾಯನು ಧೋತರ ಚುಂಗಿನಿಂದ ಕಣ್ಣೀರು ತೊಡೆದುಕೊಂಡು ಒಮ್ಮೆ ಖೇಕರಿಸಿದನು.

" ನೀನು ಹೀಗೆ ಮಾಡಿದರೆ ನನ್ನ ಗತಿಯೇನು ತಮ್ಮ ! "

ಬಾಳಣ್ಣ ಕಂಠತುಂಬಿ ಕೇಳಿದನು.

" ಅಣ್ಣ ! ನನ್ನಿಂದ ತಪ್ಪಾಯಿತು ಬಿಡು. ಈ ತಮ್ಮಂದಿರು ನನಗಾಗಿ ಎಷ್ಟು ಕಷ್ಟಬಟ್ಟರು ನೋಡು. ಅದು ನೆನಪಾಗಿ........

" ನಿನ್ನ ಸೇವೆ, ತಂದೆಯ ಸೇವೆ ಅಲ್ಲವೇನು ಅಣ್ಣ !

ತಂದೆಯ ನೆನಪಾಗಿ ಎಲ್ಲರೂ ಒಂದು ಕ್ಷಣ ಮೌನವಾಗಿ ಕಣ್ಣೀರು ಹಾಕಿದರು.

ಆ ಒಂದು ನಿಮಿಷದಲ್ಲಿ ಪವಿತ್ರವಾದ ಸೋದರಿಕೆಯ ಗಂಗಾಜಲವು ಹೃದಯವನ್ನು ತೊಳೆದು ಕಶ್ಮಲವನ್ನು ಕೊಚ್ಚಿತು.

ಆ ಕೂಡಲೇ ರಾಜಣ್ಣನು ವಿಠ್ಠಲನೊಡನೆ ಕೇಶವರಾಯರ ಊರಿಗೆ ಹೊರಟುಬಿಟ್ಟನು.

ಭೀಮಣ್ಣನ ಜ್ವರ ಅವನಲ್ಲಿ ಕಾತರವನ್ನು ಉಂಟುಮಾಡಿತ್ತು. ಇಲ್ಲದ ಭಯ ಅವನನ್ನು ಆವರಿಸಿತ್ತು.

ಅಕಸ್ಮಾತ್ತಾಗಿ ಬಂದ ಅಳಿಯನನ್ನೂ, ರಾಜಣ್ಣನನ್ನೂ ನೋಡಿದ ಕೇಶವರಾಯರ ಮುಖ ಗಂಭೀರವಾದರೂ ಅವರು ಅದನ್ನು ತೋರಗೊಡದೆ ಪ್ರೀತಿಯಿಂದ ಬರಮಾಡಿಕೊಂಡರು.

ವಿಠ್ಠಲನ ಮಕ್ಕಳು ಓಡಿಬಂದು ತಂದೆಯನ್ನು ಬಿಗಿದಪ್ಪಿದವು. ಅವರಿಗೆ ರಾಜಣ್ಣನ ಪರಿಚಯವಿರಲಿಲ್ಲ.

" ನಿಮ್ಮ ಕಕ್ಕ ಬಂದಿದ್ದಾನೆ ನೋಡಿರೋ ನಿಮ್ಮ ಚಿಗಪ್ಪ ! "

ಎಂದು ವಿಠ್ಠಲನು ನುಡಿದ ಕೂಡಲೇ ಹಿರಿಯ ಮಗು

" ಕಾಕಾ ! ಕಾಕಾ ! " ಎಂದು ಕುಣಿದಾಡಿತು.

ಊಟವಾಗುವ ವರೆಗೆ ರಾಜಣ್ಣ ಯಾವ ಮಾತನ್ನೂ ಆಡಲಿಲ್ಲ.

ಕೇಶವರಾಯರು ಕೂಡ ಮಗಳ ಬಗ್ಗೆ ಅವರ ಮುಂದೆ ಆ ವರೆಗೆ ಯಾವ ಸಂತಾಪವನ್ನೂ ವ್ಯಕ್ತಮಾಡಲಿಲ್ಲ.

ಊಟವಾಗಿ ಎಲ್ಲರೂ ಕೋಣೆಯಲ್ಲಿ ವಿರಾಮವಾಗಿ ಕುಳಿತ ಕೂಡಲೇ ರಾಜಣ್ಣ ಮಾತು ತೆಗೆದ.

" ನಾನು ಅತ್ತಿಗೆಯನ್ನು ಕರೆಯಲು ಬಂದಿದ್ದೇನೆ. ರಾಯರೆ !

" ನಿಮ್ಮ ವಸ್ತುವನ್ನು ನಿಮ್ಮ ಮನೆಗೆ ಕಳಿಸಲು ನನ್ನಲ್ಲಿ ಯಾವ ಅಭ್ಯಂತರವೂ ಇಲ್ಲ ರಾಜಣ್ಣ! ಆದರೆ ಇದರಿಂದ ಅವಳ ಅಪವಾದ ಹೋದಂತಾಗಲಿಲ್ಲ. ಅವಳು ಕಳ್ಳಿಯಾಗಿ ನಿಮ್ಮ ಮನೆಗೆ ಹೇಗೆ ಬರಬೇಕು ಹೇಳು ?

" ವಿಷಮವೇಳೆಯಲ್ಲಿ ಏನೆಲ್ಲ ಆಗುತ್ತವೆ ಬಿಡಿರಿ. ಅದನ್ನೇ ಗುದ್ದಿದಂತೆ ಮಾಡುವದರಲ್ಲಿ ಯಾವ ಅರ್ಥವೂ ಇಲ್ಲ. ಈಗ ಎಲ್ಲರಿಗೂ ಪಶ್ಚಾತ್ತಾಪವಾಗಿದೆ.

" ಇದರಿಂದ ಏನು ಪ್ರಯೋಜನ! ನಮ್ಮ ಮರ್ಯಾದೆ ಮಾತ್ರ....

" ಆಗಿಹೋದ ಮಾತನ್ನೇ ಮತ್ತೆ ಮತ್ತೆ ಆಡುವದರಲ್ಲಿ ಅರ್ಥವೂ ಇಲ್ಲ.

" ನನ್ನ ಮಗಳು ಕಳ್ಳಿಯಾಗುವದು ಅರ್ಥವಿಲ್ಲದ ಮಾತೇ?

" ಈ ಪ್ರಶ್ನೆಯನ್ನು ಬಹಳಷ್ಟು ಜಗ್ಗಬೇಡಿರೆಂದು ನಾನು ನಿಮಗೆ ಕೈಮುಗಿದು ಕೇಳಿಕೊಳ್ಳುತ್ತೇನೆ. ಭೀಮಣ್ಣನ ಪ್ರಕೃತಿ ತೀರಾ ನಾಜೂಕಾಗಿದೆ. ಅವನ ಆಜ್ಞೆಯನ್ನು ನಾವು ಪಾಲಿಸಲೇಬೇಕಾಗಿದೆ.

" ಇದು ತೀರಾ ವಿಲಕ್ಷಣವಾಗಿದೆ. ಈ ಪ್ರಸಂಗ ನಡೆದಾಗ ಹಿರಿಯಗೌಡರು ಕೂಡ ಇದ್ದರಂತೆ !

" ಎಲ್ಲರೂ ಇದ್ದರು. ಏನೆಲ್ಲ ಆಯಿತು. ಈಗ ಆ ಪ್ರಶ್ನೆಯನ್ನು ಬೆದಕಬೇಡಿರಿ. ಗಾಡಿ ಹೊರಗೆ ಸಿದ್ಧವಾಗಿಯೇ ಇದೆ. ಸಂಜೆಯಾಗುವದರ ಒಳಗಾಗಿ ನಾವು ಹಳ್ಳಿಯನ್ನು ಮುಟ್ಟಬೇಕಾಗಿದೆ. ದಯವಿಟ್ಟು ನೀವು ಅಡ್ಡಬರಬೇಡಿರಿ.

" ನಮ್ಮ ಮಗಳು ಬೀದಿಯ ಭಿಕಾರಿಯೇನಲ್ಲ ರಾಜಣ್ಣ ? ಅವಳನ್ನು ಅಂತಃಕರಣದಿಂದ ನೋಡುವ ಹಿರಿಯರೇ ಇಲ್ಲದ ಮನೆಗೆ ನಾನು ಮಗಳನ್ನು ಹೇಗೆ ಕಳಿಸಲಿ ಹೇಳು. ನನ್ನ ಮನೆಯಲ್ಲಿ ನನ್ನ ಮಗಳೇನು ಭಾರವಾಗುವದಿಲ್ಲ. ನಾಲ್ಕು ಗಂಡುಗಳ ಜೊತೆಗೆ ಇವಳು ಐದನೆಯ ಗಂಡುಮಗುವಾಗಿ ಇರುತ್ತಾಳೆ ತಿಳಿಯಿತಿಲ್ಲೊ.

" ಹಡೆದ ತಂದೆಯಾದ ನೀವು ಹೀಗೆ ಹೊಣೆಗೆಟ್ಟ ಮಾತುಗಳನ್ನು ಆಡಬೇಕೇ ಕೇಶವರಾಯರೆ! ಯಾವ ಗಂಭೀರಪ್ರಶ್ನೆಯೂ ಇಲ್ಲದಿರುವಾಗ ಇಲ್ಲದ ಪ್ರಶ್ನೆಗಳನ್ನು ಹುಟ್ಟಿಸಿಕೊಂಡು ವಾತಾವರಣವನ್ನು ಹದಗೆಡಿಸುವದು ನಿಮ್ಮ ಹಿರಿಯತನಕ್ಕೆ ಶೋಭಿಸುವ ವಿಷಯವಲ್ಲ.

ರಾಜಣ್ಣ ಗಂಭೀರವಾಗಿ ಹೇಳಿದ,

" ನನ್ನ ಮಗಳ ಬಗ್ಗೆ ಹೊಣಗೇಡಿಯಾಗಿ ಮಾತಾಡುತ್ತಿರುವದಿಲ್ಲ ಮಾರಾಯ ! ನಾನೇನು ಚಿಕ್ಕ ಮಗುವಲ್ಲ. ಆದರೆ ನಿಮ್ಮ ಮನೆತನದ ಪರಿಸ್ಥಿತಿಯೇ ಈಗ ಬೇರೆಯಾಗಿಬಿಟ್ಟಿದೆ. ಗೌಡರ ಮನೆಯಲ್ಲಿ ಹಿರಿಯರೇ ಇಲ್ಲವಾಗಿದ್ದಾರೆ, ಬೇಕಾದವರು ಬೇಕಾದ ಹಾಗೆ ಕಾರುಭಾರ ಮಾಡ ತ್ತಾರೆ.

ಕೇಶವರಾಯರು ಮತ್ತೆ ಪ್ರತಿಭಟಿಸಿದರು.

" ಗೌಡರ ಮನೆಯಲ್ಲಿ ಪುಂಡಪೋಕರಿಗಳೇ ಇದ್ದಾರೆ. ನಾವೆಲ್ಲ ಲಫಂಗರೇ ಇದ್ದೇವೆ. ನಮ್ಮ ಮನೆಗೆ ಹೆಣ್ಣುಕೊಡುವಾಗ ನೀವು ಇದನ್ನೆಲ್ಲ

ವಿಚಾರಿಸಬೇಕಾಗಿತ್ತು. ಪುಂಡನ ಕೈಹಿಡಿದ ನಿಮ್ಮ ಮಗಳು ಪುಂಡರ ಮನೆಯನ್ನು ತುಂಬಲೇ ಬೇಕಷ್ಟೇ ! ಏನು ಮಾತಾಡುತ್ತೀರಿ ರಾಯರೆ ! ಗೌಡರ ಮನೆಯೆಂದರೆ ನಿಮಗೆ ಇಷ್ಟು ಕೀಳವಾಯಿತೇ ?

ರಾಜಣ್ಣ ಉಗ್ರವಾಗಿ ಹೇಳಿದ.

ಈ ಮಾತುಗಳಲ್ಲಿ ವಿಠ್ಠಲನು ಯಾವ ಭಾಗವನ್ನೂ ವಹಿಸದ್ದರಿಂದ ಅಳಿಯನು ತಮ್ಮ ಪಕ್ಷದಲ್ಲಿಯೇ ಇರುವನೆಂದು ಕೇಶವರಾಯರಿಗೆ ಅನ್ನಿಸಿತು. ಅದಕ್ಕಾಗಿಯೇ ಅವರು ಕೂಡಲೇ ಜಗ್ಗದೆ ರಾಜಣ್ಣನಿಗೆ ಹೇಳಿದರು.

" ನನ್ನ ಮಾತುಗಳನ್ನು ತಪ್ಪಾಗಿ ತಿಳಿದುಕೊಂಡು ನೀನು ಸುಮ್ಮನೇ ಸಿಟ್ಟಿಗೇಳತೊಡಗಿದ್ದೀ ರಾಜಣ್ಣಾ ! ನೀನು ಮನೆಯ ಸಂಪರ್ಕವನ್ನು ಇಟ್ಟು ಕೊಂಡಿಲ್ಲ. ಮನೆಯಲ್ಲಿ ನಡೆಯುತ್ತಿರುವ ವಿದ್ಯಮಾನಗಳ ಪರಿಚಯವೇ ನಿನಗಿರುವದಿಲ್ಲ. ನಿನ್ನ ಅಣ್ಣಂದಿರು ನಿಮ್ಮನ್ನು ಕ್ರಮಬದ್ಧವಾಗಿ ಸುಲಿಯು ತ್ತಿರುವರೆಂಬುದೂ ನಿನಗೆ ತಿಳಿಯದಾಗಿದೆ. ಭೀಮಣ್ಣ ನಿಮ್ಮ ಆಸ್ತಿಯನ್ನು ತನ್ನ ಐಷ ಆರಾಮಕ್ಕೆ ಉಪಯೋಗಿಸಿಕೊಳ್ಳ ತೊಡಗಿದ್ದಾನೆ. ಬಳವಂತ ಗೌಡ ಆಸ್ತಿಯನ್ನೆಲ್ಲ ಅತ್ತೆಯಮನೆಗೆ ಸಾಗಿಸ ತೊಡಗಿದ್ದಾನೆ. ಇದನ್ನು ನೀವಿಬ್ಬರೂ ತಿಳಿಯಬೇಡವೆ ? ಇದನ್ನು ನಾನು ನಿನ್ನ ಹಿತಕ್ಕಾಗಿ ಹೇಳ ತೊಡಗಿದ್ದೇನೆ. ಇದು ಹೀಗೆಯೇ ನಡೆದರೆ ನೀವು ಬಯಲಿನಲ್ಲಿಯೇ ನಿಲ್ಲಬೇಕಾಗುತ್ತದೆ. ಇದರ ವಿಚಾರವನ್ನು ಮಾಡುವ ಸಮಯ ಬಂದಿದೆ."

ರಾಯರ ಭೇದನೀತಿಗೆ ಕೈಹಾಕಿದರು.

" ನಮ್ಮ ಅಣ್ಣಂದಿರು ಏನೇ ಮಾಡಲಿ. ಅವರು ನಮ್ಮ ಅಣ್ಣಂದಿರೇ ಆಗಿದ್ದಾರೆ. ನಮ್ಮ ಮನೆತನದ ಆಗುಹೋಗುಗಳಲ್ಲಿ ತಲೆಹಾಕುವ ಅಧಿಕಾರ ನಿಮಗಿರುವದಿಲ್ಲ. ದಯವಿಟ್ಟು ಈ ಮಾತುಗಳನ್ನು ನನ್ನಮುಂದೆ ಹೇಳ ಬೇಡಿರಿ. ನನಗೆ ನನ್ನ ಅಣ್ಣಂದಿರ ಮೇಲೆ ಅಪ್ರತಿಮ ವಿಶ್ವಾಸವಿದೆ

" ಇದು ಆತ್ಮ ಘಾತುಕವಾಗಿದೆ.

" ಅದು ಏನೇ ಆದರೂ ನಮ್ಮ ವಿಷಯವಾಗಿದೆ.

" ಆದರೂ ಇದು ನನ್ನ ಮಗಳ ಭವಿತವ್ಯದ ಮಾತಾಗಿದೆ. ಈ ಮಾತುಗಳನ್ನು ಆಡುವ ಅಧಿಕಾರವು ನನಗೆ ತುಂಬಾ ಇದೆ.

" ಇದನ್ನು ತಿಳಿದುಕೊಳ್ಳಲು ನಿಮ್ಮ ಅಳಿಯ ಸಮರ್ಥನೇ ಆಗಿದ್ದಾನೆ ಎಂದ ರಾಜಣ್ಣ ವಿಠ್ಠಲನ ಕಡೆಗೆ ನೋಡಿದ.

ವಿಠ್ಠಲನು ನಿರ್ವಿಕಾರಭಾವದಿಂದ ಮಕ್ಕಳೊಡನೆ ಆಟವಾಡುತ್ತಿದ್ದ.

ಅವನು ಈ ಮಾತುಗಳನ್ನು ಕೇಳುತ್ತಿದ್ದರೂ ಕೇಳದವನಂತೆ ಇದ್ದ. ಇದರಿಂದ ಕೇಶವರಾಯರಿಗೆ ತೃಪ್ತಿಯಾಯಿತು.

" ನಾನು ಸ್ಪಷ್ಟವಾಗಿ ಹೇಳುತ್ತೇನೆಂದು ಸಿಟ್ಟಾಗಬೇಡ ರಾಜಣ್ಣ ! ಸಧ್ಯದ ಪರಿಸ್ಥಿತಿಯಲ್ಲಿ ನನಗೆ ಮಗಳನ್ನು ಕಳಿಸಿಕೊಡುವ ಇಷ್ಟವಿಲ್ಲ.

" ಕೇಶವರಾವ್ !

" ಇದರಲ್ಲಿ ಎರಡನೇ ಮಾತಿಲ್ಲ. ನನಗೆ ನನ್ನ ಮಗಳ ಗೌರವ ರಕ್ಷಣೆ ಮಾಡಬೇಕಾಗಿದೆ. ನನ್ನ ಮನೆತನದ ಮರ್ಯಾದೆಯನ್ನು ಕಾಪಾಡ ಬೇಕಾಗಿದೆ.

" ಮಗಳನ್ನು ಮನೆಯಲ್ಲಿ ಕುಳ್ಳಿರಿಸಿಕೊಳ್ಳುವದು ಮರ್ಯಾದೆಯ ಲಕ್ಷಣವೆಂದು ಹೇಳುತ್ತೀರಾ ? ನಿಮ್ಮ ಮರ್ಯಾದೆಯ ವಿಚಾರವೇ ತಿರುವು ಮುರುವಾಗಿದೆ. ನಾನು ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ದಯವಿಟ್ಟು ಅತ್ತಿಗೆಯನ್ನು ಕಳಿಸಿಕೊಡಿರಿ.

" ಸಾಧ್ಯವಿಲ್ಲ ರಾಜಣ್ಣ !

" ಹೀಗನ್ನಬೇಡಿರಿ, ಕೇಶವರಾವ್ !

" ಖಂಡಿತವಾಗಿ ಕಳಿಸಿಕೊಡುವದಿಲ್ಲ. ಮತ್ತೆ ಮತ್ತೆ ಅದೇ ಮಾತನ್ನು ಕೇಳುವದರಲ್ಲಿ ಅರ್ಥವಿಲ್ಲ.

" ನಾನು ಅತ್ತಿಗೆಯನ್ನು ಒಂದು ಮಾತು ಕೇಳುತ್ತೇನೆ.

" ಅವಳು ಹೇಳಿದ ಮಾತುಗಳನ್ನೇ ನಾನು ಹೇಳುತ್ತಲಿದ್ದೇನೆ.

" ಅವರಿಗೆ ನಮ್ಮ ಮನೆಗೆ ಬರಲು ಇಷ್ಟವಿಲ್ಲವೆ ?

" ಹೇಳಿದೆನಲ್ಲ.

ಈ ಮಾತುಗಳನ್ನು ಕೇಳಿದ ವಿಠ್ಠಲನು ಚಟ್ಟನೇ ಎದ್ದು ಮಕ್ಕಳನ್ನು ಬದಿಗೆ ಸರಿಸಿದನು. ಅವನ ಹುಬ್ಬು ಗಂಟಿಕ್ಕಿದವು.

ಅವನು ಕೂಡಲೇ ಆಳನ್ನು ಕೂಗಿ ಕರೆದು ಹೇಳಿದನು.

" ಬಂಡಿಗೆ ಎತ್ತುಗಳನ್ನು ಹೂಡು. ಒಳಗೆ ಹೋಗಿ ಚಿಕ್ಕಗೌಡತಿ ಯರ ಸಾಮಾನುಗಳನ್ನು ತೆಗೆದುಕೊಂಡು ಗಾಡಿಯಲ್ಲಿಡು.

ಗಾಡಿಯ ಆಳು ಎತ್ತುಗಳ ಕೊರಳಿಗೆ ನೊಗವನ್ನು ಹೂಡಲು ಸರ್‍ರನೇ ಎದ್ದನು.

" ನಾಚಿಕೆ ಇಲ್ಲದ ಮಾತುಗಳನ್ನಾಡಿ ಯಾರ ಮನೆಗೆ ಬೆಂಕಿ ಹಚ್ಚ ಬೇಕೆಂದು ಮಾಡಿದ್ದೀರಿ ಮಾವಾ ! ಇವಳು ಬರದಿದ್ದರೆ ಇವಳ ಹೆಡಮುರಿಗೆ

ಯನ್ನು ಬಿಗಿದು ಬಂಡಿಯಲ್ಲಿ ಬಿಗಿದುಕೊಂಡು ಹೋಗುತ್ತಾನೆ. ಸರಳಾ ! ಹೊರಬೀಳು.

ವಿಠ್ಠಲ ಒಳಗೆ ನಿಂತಿರುವ ಸರಳಾನ ಕಡೆಗೆ ಮುಖಮಾಡಿ ಕೂಗಿದನು.

" ಅಯ್ಯಯ್ಯ ! ನನ್ನ ಸುತ್ತ ಯಾಕ ! ನಾನು ಹೊರಟೇನಿಂತಿದ್ದೇನೆ.

ಎನುತ್ತ ಸರಳಾ ಮಗುವನ್ನು ಕಂಕುಳಲ್ಲಿ ಕುಳ್ಳಿರಿಸಿಕೊಂಡು ಹೊರ ಬಿದ್ದಳು.

ಆ ದಿನ ಸಂಜೆಯ ಮುಂದೆ ಸರಳಾ ಮನೆಸೇರಿದಾಗ ಅವಳಿಗೆ ಎಲ್ಲ ರಿಂದ ರಾಜೋಪಚಾರವಾಯಿತು.

ಕಾಶೀಬಾಯಿ ಅವಳನ್ನು ತಂಗಿಯ ಹಾಗೆ ಕಾಣತೊಡಗಿದಳು.

ಕಾಂತಾಬಾಯಿ ಈ ಪ್ರೀತಿಯ ಪ್ರದರ್ಶನದಲ್ಲಿ ಅಕ್ಕನಿಗಿಂತ ಹಿಂದೆ ಬೀಳಲಿಲ್ಲ.

ಕೃತ್ರಿಮ ವಾತಾವರಣವಾಗಿದ್ದರೂ ಅದರಲ್ಲಿ ಒಂದು ರೀತಿಯ ಏಕ ಸೂತ್ರತೆಯ ಭಾವ ಮೂಡಿತು.

ಭೀಮಣ್ಣ ರಾಜಣ್ಣನನ್ನು ಕೃತಜ್ಞೆಯಿಂದ ನೋಡಿದನು.

ಆದರೆ ರಾಜಣ್ಣನಿಗೆ ಮಾತ್ರ ಅನೇಕ ಸಂಗತಿಗಳ ಅರಿವಾಗಿದ್ದರಿಂದ ಅವನಲ್ಲಿ ವ್ಯಥೆಯೇ ಮೂಡಿತು.

ಈ ವ್ಯಥೆಯಲ್ಲಿಯೇ ತಾನು ಒಂದೆರಡು ದಿನಗಳಲ್ಲಿ ಹೋಗ ಬೇಕಾಗುವದೆಂದು ಅವನು ತುಂಬಾ ಖಿನ್ನನಾದನು. ಆ ಕೂಡಲೇ ಮಕ್ಕಳಿಂದ ಕಿಲಿಬಿಲಿಯಾದ ಅವನ ತುಂಬಿದ ಮನೆ ಅವನಿಗೊಂದು ಅಪೂರ್ವ ಶಾಂತಿಯನ್ನು ದಯಪಾಲಿಸಿತು.

## ೧೬

ತುಂಬಿದ ಮನೆಯು ತುಂಬಿದಂತೆಯೇ ಇತ್ತು.

ಮಕ್ಕಳೆಲ್ಲ ಸಂತೋಷದಿಂದ ಆ ಮನೆಯಲ್ಲಿ ಆಟವಾಡುತ್ತಿದ್ದವು. ನಗುತ್ತಿದ್ದವು. ಕೆಲೆಯುತ್ತಿದ್ದವು.

ಹೆಣ್ಣುಮಕ್ಕಳಲ್ಲಿ ಎಲ್ಲರೂ ಸಮಾಧಾನದ ಸೋಗಿನಲ್ಲಿಯೇ ಒಬ್ಬರ ನ್ನೊಬ್ಬರು ನೋಡುತ್ತಿದ್ದರು.

ಈ ನೋಟದ ಕಣ್ಣು ಕುರುಡಾಗಿತ್ತು.

ಇವರೆಲ್ಲ ಗಂಡಂದಿರ ಆಜ್ಞೆಯಂತೆ ಸಮಾಧಾನವನ್ನು ತೋರುತ್ತಿದ್ದರೇ ವಿನಾ ಅವರ ಅಂತರಂಗಗಳಲ್ಲಿ ಸಿಡಿಮದ್ದಿನ ಹೊಗೆ ಹಾಯುತ್ತಿತ್ತು.

ಭೀಮಣ್ಣನ ಆರೋಗ್ಯಕ್ಕೆ ಅಂಜಿ ಈ ನಾಟಕವು ಪ್ರಾರಂಭ ವಾಗಿತ್ತು.

ಈ ಅಬ್ಬರದಲ್ಲಿ 'ಭೀಮಣ್ಣ'ನದೂ ರಾಜಕೀಯವಿತ್ತೆಂದು ರಾಜಣ್ಣ ನಿಗೆ ತಿಳಿದಾಗ ಅವನಿಗೆ ಅತ್ಯಂತ ವ್ಯಥೆಯಾಯಿತು.

ಅಂತಃಕರಣದ ಆವಿರ್ಭಾವದಲ್ಲಿ ಹೃದಯದ ಬಾಗಿಲು ಮುಚ್ಚುವದು ದುರ್ದೈವದ ಮಾತೆಂದು ಅವನಿಗೆ ತೋರತೊಡಗಿತು.

ಒಂದು ಕಾಲಕ್ಕೆ ಭೀಮಣ್ಣನು ಮನೆತನದ ಅಭಿಮಾನಿಯಾಗಿ ಅಣ್ಣತಮ್ಮಂದಿರಿಗಾಗಿ ಪ್ರಾಣಾರ್ಪಣೆಯನ್ನು ಮಾಡಲು ಸಿದ್ಧನಿರುತ್ತಿದ್ದ ಸಂಗತಿಯು ರಾಜಣ್ಣನ ಸ್ಮೃತಿಪಟಲದ ಮೇಲೆ ಹಾಯ್ದು ಹೋಯಿತು. ಇಂಥ ಭೀಮಣ್ಣನು ಈಗ ನಮ್ಮಿಂದ ಸಿಡಿದುಹೋಗುತ್ತಿರುವದು ದೈವದ ದುರ್ವಿಲಾಸವೆಂದೇ ಅವನು ಭಾವಿಸಿದನು.

ಗೌಡರ ಮನೆತನದ ಪುಣ್ಯ ತೀರಿತೆಂದೇ ಅವನ ಅಭಿಪ್ರಾಯ ವಾಯಿತು.

ಅಣ್ಣತಮ್ಮಂದಿರು ಪರಸ್ಪರ ವಂಚಕರಾಗಿರುವ ಮಾತಂತೂ ಅವನ ಜೀವಾಶವನ್ನೇ ಭೇದಿಸಿತು. ಒಬ್ಬರಿಗೊಬ್ಬರು ಅರಿಯದಂತೆ ಕಳ್ಳಗಂಟು ಮಾಡಿಕೊಂಡು ಇನ್ನೊಬ್ಬರನ್ನು ಮುಳುಗಿಸುವ ಹೊಂಚುಹಾಕುತ್ತಿರುವ ಸುದ್ದಿಯನ್ನು ಕೇಳಿ ಅವನ ಎದೆಯಲ್ಲಿ ಪಂಜು ಹಚ್ಚಿದಂತಾಯಿತು.

ಅಂಥ ಭೀಮಣ್ಣನು ಇಂಥವನು ಆಗಬೇಕೆ? ರಾಜಣ್ಣನ ಹೃದಯ

ಹಿಂಡಿತು. ಸ್ಮೃತಿಪಥ ಹಿಂದಿನ ದಾರಿಯಲ್ಲಿ ನಡೆದು ನಿಂತ ಚಿತ್ರಗಳನ್ನು ಕಾಣಹತ್ತಿತು.

ಬಳವಂತಗೌಡನೊಮ್ಮೆ ಅಂಬಿಗರ ನಿಂಬಿಯನ್ನು ಸ್ವಾಭಾವಿಕ ಚಪಲದಿಂದ ಮಾತಾಡಿ ಅವಳೊಡನೆ ಸ್ನೇಹದಿಂದ ಇರಲು ಬಯಸಿದ. ಅವಳು ಉತ್ತೇಜನ ಕೊಟ್ಟದ್ದರಿಂದ ಗೌಡನು ಅವಳೊಡನೆ ಸಲಿಗೆಯಿಂದಲೇ ವರ್ತಿಸತೊಡಗಿದನು.

ಏರಿಕೆಯ ವಯಸ್ಸು ಬಳವಂತಗೌಡನದು ಆಗ. ನಿಂಬಿ ಜವ್ವನತಿ. ತುಂಬಿದ ಮೈ. ಹರೆಯದ ಮೋಡಿ. ಇವುಗಳಿಗೆ ಗೌಡರ ಹಿರಿಯ ಮಗ ಮಾರುಹೋಗಿದ್ದನು.

ಊರ ಗೌಡರ ಕೃಪಾಪ್ರಸಾದವನ್ನು ದೂರ ಬಿಸುಟುವಷ್ಟು ಅಜ್ಞಳಾಗಿರಲಿಲ್ಲ ನಿಂಬಿ. ಅವಳು ತನ್ನ ಹಾವಭಾವಗಳಿಂದ ಅವನನ್ನು ತನ್ನೆಡೆಗೆ ಸೆಳೆಯುತ್ತಿದ್ದಳು.

ನಿಂಬಿಯ ಸೋದರಮಾವ ಅವಳಿಗಾಗಿ ಮೀಸಲಿದ್ದವನು ಈ ಆಟವನ್ನೆಲ್ಲ ನೋಡಿ ಕಿಡಿಕಿಡಿಯಾದನು. ನಿಂಬಿಯನ್ನು ಕರೆದು ಕೇಳಿಯೇ ಬಿಟ್ಟನು.

" ಗೌಡನ ಮಗನೊಡನೆ ಯಾಕೆ ನಿಂಗೆ ಹುಡುಗಾಟ ?

" ಅನ್ನೇ! ಹಲ್ಲು ತೆಗೆದರೆ ನಾ ಏನ ಮಾಡಾಕಾ ಆಗತೈತೆ. ಮಂಗ ನಾಂಗ ನೋಡಕೋತನೀ ಯಾಕ ಸುಮ್ಮಾಕ ನಿಂತಿ ಹೇಳು ?

ಸೋದರಮಾವ ನಿರ್ಧರಿಸಿದನು. ಗೌಡನ ಮಗನಾದ ಬಲವಂತನಿಗೆ ಅಂಬಿಗರ ಕೈ ತೋರಿಸಬೇಕೆಂದು ನಿಶ್ಚಯಿಸಿದನು.

ಆ ದಿನ ಸಾಯಂಕಾಲ ಬಳವಂತ ಹೊಳೆಯ ಕಡೆಗೆ ನಡೆದಾಗ ದಾರಿಯಲ್ಲಿ ಇವನು ಅವನನ್ನು ಸಂಧಿಸಿದನು. ಅವನ ಕೈಯಲ್ಲಿ ಉದ್ದವಾದ ಒಂದು ಕೋಲು ಇತ್ತು.

" ಏನು ಗೌಡರೆ, ಸಂಜೆ ಹಂಪಾಗ ಯಾಕಡೆಗೆ ?

" ನೀನು ಯಾರೋ ಅದನ್ನು ಕೇಳಲಿಕ್ಕೆ. ನಾನು ಎಲ್ಲಿಯಾರೂ ಹೋಗುತ್ತೇನೆ.

" ಇದು ಚಲೋ ಬುದ್ದಿ ಅಲ್ಲ ಗೌಡರೆ. ನಿಂಬಿ ನನ್ನ ಹ್ಯಾಂತ್ರಿ. ಇನ್ನೊಬ್ಬರ ಹ್ಯಾಂತ್ರಿ ನಿಮಗೆ ತಂಗಿ. ತಾಯಿ ಸಮಾನ, ಸುಮ್ಮಾಕ ಮನೀ ಕಡೆಗೆ ತಿರುಗಿರಿ.

ಊರ ಗೌಡನಿಗೆ ಈ ಮಾತುಗಳಿಂದ ಅವಮಾನವಾಯಿತು. ಅವನು ಎದುರಿಗೆ ನಿಂತ ಅವನ ಕೆನ್ನೆಗೊಂದು ಕೊಟ್ಟು,

" ನಿಂಬಿ ಗಂಡ ಆಗೂ ಮಗಾ ಏನ ನೀ? ಅವಳ ನಾಯಿ ಆಗೂ ಯೋಗ್ಯತಾ ಇಲ್ಲ. ಹೋಗು ಕತ್ತೆಯ ಮಗನೆ!

ನಿಂಬಿಯ ಸೋದರಮಾವನಿಗೆ ತಡೆಯಲಾಗಲಿಲ್ಲ. ಅವನು ಕೈಯೊಳಗಿನ ಕೋಲಿನಿಂದ ಬಳವಂತಗೌಡನನ್ನು ಒಳಿತಾಗಿ ಥಳಿಸಿಬಿಟ್ಟನು.

ಬಳವಂತಗೌಡ ಹಣ್ಣುಹಣ್ಣಾಗಿ ಮೇಲಕ್ಕೆದ್ದಾಗ ತನ್ನನ್ನು ಈ ಸ್ಥಿತಿಗೆ ತಂದವನು ಮಾಯವಾಗಿದ್ದನು.

ಅವನು ಕರಕರ ಹಲ್ಲು ತಿನ್ನುತ್ತ ಮನೆಗೆ ಹೋಗಿ ತಮ್ಮ ಭೀಮ ರಾಯನ ಮುಂದೆ, ನಡೆದ ಸಂಗತಿಯನ್ನು ನಿವೇದಿಸಿದನು.

" ಅಯ್ಯೋ! ಅಣ್ಣಾ! ನಿನ್ನ ಮೇಲೆ ಕೈಮಾಡಿದವನು ಈ ಹಳ್ಳಿಯ ಜೀವಂತವಾಗಿರುವದೆಂದರೇನು?

ಎನ್ನುತ್ತ ದಿಗ್ಗನೇ ಎದ್ದು ದೊಣ್ಣೆಯನ್ನು ತೆಗೆದುಕೊಂಡು ಅಣ್ಣ ನೊಡನೆ ನಿಂಬಿಯ ಮನೆಗೆ ನಡೆದನು.

ಮನೆಯ ಒಳಗೆ ನಿಂಬಿ, ಅವಳ ಸೋದರಮಾವ ಯುವಕ, ತಂದೆ ಇದೇ ಮಾತನ್ನು ಆಡುತ್ತ ಹೆದರಿ ಕುಳಿತಿದ್ದರು. ಅವರು ಬಾಗಿಲವನ್ನು ಮುಚ್ಚಿಕೊಂಡು ಒಳಗೆ ಮಾತಾಡುತ್ತಿರುವದು ಹೊರಗೆ ನಿಂತ ಈ ಸಹೋದರ ರಿಗೆ ಚೆನ್ನಾಗಿ ಕೇಳಿಸುತ್ತಿತ್ತು.

ಭೀಮರಾಯನು ರೌದ್ರದನಿಯಲ್ಲಿ ಕೂಗಿದನು. ದಬದಬ ಬಾಗಿಲ ಒಡೆದನು.

" ಬಾಗಿಲ ತೆಗೆಯುತ್ತೀಯೋ ಇಲ್ಲವೋ ಬಾಗಿಲ ಮುರಿಯ ಬೇಕೋ?" ಭೀಮರಾಯ ಗುಡುಗಿದನು.

ಒಳಗಿನವರು ಈ ದನಿಯನ್ನು ಕೇಳಿ ಗತಪ್ರಾಣರೇ ಆದರು.

ನಿಂಬಿಯ ತಂದೆ ಸಾವಕಾಶವಾಗಿ ಬಾಗಿಲ ತೆಗೆದು ನಮ್ರನಾಗಿ ಕೇಳಿದನು.

" ಇದೇನು ದಣಿಯರೆ? ಬಡವರ ಮನೆಗೆ?

" ಆ ಮಗನು ಎಲ್ಲಿದ್ದಾನೆ ಹೇಳು?

" ಯಾರು?

" ಗೊತ್ತಿದ್ದರೂ ಗೊತ್ತಿಲ್ಲದವನಂತೆ ನಟಿಸುತ್ತೀಯಾ ಮುದುಕಾ?"

ಎಂದು ಮುದುಕನನ್ನು ತಳ್ಳಿ ಅಲ್ಲಿಯೇ ನಡಗುತ್ತ ಸಿಂತ ನಿಂಬಿಯನ್ನು ಗದರಿಸಿ ಕೇಳಿದನು.

" ನಿನ್ನ ಗಂಡನು ಎಲ್ಲಿ ?

ನಿಂಬಿ ಗದಗದ ನಡುಗುತ್ತ ಕೋಳಿಗಳನ್ನು ಮುಚ್ಚುತ್ತಿದ್ದ ದೊಡ್ಡ ಬುಟ್ಟಿಯ ಕಡೆಗೆ ಕೈಮಾಡಿ ತೋರಿದಳು.

ಬಳವಂತಗೌಡ ಬುಟ್ಟಿಯನ್ನು ತೆಗೆದ. ಒಳಗೆ ದೊಡ್ಡ ಕೋಳಿಯಂತೆ ಮುದುಡಿಕೊಂಡು ನಿಂಬಿಯ ಸೋದರಮಾವ ಕುಳಿತಿದ್ದ.

ಅವನ ಪಾಡು ನಾಯಿಯ ಪಾಡಾಯಿತು. ಆ ದಿನ ಅವನು ಸಾಯತಕ್ಕವನೆ. ಆದರೆ ನಿಂಬಿಯ ಮಧ್ಯಸ್ಥಿಕೆಯಿಂದ ಅವನು ಪ್ರಾಣ ಸಹಿತ ಪಾರಾದನು.

ಈ ಕಥೆಯನ್ನು ಬಳವಂತಗೌಡ ಅತ್ಯಂತ ಅಭಿಮಾನದಿಂದ ಆಗಾಗ ಹೇಳುತ್ತಿದ್ದನು.

ಅಣ್ಣನ ಅಭಿಮಾನಮೂರ್ತಿಯಾದ ಭೀಮಣ್ಣನು ಈಗ ಆ ಭಾವ ವನ್ನು ಕಳೆದುಕೊಂಡಿರುವದೇಕೆ ? ಯಾವ ಕಾರಣ ?

ಇಪ್ಪತ್ತು ವರುಷಗಳ ಹಿಂದೆ ಒಂದೇ ಸೂತ್ರದಲ್ಲಿ ಬದ್ಧವಾಗಿದ್ದ ಸೋದರಿಕೆ ದಿನಗಳೆದಂತೆ ನಡಿಲಾಗಿ ಈಗ ಉಜ್ಜಿಬೀಳುವ ಪರಿಸ್ಥಿತಿಗೆ ಬಂದೀತೇಕೆ ?

ತಂದೆ ಸತ್ತಾಗ ಭೀಮಣ್ಣ ತನ್ನ ಮೇಲೆ ತೋರಿದ ಅನಂತ ದಯೆ ಯನ್ನು ನೆನೆದಾಗ ರಾಜಣ್ಣನ ಕಣ್ಣಲ್ಲಿ ನೀರೂರಿತು. ಬಾಳಣ್ಣ ತನ್ನನ್ನು ಮಗುವಿನಂತೆ ತನ್ನ ಹತ್ತಿರವೇ ತನ್ನ ಹಾಸಿಗೆಯಲ್ಲಿಯೇ ಮಲಗಿಸಿಕೊಳ್ಳು ತ್ತಿರುವದು ಅವನಲ್ಲಿ ಈಗಲೂ ಪ್ರೀತಿಯ ರಸವನ್ನೇ ಹರಿಯಿಸಿತು.

ತಾಸಿಲ್ಲದೆ ಬಾಳಣ್ಣ ಊಟಮಾಡುತ್ತಿರಲಿಲ್ಲ. ತಾಸಿಲ್ಲದೆ ಭೀಮಣ್ಣ ತಿನ್ನುತ್ತಿರಲಿಲ್ಲ. ತಾಸಿಲ್ಲದೆ ವಿಠ್ಠಲ ಎಂದೂ ಹೊರಗೆ ಹೋಗುತ್ತಿರಲಿಲ್ಲ.

ಈಗ ಆ ಭಾವ ನಷ್ಟವಾಯಿತೇಕೆ ?

ಇದಕ್ಕೆ ಅತ್ತಿಗೆಯರು ಕಾರಣವಾಗಿರಬಹುದೆ ?

ಆದರೆ ಇದನ್ನು ನಡೆಯುಗೊಡುವದು ಯಾರ ತಪ್ಪು ? ಒಂದು ವೇಳೆ ಕೂಡಿನಡೆಯುವದು ಸಾಧ್ಯವಿಲ್ಲವೆಂದು ತೋರಿದಾಗ ನಮ್ಮ ಅಂತಃಕರಣ ವನ್ನು ಉಳಿಸಿಕೊಳ್ಳಲು ಅಣ್ಣಂದಿರು ಪ್ರಯತ್ನಿಸಬಾರದೇಕೆ ? ಈ ಸಂಕುಚಿತ

ಬುದ್ಧಿ ನಾಳೆಗೆ ದ್ವೇಷಬುದ್ಧಿಗೆ ಆಸ್ಪದ ಮಾಡಿಕೊಟ್ಟರೆ ಈ ಗೌಡರ ಮನೆ ತುಂಡುತುಂಡಾಗದೆ ಹೋದೀತೆ ?

ಆದರೆ ಹೆಣ್ಣುಮಕ್ಕಳು ಹೇಗೇ ಇರಲಿ ನನ್ನ ಅಣ್ಣಂದಿರ ಚರಿತ್ರ ವಾದರೂ ಶುದ್ಧವೆಲ್ಲಿದೆ ?

ಈ ಮಾತು ನೆನಪಾದಾಗ ಅವನ ಮುಖದಲ್ಲಿ ವ್ಯಂಗ್ಯವಾದ ನಗೆಯ ಸುಳಿಯೊಂದು ತೇಲಿಬಂದಿತು.

ನೀಲಿಯ ಪ್ರಕರಣವೇ ಇದಕ್ಕೆ ಕಾರಣವಾಗಿತ್ತು. ವಿಠ್ಠಲನು ನೀಲಿ ಯಿಂದ ಆಕರ್ಷಿತನಾಗಿ ಮನೆಯ ಮರ್ಯಾದೆಯನ್ನು ಕಳೆಯಬಹುದೆಂಬ ಸಂದೇಹದಲ್ಲಿ ಭೀಮಣ್ಣನ ಮುಂದೆ ಆ ದಿನ ಎಚ್ಚರಿಕೆಯ ಮಾತುಗಳನ್ನು ರಾಜಣ್ಣ ಹೇಳಿದ್ದ. ಆದರೆ ಈಗ ತಮ್ಮನ ಪ್ರೇಯಸಿಯನ್ನು ಅಣ್ಣನೇ ಆಳತೊಡಗಿ ಅವಳಿಗಾಗಿ ಅಪಾರ ಹಣವನ್ನು ವೆಚ್ಚಮಾಡುತ್ತಿರುವದು ಅವನಿಗೆ ವಿಚಿತ್ರವೆನ್ನಿಸಿತು. ಅವಮಾನವೆನ್ನಿಸಿತು. ಮುಖ ಕೆಳಗೆ ಮಾಡುವಂತೆ ಆಯಿತು ರಾಜಣ್ಣನಿಗೆ ?

ಈ ಮನೆತನದಲ್ಲಿ ಇಂಥದೂ ನಡೆಯಬೇಕೆ ?

ಭೀಮಣ್ಣನದು ಈ ಪರಿಸ್ಥಿತಿಯಾದರೆ ಅತ್ಯಂತ ಸಂಭಾವಿತನೆಂದು ಪ್ರಸಿದ್ಧನಾದ ಬಾಳಣ್ಣನದು ಇನ್ನೊಂದು ರೀತಿಯಾಗಿತ್ತು.

ಡೊಂಬರ ನಾಗಿಗಾಗಿ ಅವನು ರೊಕ್ಕವನ್ನು ಸೂರೆಮಾಡುತ್ತಿದ್ದ.

ಹಳ್ಳಿಹಳ್ಳಿ ತಂದೆಯೊಡನೆ ಹಗ್ಗದ ಮೇಲೆ ಆಟಹಾಕುತ್ತ ತಿರುಗು ತ್ತಿರುವ ನಾಗಿ ಈ ಹಳ್ಳಿಗೆ ಬಂದಾಗ ಗೌಡನ ಚಪಲ ಅವಳ ಮೇಲೆ ಹರಿದ ಸುದ್ದಿಯನ್ನು ರಾಜಣ್ಣ ಕೇಳಿದ್ದ.

ನಾಗಿ ಹೆಸರಿಗೆ ತಕ್ಕಹಾಗೆ ನಾಗಿಯೇ ಆಗಿದ್ದಳು. ಬೆಳ್ಳಗಿನ ಮೈ, ತೆಳುವಾದ, ಚಲುವಾದ ಮೈಕಟ್ಟು, ಮಣಿದಂತೆ ಇನ್ನು ಮಣಿಯುವ ಅಂಗಗಳು, ಆ ವಯ್ಯಾರ, ಆ ವಿನ್ಯಾಸ, ಆ ವಿಶಾಲವಾದ ಕಣ್ಣು ಬಳವಂತ ಗೌಡನನ್ನು ಆಕರ್ಷಿಸಿದ್ದವು.

ನಾಗಿಯ ತಂದೆ ಬೇರೆ ಹಳ್ಳಿಗೆ ಆ ಮೇಲೆ ಹೋಗಲೇ ಇಲ್ಲ. ಮಗಳಿಗೆ ಇಲ್ಲಿಯೇ ಆಶ್ರಯ ಸಿಕ್ಕದ್ದರಿಂದ ಅವನು ಇಲ್ಲಿಯೇ ತಳವೂರಿ ಬಿಟ್ಟನು.

ಅಂದಿನಿಂದ ನಾಗಿ ಊರಗೌಡರ ಪ್ರೇಯಸಿಯಾಗಿ ಮೆರೆಯ ತೊಡಗಿದಳು. ಅವಳ ಮನೆಯಲ್ಲಿ ನಾಲ್ಕು ಎಮ್ಮೆಗಳು ಕರೆಯತೊಡಗಿದವು.

ಅವಳ ಮೈಮೇಲಿದ್ದ ನಗನಟ್ಟುಗಳು ಗೌಡಕೆಯರ ಮೈಮೇಲೆ ಕೂಡ ಇರಬಹುದೋ ಎನ್ನುವ ಸಂದೇಹವಾಗುವಷ್ಟು ನಾಗಿಯ ಮೈಮೇಲೆ ಚಿನ್ನದ ಆಭರಣಗಳಿರುತ್ತಿದ್ದವು.

ರಾಜಣ್ಣನ ಗೆಳೆಯ ಈ ಸುದ್ದಿಯನ್ನೆಲ್ಲ ಹೇಳಿದ್ದ.

ರಾಜಣ್ಣನಿಗೆ ಇದು ಅನಾಚಾರವೆನ್ನಿಸಿತು. ಅಲ್ಲದೆ ಭೀಮಣ್ಣನಿಗಾಗಲಿ, ಬಾಳಣ್ಣನಿಗಾಗಲಿ ಈ ಆಸ್ತಿಯನ್ನು ಮನಸ್ಸಿಗೆ ಬಂದಹಾಗೆ ಹಾಳುಮಾಡುವ ಅಧಿಕಾರವೆಲ್ಲಿದೆ ? ಎಂದು ಅವನ ಮನಸ್ಸು ಕೂಗಿ ಕೇಳ ತೊಡಗಿತು.

ಕುಳಿತು ತಿಂದು ಕೊಬ್ಬುತ್ತಿರುವ ವಿಠ್ಠಲನ ಬಗ್ಗೆಯೂ ಅವನಲ್ಲಿ ಪ್ರತಿಭಟನೆಯೇ ಮೂಡಿತು. ಅವನು ಸುಮ್ಮನೆ ಕುಳಿತು ಮೂರು ನೂರು ರೂಪಾಯಿಗಳನ್ನು ಪಡೆದು ಹೆಂಡತಿಯ ಕೈಯಲ್ಲಿ ಕೊಡುವದು ವಿಪರೀತ ಬುದ್ಧಿ ಎನ್ನಿಸತೊಡಗಿತು.

ಬೇಕಾದಷ್ಟು ಹೊಲಗಳಿವೆ, ಭೂಮಿತಾಯಿ ಸಮೃದ್ಧಳಾಗಿದ್ದಾಳೆ. ಅವಳ ಸೇವೆಯಲ್ಲಿ ಇವನು ದುಡಿಯಬಾರದೇಕೆ ? ಇನ್ನೊಂದು ಹಳ್ಳಿಯಲ್ಲಿ ಮನೆಯನ್ನು ಹೂಡಿ ರೈತಬಾಳನ್ನು ಬಾಳಬಾರದೇಕೆ ? ಕೆಲಸವಿಲ್ಲದ ಮಿದುಳಿನಲ್ಲಿ ಭೂತಪ್ರವೇಶವಾಗುವಂತೆ ಇವನು ವಿರಾಮಜೀವನ ಸಾಗಿಸುತ್ತ ಕುಳಿತರೆ ಮುಂದೆ ಗತಿ ಯಾವುದು ?

ಸರಳಾನ ಗೊಂಬೆಯಾಗಿ ಇವನು ಕುಣಿಯಬೇಕೇಕೆ ? ಕೇಶವರಾಯರು ಹೀಗೆ ಮಾತಾಡಲು ಯಾವ ಧೈರ್ಯ ಬಂದಿರಬೇಕು ? ಅಳಿಯನ ಹೇಡಿತನವೇ ಅವರ ಧೈರ್ಯಕ್ಕೆ ಮೂಲವಾಗಿದ್ದು ಸ್ಪಷ್ಟವಿದೆ.

ಗೌಡರ ಮನೆತನದ ಆಗುಹೋಗುಗಳಲ್ಲಿ ಇನ್ನೊಬ್ಬರು ಕೈ ಹಾಕುವಂತಾಗಬೇಕೆ ?

ರಾಜಣ್ಣನಿಗೆ ತನ್ನ ಮನೆತನದ ಪುಣ್ಯದ ದೀಪ ಮಸುಕಾಗಿ ಉರಿಯ ತೊಡಗಿದಂತೆ ಭಾಸವಾಗತೊಡಗಿತು.

'ನಾವು ಕೂಡಿ ಉಳಿಯುವದು ಸಾಧ್ಯವಿಲ್ಲ ಕೂಡಿ ಅಳಿಯುವದೇ ಸಿದ್ಧಾಂತವಾಗಿದೆ.'

ರಾಜಣ್ಣ ಈ ಉದ್ಗಾರವನ್ನು ತೆಗೆದು ದೀರ್ಘವಾದ ನಿಟ್ಟುಸಿರನ್ನು ಸೂಸಿದ.

ಈ ಮನೆತನವನ್ನು ಉಳಿಸಲು ಒಂದೇ ದಾರಿ.